


# ಹೊಸತು

## ನೆಮ್ಮದಿಯ ನಾಳೆ ನಮ್ಮದು

ಪ್ಟೆಂಬರ್ ೧೯೯೯
ಲೆ ರೂ. ೧೦



ವಂದಿಪೆವು ನಿನಗೆ ಗಣನಾಥ
ಕೆ. ಎಲ್. ಗೋಪಾಲಕೃಷ್ಣ ರಾವ್



ಟೆಲಿಕಾಂ ಹಗರಣದ ಒಳತೋಟಿ
ಏಕಲವ್ಯ



ಬುದ್ಧನ ಇನ್ನೊಂದು ಕಥೆ
ಡಾ॥ ಮ. ನ. ಜವರಯ್ಯ

ಮುಂದಿನ ಸಂಚಿಕೆ
ಮಹಾತ್ಮ ಗಾಂಧಿ
ವಿಶೇಷಾಂಕ



ನೆನಪಿನಂಗಳದಲ್ಲಿ ಟಿಪ್ಪು
ಡಾ॥ ಎಸ್. ಚಂದ್ರಶೇಖರ್



ಗಿರೀಶ ಕಾರ್ನಾಡ
ಪ್ರೊ॥ ಜಿ. ಕೆ. ಗೋವಿಂದ ರಾವ್



ಕಸೋವೊ ಪ್ರಕರಣ - ಒಂದು ಎಚ್ಚರಿಕೆಯ ಗಂಟೆ
ಸೀಯಾರ್ಕೆ

# ಹೊಸತು

## ಒಳಗೇನಿದೆ.....




*ಚಿತ್ರಗಳು :* ಗುಜ್ಜಾರ್, ಮೋಹನ, ಹಾದಿಮನಿ, ಸುರೇಶ್
*ಮುಖಪುಟ ವಿನ್ಯಾಸ :* ನವಕರ್ನಾಟಕ ವಿನ್ಯಾಸ
*ಕಚೇರಿ ಸಹಕಾರ :* ಜಿ. ವಿ. ತೇಜೋವತಿ




'ಹೊಸತು' ಪತ್ರಿಕೆಯ ಮೊದಲ ಸಂಚಿಕೆ ಇದೇ ಜುಲೈ 31ರಂದು ಹೊರಬಂದಿತು. ಹಿಂದೆ 'ಸುಧಾ' ಪತ್ರಿಕೆಯ ಸಂಪಾದಕರಾಗಿದ್ದ ಶ್ರೀ ಇ. ಆರ್. ಸೇತುರಾಮ್ ಅವರ ಅಧ್ಯಕ್ಷತೆಯಲ್ಲಿ ಖ್ಯಾತ ಸ್ವಾತಂತ್ರ್ಯ ಹೋರಾಟಗಾರ, 80ರ ವಯಸ್ಸಿನಲ್ಲಿ ಯುವಕ ಚೇತನ ಹೊಂದಿರುವ ಶ್ರೀ ಎಚ್. ಎಸ್. ದೊರೆಸ್ವಾಮಿಯವರು ಅದನ್ನು ಬಿಡುಗಡೆ ಮಾಡಿದರು. ಹಲವು ಕ್ಷೇತ್ರಗಳಲ್ಲಿ ಸಕ್ರಿಯವಾಗಿರುವ ಪ್ರಾಧ್ಯಾಪಕ ಬರಗೂರು ರಾಮಚಂದ್ರಪ್ಪನವರು ಮೊದಲ ಸಂಚಿಕೆಯ ಹಿನ್ನೆಲೆಯಲ್ಲಿ ಪತ್ರಿಕಾ ಧರ್ಮ ಮತ್ತು ಸಾಂಸ್ಕೃತಿಕ ಆಯಾಮಗಳನ್ನು ಕುರಿತು ಉಪನ್ಯಾಸ ನೀಡಿದರು.

'ಹೊಸತು' ಪತ್ರಿಕೆಯಲ್ಲಿ ಹೊಸತೇನು, ಎಂಬ ಪ್ರಶ್ನೆಯನ್ನು ಹಾಕಿಕೊಂಡು ಶ್ರೀ ಎಚ್. ಎಸ್. ದೊರೆಸ್ವಾಮಿಯವರು ಅಂದು ಪ್ರತಿಪಾದಿಸಿದ ಅನೇಕ ವಿಚಾರಗಳು ಈ ಪತ್ರಿಕೆಯೂ ಸೇರಿದಂತೆ ಎಲ್ಲಾ ಪತ್ರಿಕೆಗಳೂ ಗಮನಿಸಲು ಯೋಗ್ಯವಾಗಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಸಂಗ್ರಹಿಸಲಾಗಿದೆ :

ನಂಬುಗೆಯನ್ನು ಕಳೆದುಕೊಂಡರೆ ಪತ್ರಿಕೆಯ ಅವತಾರ ಮುಗಿದಂತೆಯೇ; ಆದ್ದರಿಂದ ತನ್ನತನವನ್ನು ಕಾಪಾಡಿಕೊಳ್ಳಬೇಕು. ವಿಜ್ಞಾನ-ತಂತ್ರಜ್ಞಾನದ ಬಳಕೆಯ ಬಗ್ಗೆ ನನ್ನ ಅಭಿಪ್ರಾಯ ಪಡೆಯಲು ಟಿ.ವಿ. ಯವರು ಬಂದಿದ್ದರು. ಹೊಸ ಆರ್ಥಿಕ ನೀತಿಯ ಜಾಗತೀಕರಣದ ಮತ್ತು ವಿಜ್ಞಾನ-ತಂತ್ರಜ್ಞಾನದ ಬೆಳವಣಿಗೆಯ ಹೆಸರಿನಲ್ಲಿ ಹೊರದೇಶಗಳ ಕಂಪೆನಿಗಳು ಯಂತ್ರ ಸಮೇತ ಬಂದು ನಮ್ಮ ಉದ್ಯೋಗವನ್ನೆಲ್ಲ ಹಾಳುಮಾಡುತ್ತಿವೆ. ನಾವೇ ಮಾಡಿಕೊಳ್ಳಬಹುದಾದ, ಮಾಡಿಕೊಳ್ಳುತ್ತಿರುವ ಪದಾರ್ಥಗಳ ತಯಾರಿಕೆಗೆ ಅವರನ್ನು ಏಕೆ ಕರೆಯಬೇಕು? ಲಾಭ ದೋಚಿಕೊಂಡು ಹೋಗಲೇ ? ನಮ್ಮ ಗ್ರಾಮೋದ್ಯೋಗ, ಕೃಷಿ ಉದ್ಯೋಗ ಹಾಳು ಮಾಡಲೇ? ಎಂದು ಕೇಳಿದೆ.

ನಮ್ಮ ಪತ್ರಿಕೆಗಳು, ದೂರದರ್ಶನಗಳು ಈ ವಿಷಯ ಒಪ್ಪಿಕೊಳ್ಳುತ್ತವೆ. ಆದರೆ ಆಚರಣೆಯಲ್ಲಿ ವಿದೇಶಿ ಕಂಪೆನಿಗಳ ಟೂತ್‌ಪೇಸ್ಟ್, ಸೋಪುಗಳು, ಪೆಪ್ಸಿ ಪಾನೀಯಗಳು, ಚಿಪ್ಸ್ ಹೀಗೆ ಸಹಸ್ರಾರು ಪದಾರ್ಥಗಳ ಜಾಹಿರಾತನ್ನು ಪ್ರಕಟಿಸುತ್ತವೆ

ಈ ದ್ವಿಮುಖ ನೀತಿ ಸರಿಯೇ ? ಪತ್ರಿಕೆಗಳಿಗೆ ಹಣ ಮಾಡುವುದೇ ಪ್ರಧಾನವೇ ? ವಿದೇಶಿ ಸಾಮಾನುಗಳ ಜಾಹಿರಾತೂ ಹಾಕಿ, ಆ ಮೂಲಕ ಅವನ್ನು ಪ್ರೋತ್ಸಾಹಿಸುತ್ತಾ, ಜೊತೆಗೆ ಸರ್ಕಾರದ ನೀತಿಯನ್ನು ಅಲ್ಲಗಳೆಯುವುದಾದರೆ ನಿಮ್ಮ ನಂಬುಗೆ ಪ್ರಶ್ನಾರ್ಹ ಆಗುವುದಿಲ್ಲವೇ ? ಕ್ರಿಕೆಟ್ ತಿನ್ನಿ, ಕ್ರಿಕೆಟ್ಟಿನಲ್ಲಿ ಮಲಗಿ, ಪೆಪ್ಸಿ ಕುಡಿಯಿರಿ ಎಂಬಂತಹ ಸೂಕ್ತಿಗಳನ್ನು ಹೇಳಿ ಜೇಬಿಗೆ ಹಣ ಬಿಡುವ ಇವರಿಗೆ ರಾಷ್ಟ್ರೀಯತೆ ಎಂದರೇನು ಎಂಬುದನ್ನು ತಿಳಿಸಿ ಹೇಳಬೇಕಾಗಿದೆ. ಕಪಿಲ್‌ದೇವ್ ಪಾಕಿಸ್ತಾನದೊಡನೆ ಕ್ರಿಕೆಟ್ ಪಂದ್ಯ ಬೇಡ ಎಂದರು. ಪಾಕಿಸ್ತಾನ್ ನಮ್ಮ ಶತ್ರುಗಳು! ಆದರೆ ಅದೇ ನಮ್ಮ ಕ್ರಿಕೆಟ್ ಪಟುಗಳು ಪೆಪ್ಸಿ, ವಿಲ್ಸ್, ಜರ್ದಾಗಳ ಪ್ರಚಾರ ಮಾಡುತ್ತಾರೆ. ಇವರು ನಮ್ಮ ಆಂತರಿಕ ಶತ್ರುಗಳು. ಹಣಕ್ಕಾಗಿ ದೇಶ ಮಾರುವವರು. ವಿದೇಶಿಯರು ನಮ್ಮ ಹಣ ದೋಚಲು ಶಾಮೀಲಾಗುವವರು ಇವರು.

ಭಾಷೆ ಗಂಡು ಮೆಟ್ಟಿನದಂತೂ ಇರಬೇಕು. ಕನ್ನಡದಲ್ಲಿ ಬಹು ಪರಿಣಾಮಕಾರಿಯಾಗಿ ಬರೆಯುವ ಲೇಖಕರಿದ್ದಾರೆ. ಕನ್ನಡ ಸಂಪದ್ಭರಿತವಾದ ಭಾಷೆ. ಬಯ್ಗುಳ ವಿಶೇಷಣಗಳನ್ನು ಬಳಸದೆಯೇ ಬಹು ಪರಿಣಾಮಕಾರಿಯಾಗಿ ಕನ್ನಡದಲ್ಲಿ ಬರೆಯಲು ಸಾಧ್ಯ. ಪತ್ರಿಕೆ ಈ ಘನತೆಯನ್ನು ಉಳಿಸಿಕೊಂಡು ಹೋಗಬೇಕು. ಈ ಮಟ್ಟವನ್ನು ಉಳಿಸಿಕೊಂಡು ಹೋಗಬೇಕು.

ನಮ್ಮದು ಸಮಸ್ಯೆಗಳ ದೇಶ. ಗೊಂದಲಮಯ ದೇಶ. ದಾರಿದ್ರ್ಯ, ಅಜ್ಞಾನ, ನಿರುದ್ಯೋಗ ಇವು ಒಂದು ಕಡೆ. ಸಮಾಜ ಕೆಟ್ಟು ಕೂತಿದೆ. ಮೌಲ್ಯಗಳು ಮಾಯವಾಗುತ್ತಿವೆ. ರಾಜಕೀಯ ಹೊಲಸೆದ್ದಿದೆ. ವಿದ್ಯಾವಂತ ಮತದಾರ ಹೊಣೆಗೇಡಿಯಾಗಿದ್ದಾನೆ. ಪಕ್ಷರಾಜಕೀಯ ಗಬ್ಬೆದ್ದಿದೆ. ಆರ್ಥಿಕ ಅಪರಾಧಗಳು ಹೆಚ್ಚಿವೆ. ಹೊಸ ಆರ್ಥಿಕ ನೀತಿ ನಮ್ಮನ್ನು ಆರ್ಥಿಕ ಗುಲಾಮಗಿರಿಗೆ ಕೊಂಡೊಯ್ಯುತ್ತಿದೆ. ವಿದ್ಯಾಭ್ಯಾಸ ಸಂಸ್ಥೆಗಳು ವ್ಯಾಪಾರೀ ಸಂಸ್ಥೆಗಳಾಗಿವೆ.

ಸಾಂಸ್ಕೃತಿಕ ಹಲ್ಲೆಯೂ ನಡೆಯುತ್ತಿದೆ. ನಮ್ಮ ಟಿ.ವಿ. ಗಳು, ಇತರ ಮಾಧ್ಯಮಗಳು, ಯುವಕ ಯುವತಿಯರ ಮನಸ್ಸುಗಳನ್ನು ಕಲುಷಿತಗೊಳಿಸುತ್ತಿವೆ. ಒಂದೇ ಸಮನೆ ಆಘಾತ ಉಂಟುಮಾಡುತ್ತಿವೆ.

'ಹೊಸತು' ಈ ಎಲ್ಲ ರಂಗಗಳಲ್ಲೂ ಹೊಲಸು ತೊಳೆಯುವ ಕೆಲಸ ಮಾಡಬೇಕು. ಹೊಸ ಆಲೋಚನೆ, ಹೊಸತನ, ಹುಟ್ಟುಹಾಕಬೇಕು. ಒಟ್ಟಿನಲ್ಲಿ, ಹೊಸ ಮನುಷ್ಯರನ್ನೇ, ಹೊಸ ಮನಸ್ಸನ್ನೇ ಸೃಷ್ಟಿ ಮಾಡಬೇಕು. ದೊಡ್ಡ ಜವಾಬ್ದಾರಿ. ಈ ಹೊಣೆಗಾರಿಕೆಯನ್ನು ಸಮರ್ಥವಾಗಿ ನಿರ್ವಹಿಸುವ ಶಕ್ತಿ 'ಹೊಸತು' ಪತ್ರಿಕೆಗೆ ಬರಲಿ ಎಂದು ಆಶಿಸುತ್ತೇನೆ.

ಕ್ರಾಂತಿ ಚಿರಾಯುವಾಗಲಿ. ಹೊಸತು ಹೊಸತಾಗಿಯೇ ಎಂದಿಗೂ ಉಳಿಯಲಿ.




ಸಂಪುಟ-೧ ಸಂಚಿಕೆ-೨ ಸೆಪ್ಟೆಂಬರ್ ೧೯೯೯






ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ.ಪೆ. ೫೧೫೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ/ಫ್ಯಾಕ್ಸ್ : ೨೨೦೩೫೮೦/೮೧/೮೨
e-mail:nkp@bgl.vsnl.net.in

# ಚುನಾವಣೆಯಿಂದ ವ್ಯಾಪಕ ಸೈದ್ಧಾಂತಿಕ ಸಂಘರ್ಷಗಳತ್ತ

ನಮ್ಮ ರಾಷ್ಟ್ರವು ಗಣರಾಜ್ಯವಾಗಿ ಐವತ್ತು ವರ್ಷಗಳಾಗಿವೆ. ಇನ್ನೈದು ತಿಂಗಳಿಗೆ ಅದರ ವರ್ಧಂತಿ ಬರುತ್ತದೆ. ೧೯೫೨ರಲ್ಲಿ ಮೊದಲ ಲೋಕಸಭೆ ಚುನಾವಣೆ ನಡೆಯಿತು. ಕಳೆದ ೪೭ ವರ್ಷಗಳಲ್ಲಿ ಹನ್ನೆರಡು ಬಾರಿ ಚುನಾವಣೆಗಳು ನಡೆದು ಈಗ ಹದಿಮೂರನೇ ಲೋಕಸಭೆಗೆ ಚುನಾವಣೆಗಳು ನಡೆಯುತ್ತಿವೆ. ಹತ್ತನೆಯ ಲೋಕಸಭೆ ಇರಬೇಕಾಗಿದ್ದೆಡೆ ೧೩ನೆಯದು ಅಸ್ತಿತ್ವಕ್ಕೆ ಬರಲಿದೆ. ಸರ್ವತೋಮುಖ ಅಭಿವೃದ್ಧಿ ಆಗಿಲ್ಲದಿದ್ದರೂ ನಮ್ಮ ಆರ್ಥಿಕ ಚೈತನ್ಯದ ಸಾಧ್ಯತೆಗಳನ್ನು ಗುರುತಿಸಲು ಆಗುತ್ತದೆ. ಇಷ್ಟಾಗಿಯೂ ವಿಶ್ವದಲ್ಲಿ ನಮ್ಮ ರಾಷ್ಟ್ರವು ಮೊದಲ ನೂರು ರಾಷ್ಟ್ರಗಳಲ್ಲಿ ಒಂದಾಗಿ ನಿಲ್ಲಲು ಸಹ ಸಮರ್ಥವಾಗಿಲ್ಲ. ಬಡತನ, ಅನಕ್ಷರತೆ, ನಿರುದ್ಯೋಗ, ಮುಂತಾದ ಭೀಕರ ಪಿಡುಗುಗಳ ಬಾಧೆಯ ಹಿನ್ನೆಲೆಯಲ್ಲೇ ಸದ್ಯದ ಚುನಾವಣೆ ನಡೆಯುತ್ತಿದೆ. ಹಿಂದಿಗಿಂತಲೂ ಜೀವನ ಹೆಚ್ಚು ಹಿತವಾಗಿದೆಯೆಂದು ಹೇಳಬಲ್ಲ ಕುಟುಂಬಗಳ ಸಂಖ್ಯೆ ಕಳೆದ ದಶಕದಲ್ಲಿ ಗಮನಾರ್ಹವಾಗಿ ಹೆಚ್ಚಿಲ್ಲ. ಬೇರಾವುದೇ ಮಾಪನ ಸಾಧನಗಳಿಗಿಂತ ಇದು ಮುಖ್ಯವಾದ ಸರಳ ಮಾಪನ ವಿಧಾನವೆಂಬುದನ್ನು ಯಾರೂ ತಳ್ಳಿಹಾಕುವಂತಿಲ್ಲ. ನಮ್ಮ ಆರ್ಥಿಕ-ಸಾಮಾಜಿಕ ನೀತಿಗಳ ವೈಫಲ್ಯ ಇದರಿಂದ ಸಾಬೀತಾಗುತ್ತಿದೆ. ಯಾವ ಪಕ್ಷ ಅಥವಾ ಪಕ್ಷಗಳ ಬಣ ಕೇಂದ್ರದಲ್ಲಿ ಸರ್ಕಾರ ರಚಿಸಿದರೂ ಜನಸಮುದಾಯವು ತನ್ನ ಉಳಿವಿಗಾಗಿ ಹೋರಾಟ ಮುಂದುವರಿಸಬೇಕಾದ್ದು ಅನಿವಾರ್ಯವಾಗಿದೆ. ಅದು ಮುಖ್ಯವಾಗಿ ಆರ್ಥಿಕ -ಸಾಮಾಜಿಕ-ಸಾಂಸ್ಕೃತಿಕ ನೀತಿಗಳನ್ನು ಗಮನದಲ್ಲಿರಿಸಿಕೊಳ್ಳಬೇಕಾಗುತ್ತದೆ.

ಚುನಾವಣಾ ಕಣದಲ್ಲಿ ಹತ್ತಾರು ಪಕ್ಷಗಳಿವೆ. ಅವನ್ನೆಲ್ಲಾ ಕ್ರೋಢೀಕರಿಸಿದರೆ ನಿಜಕ್ಕೂ ರಚನೆಯಾಗಿರುವುದು ಸ್ಥೂಲವಾಗಿ ಎರಡು ಬಣಗಳೆಂಬುದು ಸ್ಪಷ್ಟ. ಅದನ್ನು ಒಪ್ಪದ ಕಾಂಗ್ರೆಸ್ ತನ್ನ ಮತ್ತಿನಲ್ಲಿ, ಭ್ರಮೆಯಲ್ಲಿ ಇನ್ನೂ ಸ್ವಂತದ ಸ್ವತಂತ್ರ ಶೋಭೆಯ ಕನಸನ್ನು ಕಾಣುತ್ತಿದೆ. ಅದರಿಂದ ಲಾಭವಾಗುವುದು ಅದರ ವಿರೋಧಿಕೂಟಕ್ಕೆ ಎಂಬ ಪ್ರಾಥಮಿಕ ಜವಾಬ್ದಾರಿಯ ಅರಿವೂ ಆ ಪಕ್ಷಕ್ಕಿಲ್ಲ. ಅಲ್ಲದೆ ಪಕ್ಷದಲ್ಲಿ ಆಂತರಿಕ ಕ್ಷೋಭೆಗೆ ಯಾವತ್ತೂ ಹೆಸರಾದ ಈ ಪಕ್ಷ ಒಬ್ಬ ನಾಯಕಿಯ ಆಸರೆಯಿಂದ ಅಧಿಕಾರದ ಗದ್ದುಗೆ ಹಿಡಿಯಲು ಹವಣಿಸುತ್ತಿದೆ. ಯಾವನೋ ಒಬ್ಬ ಪಕ್ಷದ ಪದಾಧಿಕಾರಿಯಾಗಿ ನೇಮಕಗೊಂಡಾಗ ಭಿತ್ತಿಪತ್ರಗಳನ್ನು ಅಂಟಿಸುವ, ಜಾಹಿರಾತು ನೀಡುವ ಕಾಂಗ್ರೆಸ್, ಜನರ ಸಂಕಷ್ಟಗಳನ್ನು ನೀಗಿಸಲು ಸಾರ್ವಜನಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರಲ್ಲಿ ಅಷ್ಟೇನೂ ಆಸಕ್ತಿ ತೋರುವುದಿಲ್ಲ. ವಿರೋಧ ಪಕ್ಷವಾಗಿದ್ದಾಗಲೂ ಇಂತಹ ದಿಕ್ಕು ಆ ಪಕ್ಷಕ್ಕೆ ಮಾನ್ಯವಲ್ಲ. ಆದಾಗ್ಯೂ ಮತೀಯ ಧೋರಣೆಯನ್ನು ತನ್ನ ಮೂಲಭೂತ ಧ್ಯೇಯವನ್ನಾಗಿ ಎಂದೂ ಮಾಡಿಕೊಂಡಿಲ್ಲದಿರುವುದು ಕಾಂಗ್ರೆಸ್‌ನ ಒಂದು ಹಿರಿಮೆ. ಮತಧರ್ಮವನ್ನು ಬಳಸಿಕೊಳ್ಳುವುದಕ್ಕೂ ಅದನ್ನೇ ಪ್ರಮುಖ ಧೋರಣೆಯನ್ನಾಗಿಸಿಕೊಳ್ಳುವುದಕ್ಕೂ ಏನು ವ್ಯತ್ಯಾಸವೆಂಬುದನ್ನು ಕಾಂಗ್ರೆಸ್ ಮತ್ತು ಭಾರತೀಯ ಜನತಾ ಪಕ್ಷಗಳನ್ನು ನೋಡಿದರೆ ತಿಳಿಯುತ್ತದೆ. ಒಂದು ಸದ್ಯದ ಲಾಭಕ್ಕೆ ಸಾಧನೆ, ಇನ್ನೊಂದು ಉಗ್ರ ಮತಾಂಧತೆ, ಅನ್ಯಾಕ್ರಮಣಶೀಲತೆ, ಪರಮತ ದ್ವೇಷ.

ಸಿದ್ಧಾಂತರಹಿತವಾದ ನೆಲೆಯಲ್ಲಿ ರಾಜಕೀಯ ನಡೆಯುವುದು ನಮ್ಮ ದೇಶಕ್ಕೆ ಹೊಸದೇನೂ ಅಲ್ಲ. ಆದರೆ ಇಂದಿನಷ್ಟು ದಿಕ್ಕೆಟ್ಟ ರಾಜಕೀಯ ಇಷ್ಟು ದೊಡ್ಡ ಪ್ರಮಾಣದಲ್ಲಿ ನಡೆದದ್ದು ಇಲ್ಲ. ಶ್ರೀರಾಮಚಂದ್ರನ ಕೃಪೆಯಿಂದ ದೆಹಲಿಯ ಸಿಂಹಾಸನ ಪ್ರಾಪ್ತವಾಗದಿದ್ದಾಗ ಭಾರತೀಯ ಜನತಾ ಪಕ್ಷ ತನ್ನ ಪ್ರಮುಖ ನಿಲುವುಗಳನ್ನು ಹಿಂದಕ್ಕೆ ಸರಿಸಿ ಬೇರೊಂದು ರೀತಿಯ ವ್ಯೂಹ ರಚಿಸಿಕೊಂಡಿದೆ. ಅದರಲ್ಲಿ ತೋರಿಕೆಗೆ ಒಂದು ಮುಖವನ್ನು ಅಳವಡಿಸಲಾಗಿದೆ. ಆದರೆ ತನ್ನ ನಿಜ ಮುಖ ಬದಲಿಸಿಕೊಂಡಿದೆ ಎಂಬ ರೀತಿಯಲ್ಲಿ ಆ ಪಕ್ಷದ ಕೆಲವು ವಕ್ತಾರರು ಸಾರ್ವಜನಿಕರೆದುರು ಬರುತ್ತಾರೆ. ಅದರ ಮಿತ್ರ ಪಕ್ಷಗಳು ಅದೇ ಮಿಥ್ಯೆಯನ್ನು ನಂಬುತ್ತವೆ ಅಥವಾ ನಂಬಿದಂತೆ ನಟಿಸುತ್ತವೆ. ಭಾಜಪದ ಮಿತ್ರಪಕ್ಷಗಳು ಕೆಲವು ತಮ್ಮ ಪ್ರಾದೇಶಿಕ ರಾಜಕೀಯ ಒತ್ತಡದಿಂದ ಭಾಜಪದತ್ತ ತಿರುಗಿವೆ. ಆ ಪಕ್ಷದ ನಂಬಿಕೆ ಮತ್ತು ಕ್ರಿಯೆಗಳನ್ನು ಪ್ರತ್ಯಕ್ಷವಾಗಿ ಕಂಡೂ ಅವನ್ನು ಉಪೇಕ್ಷಿಸುತ್ತಿರುವುದು ಈ ಮಿತ್ರಪಕ್ಷಗಳ ನೀತಿರಹಿತ ಹಾದಿಯಾಗಿದೆ. ಭಾ. ಜ. ಪ ಸ್ವತಃ ಘೋಷಿಸಿರುವಂತೆ ಅದರ ಆದ್ಯತೆಗಳನ್ನು **ಸದ್ಯಕ್ಕೆ** ಹಿಂದಕ್ಕೆ ಸರಿಸಲಾಗಿದೆ ಅಷ್ಟೆ. ರಾಮಮಂದಿರ, ಕಾಶ್ಮೀರಕ್ಕೆ ಸಂಬಂಧಿಸಿದ ಸಂವಿಧಾನದ ೩೭೦ನೆಯ ವಿಧಿ ಮತ್ತು ಸಮಾನ ನಾಗರಿಕ ಸಂಹಿತೆ, ಇವನ್ನು ತಾತ್ಕಾಲಿಕವಾಗಿ ಚರ್ಚೆಯ ಹೊರಗಿರಿಸುವುದಾಗಿ ಬಿ. ಜೆ. ಪಿ ನಾಯಕರು ಹೇಳಿದ್ದಾರೆ. ಅಂದರೆ, ಮಿತ್ರಪಕ್ಷಗಳ ಹೆಗಲೇರಿ ಅಧಿಕಾರಕ್ಕೆ ಬಂದು, ಕ್ರಮೇಣ ಅವನ್ನು ಮೀರಿನಿಲ್ಲುವ ಹುನ್ನಾರ ಇದು. ವಿವಿಧ ರಾಜ್ಯಗಳಲ್ಲಿ ಹೊಂದಾಣಿಕೆಯ ಪ್ರಯತ್ನಗಳು ಇದನ್ನು ತೋರಿಸಿಕೊಟ್ಟವು.

ದೇಶದ ಆರ್ಥಿಕ ನೀತಿಯು ಜನವಿರೋಧಿಯಾಗಿ ನಡೆದುಕೊಂಡು ಬಂದಿರುವ ಪರಂಪರೆ ನಮ್ಮಲ್ಲಿದೆ. ಅದನ್ನು ತೀವ್ರಗೊಳಿಸಿ ನಮ್ಮ ಆರ್ಥಿಕತೆಯನ್ನು ದಿವಾಳಿತನದ ಅಂಚಿಗೆ ತಂದಿದ್ದು ಜಾಗತೀಕರಣ, ಉದಾರೀಕರಣ. ಸ್ವಾವಲಂಬನೆಯ ಕಲ್ಪನೆಯನ್ನು ಅಪಾರ್ಥಗೊಳಿಸಿ ಅದು ಅಪ್ರಸ್ತುತವೆಂಬಂತೆ ವಿವರಣೆ ನೀಡಹೊರಟಿದ್ದು ಇವುಗಳ ಹಿನ್ನೆಲೆಯಲ್ಲಿ. ಕಾಂಗ್ರೆಸ್ ಆರಂಭಿಸಿದ ಈ ಪ್ರಕ್ರಿಯೆಯನ್ನು ಅತ್ಯಂತ ಸ್ವಾಮಿನಿಷ್ಠೆಯಿಂದ ಮುಂದುವರೆಸಿದ ಅಪಕೀರ್ತಿ ಭಾಜಪಕ್ಕೆ ಸಲ್ಲುತ್ತದೆ. ಸ್ವದೇಶಿ ಘೋಷಣೆಯನ್ನು ಕೊಡುತ್ತಾ ಅದನ್ನು ನಿರ್ನಾಮ ಮಾಡಹೊರಟಿರುವುದು ಭಾಜಪದ ಆರ್ಥಿಕನೀತಿ. ಈಗ 'ಸ್ವದೇಶಿ' ಎಂಬುದಕ್ಕೆ ಪುನರ್ವ್ಯಾಖ್ಯಾನ ನೀಡುವ ಹಂತಕ್ಕೆ ಆ ಪಕ್ಷ ತಲುಪಿದೆ.

ಮೊದಲು ಹದಿಮೂರು ದಿನ, ಆಮೇಲೆ ಹದಿಮೂರು ತಿಂಗಳು - ಹೀಗೆ ಕೇಂದ್ರದಲ್ಲಿ ಆಡಳಿತ ನಡೆಸಿದ ವಾಜಪೇಯಿ ಸರ್ಕಾರ ಈಗ ಹದಿಮೂರು ವರ್ಷಗಳ ಕಾಲ ಆಳ್ವಿಕೆಗೆ ಜನರಿಂದ ಆದೇಶ ಪಡೆಯುವುದಾಗಿ ಭಾಜಪ ಹೇಳಿಕೊಂಡಿದೆ. ಅದರ ಮೊದಲ ಭಾಗವಾಗಿ ಸಂವಿಧಾನವನ್ನು ಪರಿಷ್ಕರಿಸಿ ಚುನಾಯಿತ ಲೋಕಸಭೆ ಮಧ್ಯದಲ್ಲಿ ವಿಸರ್ಜನೆಯಾಗದಂತೆ ಮಾಡುವುದಾಗಿ ಆ ಪಕ್ಷ ಹೇಳಿದೆ. ಸ್ಥಿರತೆಯನ್ನು ಗಳಿಸಲು ಇದೊಂದು ಮಾರ್ಗವೆಂಬ ವಾದ ದೇಶದ ಮುಂದೆ ಬಂದಿದೆ. ನಿಜವಾದ ಇಂಗಿತ ಬೇರೆಯೇ ಇದೆ. ಅದೇನೆಂದರೆ ಪಾರ್ಲಿಮೆಂಟರಿ ಪ್ರಭುತ್ವದ ಜಾಗದಲ್ಲಿ ಅಧ್ಯಕ್ಷೀಯ ಮಾದರಿಯನ್ನು ಹೇರುವುದು. ಭಾರತವು ಸ್ವಾಯತ್ತ ರಾಜ್ಯಗಳ ಒಕ್ಕೂಟವಾಗಿರುವುದರ ಬದಲು ಕೇಂದ್ರೀಕೃತ ಆಡಳಿತಕ್ಕೆ ಸಿಲುಕಿ ನಜ್ಜುಗುಜ್ಜಾಗುವುದು ಈ ಬದಲಾವಣೆಯಿಂದ ಪ್ರಾರಂಭವಾಗುತ್ತದೆ. ರಾಷ್ಟ್ರೀಯ ಐಕ್ಯತೆ ಎಂಬುದು ಆಗ ಇನ್ನೂ ದೊಡ್ಡ ಮರೀಚಿಕೆಯಾಗುತ್ತದೆ. ಇದು ಭಾಜಪದ 'ಸ್ವದೇಶಿ' ಯೋಜನೆ. ಪ್ರಸ್ತುತ ಚುನಾವಣೆಯಲ್ಲಿ ಈ ಯೋಜನೆಯನ್ನು ತಿರಸ್ಕರಿಸದಿದ್ದರೆ ಇನ್ನು ಮುಂದೆ ಇಂತಹ ಸಾರ್ವತ್ರಿಕ ಚುನಾವಣೆಗಳು ನಡೆಯುವುದೇ ಅಸಂಭವವಾಗಿಬಿಡುತ್ತದೆ.

ತನ್ನ ೧೩ ದಿನ +೧೩ ತಿಂಗಳ ಕಾರ್ಯಾಚರಣೆ ಮತ್ತು ಸಾಧನೆ, ಇವೇ ದೇಶದ ಪ್ರಜೆಗಳ ಮುಂದೆ ತಾನಿರಿಸುವ ಮುಖ್ಯ

ಮಾಹಿತಿ ಮತ್ತು ಅದರ ಆಧಾರದ ಮೇಲೆ ಮತ ಯಾಚಿಸುವುದಾಗಿ ಭಾಜಪ ಹೇಳಿಕೊಂಡಿದೆ. ಮತದಾರರು ಸಹಜವಾಗಿಯೇ ಇವನ್ನು ವಿಮರ್ಶಿಸಿಕೊಳ್ಳುವುದು ಅಗತ್ಯ. ಒಂದು ವರ್ಷದ ತನ್ನ ಸಾಧನೆಯು ಕಾಂಗ್ರೆಸ್ಸಿನ ೪೦ ವರ್ಷಗಳ ಸಾಧನೆಗಿಂತ ಮಿಗಿಲಾದದ್ದು ಎಂಬ ಭಾಜಪದ ಅಬ್ಬರವನ್ನು ಬಹುಶಃ ಬಾಬ್ರಿಮಸೀದಿಯ ಧ್ವಂಸದಿಂದ ಆರಂಭಿಸಿ ಪಟ್ಟಿ ಮಾಡಿ ಮಾಪನ ಮಾಡಬೇಕು. ಸುಖರಾಂ ಮತ್ತು ಸರಸ್ವತಿ ವಿದ್ಯಾಮಂದಿರಗಳು ಎರಡು ಸೂಚನೆಗಳನ್ನು ಕೊಡುತ್ತವೆ: ಎಂತಹ ಭ್ರಷ್ಟರನ್ನಾದರೂ ರಾಜಕೀಯ ದಾಳಗಳನ್ನಾಗಿ ಬಳಸಿಕೊಳ್ಳಲು ಭಾಜಪ ಸಿದ್ಧವಿದೆ ಮತ್ತು ಸರ್ಕಾರಿ ಹಣವನ್ನು ಖಾಸಗಿ ಪ್ರಚಾರಗಳಿಗೆ ತೊಡಗಿಸಿಕೊಳ್ಳುವ ತಂತ್ರವನ್ನು ಅದು ಸಿದ್ಧಿಸಿಕೊಂಡಿದೆ. ಸುಖರಾಂ ಸಂಪ್ರದಾಯವನ್ನು ಟೆಲಿಕಾಂ ಹಗರಣದಲ್ಲಿ ಮುಂದುವರೆಸಲಾಗಿದೆ. ಅಡ್ಮಿರಲ್ ಭಾಗವತ್‌ರನ್ನು ನೌಕಾಪಡೆಯಿಂದ ಓಡಿಸುವುದು ಮತ್ತು ಸೈನ್ಯದ ಮುಖ್ಯಸ್ಥರನ್ನು ಚುನಾವಣಾ ಪ್ರಚಾರಕ್ಕೆ ತೊಡಗಿಸಿಕೊಳ್ಳುವುದು, ಈ ಪಕ್ಷ ಸೈನ್ಯವನ್ನು ಮತಧರ್ಮೀಯ ಆಧಾರದ ಮೇಲೆ ವಿಭಜನೆಯ ಹಾದಿಗೆ ತಳ್ಳುವುದರ ಸೂಚನೆ. ಇತಿಹಾಸ ಸಂಶೋಧನಾ ಪರಿಷತ್, ಸಿಮ್ಲಾದ ಉನ್ನತಾಧ್ಯಯನ ಸಂಸ್ಥೆ ಮುಂತಾದವನ್ನು ತನ್ನ ಮತೀಯ ಸಿದ್ಧಾಂತದ ಪಕ್ಷಪಾತಿಗಳಿಗೆ ಮೀಸಲಿರಿಸುವುದು ಬೌದ್ಧಿಕ ಅಪಚಾರವಾದರೆ ಸ್ಟೇನ್ಸ್‌ನಂತಹವನ ಕೊಲೆಗೆ ಅಸಂಬದ್ಧ ಸಮರ್ಥನೆ ನೀಡುವುದು ನೈತಿಕ ಅಪರಾಧವೆನಿಸುತ್ತದೆ. ಸಿಮ್ಲಾದ ಸಂಸ್ಥೆಯ ವಾರ್ಷಿಕ ಉಪನ್ಯಾಸಕ್ಕೆ ಅಮರ್ತ್ಯ ಸೇನ್‌ಗೆ ನೀಡಿದ್ದ ಆಹ್ವಾನವನ್ನು ತುಂಡರಿಸಿ ಮುರಳಿ ಮನೋಹರ ಜೋಷಿ ಉಪನ್ಯಾಸ ನೀಡಿದ್ದು ಈ ದಶಕದ ಒಂದು ಹೇಸಿಗೆಯ ಪ್ರಸಂಗ. ಮಹಿಳೆಯರಿಗೆ ಶಾಸಕಾಂಗದಲ್ಲಿ ಮೀಸಲಾತಿಯನ್ನು ಕೊಡದಿರಲು ಉಮಾ ಭಾರತಿಯನ್ನು ಶಿಖಂಡಿಯನ್ನಾಗಿ ಪ್ರಯೋಗಿಸಿದ್ದು ಭಾಜಪ. ಮನ್ಸಾಂಟೋವನ್ನು ತಂದು ರೈತರಿಗೆ ನೇಣು ಹಗ್ಗ ನೀಡಿದ್ದು ಮತ್ತು ರೇಷ್ಮೆ ಆಮದಿನಿಂದ ಸ್ಥಳೀಯ ಉತ್ಪಾದಕರ ಕೈ ಕತ್ತರಿಸಿದ್ದು ಈ ಪಕ್ಷ. ಅದರಿಂದಾಗಿ ಅಮೆರಿಕಾಕ್ಕೆ ಶರಣು ಹೋಗುವಂತಾಗಿರುವುದು ನಮ್ಮ ರಾಷ್ಟ್ರದ ಸ್ವಾತಂತ್ರ್ಯೋತ್ತರ ಕಾಲದ ಅತ್ಯಂತ ಭೀಕರ ಮತ್ತು ನಾಚಿಕೆಯ ಬೆಳವಣಿಗೆ. ಕಾರ್ಗಿಲ್ ಕದನದ ಸಮಯದಲ್ಲಿ ನಮ್ಮ ವೀರಯೋಧರು ಪ್ರಾಣತ್ಯಾಗ ಮಾಡಿ ರಾಷ್ಟ್ರವನ್ನು ರಕ್ಷಿಸಿದ್ದಕ್ಕಾಗಿ ಇಡೀ ರಾಷ್ಟ್ರ ಅವರಿಗೆ ತಲೆ ಬಾಗಿದೆ. ಯುದ್ಧದ ಪರಿಸ್ಥಿತಿ ಉದ್ಭವಿಸಿದ್ದಕ್ಕೆ ಕಾರಣವಾದ ಭಾಜಪ ಮಾತ್ರ ಅದು ತನ್ನ ವಿಜಯವೆಂಬಂತೆ ಮೆರೆಯುತ್ತಿರುವುದು ಹಿಂದೆಂದೂ ನಾವು ಕಾಣದಿದ್ದಂತಹ ಸನ್ನಿವೇಶ. ಆ ಪ್ರದೇಶದಲ್ಲಿ ಪಾಕಿಸ್ತಾನಿ ಚಟುವಟಿಕೆಯನ್ನು ಭಾಜಪ ಸರ್ಕಾರ ನಿರ್ಲಕ್ಷಿಸದಿದ್ದರೆ ನಮ್ಮ ಯೋಧರು ಹುತಾತ್ಮರಾಗಬೇಕಾಗುತ್ತಿರಲಿಲ್ಲ. ಸಾಲದ್ದಕ್ಕೆ ಈಗ ಅಣ್ವಸ್ತ್ರ ಯೋಜನೆಯ ದೀರ್ಘಕಾಲಿಕ ನೀತಿಯನ್ನು ಪ್ರಕಟಿಸಿ ಐವತ್ತು ಸಾವಿರ ಕೋಟಿ ರೂಪಾಯಿಗಳನ್ನು ವ್ಯಯಮಾಡಲು ವಾಜಪೇಯಿ ಹೊರಟಿದ್ದಾರೆ. ದೇಶದಲ್ಲಿ ಭಾವೋದ್ರೇಕದ ವಾತಾವರಣ ಸೃಷ್ಟಿಸುವ ಫ್ಯಾಸಿಸ್ಟ್ ಪದ್ಧತಿಯ ಪೂರ್ಣ ಅನುಕರಣೆ ಇದು. ಇದೆಲ್ಲದರ ಪರಿಣಾಮ ಭಾರತವು ಅಮೆರಿಕಾದ ತೆಕ್ಕೆಗೆ ಬಿದ್ದು ಪರತಂತ್ರ ರಾಷ್ಟ್ರವಾಗುವ ಅವಹೇಳನೀಯ ಸಂದರ್ಭ. ಕ್ಲಿಂಟನ್ ಪರಿವಾರವನ್ನು ಮೆಚ್ಚಿಸಲು ಭಾಜಪ ಸರ್ಕಾರ ಎಷ್ಟು ಮುತುವರ್ಜಿ ವಹಿಸುತ್ತದೆಂದರೆ ಅಮೆರಿಕಾದ ಕಂಪನಿಗಳು ವರಮಾನ ತೆರಿಗೆಯ ಪಾವತಿಯಲ್ಲಿ ಮೋಸ ಮಾಡಿದಾಗ ಅದನ್ನು ತನಿಖೆ ಮಾಡಬಾರದೆಂದು ತೆರಿಗೆ ಅಧಿಕಾರಿಗಳಿಗೆ ಆದೇಶ ನೀಡುತ್ತದೆ ! ನಮ್ಮ ದೊಡ್ಡ ಸಾರ್ವಜನಿಕ ಉದ್ದಿಮೆಗಳನ್ನು ಪುಕ್ಕಟೆಯಾಗಿ ಖಾಸಗಿಯವರಿಗೆ ಹಸ್ತಾಂತರಿಸುವ ದ್ರೋಹ ಬಗೆಯುತ್ತಿರುವುದು ವಾಜಪೇಯಿ ಸರ್ಕಾರ. ಆಕಾಶವಾಣಿಯನ್ನು ವಾಜಪೇಯಿ ವಾಣಿಯನ್ನಾಗಿ, ದೂರದರ್ಶನವನ್ನು ಪ್ರಮೋದ ದುರ್ದರ್ಶನವನ್ನಾಗಿ ಮಾರ್ಪಡಿಸಿರುವ ಈ ಸರ್ಕಾರ ರಾಷ್ಟ್ರಾಧ್ಯಕ್ಷರ ಸಂವಿಧಾನಾತ್ಮಕ ಕಾರ್ಯಕ್ಷಮತೆಗೆ ಅಡ್ಡಿಯುಂಟುಮಾಡಿ ಅವರನ್ನು ದೂಷಿಸಹೊರಟಿದೆ.

ಪಟ್ಟಿ ಮುಗಿದಿಲ್ಲ. ಆದರೆ ಒಂದಂಶ ಸ್ಪಷ್ಟವಾಗಿದೆ. ಭಾರತವನ್ನು ಯಾವ ಪಕ್ಷವೂ ಕೇವಲ ಒಂದು ವರ್ಷದಲ್ಲಿ ಇಷ್ಟೊಂದು ಹೀನಸ್ಥಿತಿಗೆ ತಂದಿರಲಿಲ್ಲ ಮತ್ತು ತರಲಾರದು. ಕಾಶ್ಮೀರದ ಪ್ರಶ್ನೆಯನ್ನು ಅಂತರರಾಷ್ಟ್ರೀಯಗೊಳಿಸಿರುವ ವಾಜಪೇಯಿ-ಜಸವಂತಸಿಂಗ್-ಜಾರ್ಜ್ ಫರ್ನಾಂಡಿಸ್ ತ್ರಿಕೂಟವು ಕಾಶ್ಮೀರದ ಜನರ ಬಗ್ಗೆ ತಾಳುವ ನಿಲುವು ಯಾವುದೇ ರಾಷ್ಟ್ರೀಯ ಪ್ರಜಾಪ್ರಭುತ್ವ ಪದ್ಧತಿಯೂ ತಲೆ ತಗ್ಗಿಸುವಂತೆ ಮಾಡುತ್ತದೆ. ಮತಧರ್ಮದ ಗೊಡ್ಡುತನದ ಬಗ್ಗೆ ಮಾತ್ರವೇ ಹೆಮ್ಮೆಪಡುವ ಭಾಜಪ ಪರಿವಾರ ಈಗಾಗಲೇ ತನ್ನ ಫ್ಯಾಸಿಸ್ಟ್ ದುರಾಕ್ರಮಣದ ಬಗ್ಗೆ ಸೂಚನೆ ನೀಡಿದೆ.

ಇದನ್ನು ಎದುರಿಸುವಲ್ಲಿ ಭಾರತದ ಕಮ್ಯುನಿಸ್ಟ್ ಚಳುವಳಿಯ ಪಾತ್ರ ಶ್ರೇಯಸ್ಕರವಾಗಿ ತೋರಿಬಂದಿದೆ. ಸಂವಿಧಾನವನ್ನು ಗಾಳಿಗೆ ತೂರುವವರು ಕಮ್ಯುನಿಸ್ಟರು ಎಂಬ ದೂಷಣೆ ವ್ಯಾಪಕವಾಗಿರುವಾಗ ಅದರ ಜನವಿರೋಧಿ ಭಾಗಗಳನ್ನು ತೀವ್ರವಾಗಿ ವಿರೋಧಿಸುತ್ತಲೇ ಸಂವಿಧಾನವನ್ನು ಪ್ರಜಾಸತ್ತಾತ್ಮಕ ಮೌಲ್ಯಗಳ ಆಚರಣೆಗಾಗಿ ಪ್ರಬಲವಾಗಿ ರಕ್ಷಿಸುತ್ತಾ ಬಂದಿರುವುವವರು ಕಮ್ಯುನಿಸ್ಟರು. ಅಂತೆಯೇ ರಾಷ್ಟ್ರದ ಐಕ್ಯತೆ, ಸಾರ್ವಭೌಮತ್ವ, ಆರ್ಥಿಕ ಸ್ವಾವಲಂಬನೆ, ಮತಧರ್ಮೀಯ ಸಾಮರಸ್ಯ, ತುಳಿತಕ್ಕೊಳಗಾದವರ ಪರವಾಗಿ ಹೋರಾಟ, ಮಹಿಳೆಯರ ಸ್ವಾತಂತ್ರ್ಯ, ದುಡಿಯುವ ಎಲ್ಲ ಜನವಿಭಾಗಗಳ ಧ್ವನಿ, ಮುಂತಾದ ಜನಪರ ರಾಷ್ಟ್ರೀಯ ಆಶಯಗಳನ್ನು ಮೈಗೂಡಿಸಿಕೊಂಡಿರುವವರು ಕಮ್ಯುನಿಸ್ಟರು, ಸಮಾಜವಾದಿಗಳು, ಉದಾರವಾದಿ ಪ್ರಜಾಪ್ರಭುತ್ವ ಹಿತಚಿಂತಕರು. ಮುಂದಿನ ದಿನಗಳಲ್ಲಿ ಸಂಯುಕ್ತ ರಂಗದ ಧ್ಯೇಯೋದ್ದೇಶಗಳನ್ನು ಈಡೇರಿಸಲು ಈ ಬಣವೇ ಮೂಲಭೂತ ಅಸ್ತಿಭಾರವಾಗಬೇಕಾಗುತ್ತದೆ.

ದೇಶದಲ್ಲಿ ಎರಡೇ ಪಕ್ಷಗಳಿರುವಂತಾಗಿಬಿಟ್ಟರೆ ಎಲ್ಲಾ ಸುಸೂತ್ರವಾಗಿರುತ್ತದೆ ಎಂಬ ಐತಿಹ್ಯವನ್ನು ಭಾಜಪದ ವಕ್ತಾರರು ಮತ್ತು ಇನ್ನಿತರ ಕೆಲವರು ಹರಡುತ್ತಿದ್ದಾರೆ. ದುಡಿಯುವವರ ಪಕ್ಷ ಮತ್ತು ದುಡಿಯುವವರನ್ನು ಶೋಷಿಸುವವರ ಪಕ್ಷ ಎಂಬ ಎರಡು ಪಕ್ಷಗಳಾಗುವಂತಾದರೆ ಅದನ್ನು ಸ್ವಾಗತಿಸಬಹುದು. ಆದರೆ ಇವರ ಕಲ್ಪನೆಯೇ ಬೇರೆ. ನಾನೊಮ್ಮೆ, ನೀನೊಮ್ಮೆ ಎಂಬ ಲೆಕ್ಕಾಚಾರದಲ್ಲಿ ಉಳ್ಳವರ ಎರಡು ಬಣಗಳು ಅಧಿಕಾರದಲ್ಲಿರಬೇಕೆಂಬ ಕುತಂತ್ರವನ್ನು ಭಾರತದ ಜನತೆ ಹತಾಶೆಗೊಳಿಸಬೇಕಾಗಿದೆ. ಫ್ಯಾಸಿಸ್ಟ್ ದುಷ್ಟಭಾವನೆಯು ಕೇವಲ ಭಾಜಪ ಪರಿವಾರದ ಸ್ವಂತ ಆಸ್ತಿಯಾಗಿಲ್ಲ. ಆದ್ದರಿಂದ ಚುನಾವಣೆಯಾಚೆಗೂ ಅದರ ವಿರುದ್ಧ ಸೈದ್ಧಾಂತಿಕ-ಪ್ರಾಯೋಗಿಕ ಸಂಘರ್ಷ ಮುಂದುವರಿಯಬೇಕಾಗಿದೆ. ಅದಕ್ಕೆ ಪೂರಕವಾಗಿ ಸದ್ಯದ ಚುನಾವಣೆಯಲ್ಲಿ ಮೊದಲು ಫ್ಯಾಸಿಸ್ಟ್ ಮನೋಭಾವ, ಅನ್ಯಾಕ್ರಮಣಶೀಲತೆ ಮತ್ತು ಸಾಮ್ರಾಜ್ಯಶಾಹಿಯ ಬಾಲಬಡುಕತನಗಳನ್ನು ಪ್ರದರ್ಶಿಸಿರುವ ಭಾಜಪದ ಕೂಟವನ್ನು ಹೊರದೂಡಬೇಕಾದ್ದು ನಮ್ಮ ಕರ್ತವ್ಯವಾಗಿದೆ. ಆದ್ದರಿಂದ ಕಮ್ಯುನಿಸ್ಟ್ ಮತ್ತು ಇತರ ಎಡ ಪಕ್ಷಗಳ ಹಾಗೂ ದಲಿತ ಸಂಘರ್ಷ ಸಮಿತಿ, ಕಾಂಗ್ರೆಸ್ ಮುಂತಾದ ಭಾಜಪ-ವಿರೋಧಿ ಉಮೇದುವಾರರಿಗೆ ಬೆಂಬಲ ನೀಡಿ ರಾಷ್ಟ್ರದ ಪ್ರಜಾಪ್ರಭುತ್ವ-ಸಾರ್ವಭೌಮತ್ವಗಳಿಗೆ ಭಾರತದ ಸಾಮಾನ್ಯ ಮತದಾರನು ಭದ್ರವಾದ ಬುನಾದಿಯನ್ನು ಕಲ್ಪಿಸಿಕೊಡುತ್ತಾನೆಂಬ ಭರವಸೆಯೊಂದೇ ನಮ್ಮ ಚೈತನ್ಯ ಮತ್ತು ಭವಿಷ್ಯಗಳ ಶ್ರೀರಕ್ಷೆ. ಅದಾದನಂತರವೂ ವ್ಯಾಪಕ ಹೋರಾಟಗಳು ಅಗತ್ಯವಾಗುತ್ತವೆ. ಅದರ ಫಲವಾಗಿ ಮೂಡಬೇಕಾದ್ದು ಜನರ ನೈಜ ಪ್ರಭುತ್ವ, ಹೊಸ ಜನತಾ ಸಂಸ್ಕೃತಿ.

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ ೨೨೫೧೩೮೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು-೫೬೦ ೦೦೯ ☎ ೨೮೭೨೩೮೫
ಕೆ.ಎಸ್.ಆರ್. ರಸ್ತೆ
ಮಂಗಳೂರು-೫೭೫ ೦೦೧ ☎ ೪೪೧೦೧೬
ರಾಮಸ್ವಾಮಿ ವೃತ್ತ
ಮೈಸೂರು-೫೭೦ ೦೨೪ ☎ ೪೪೪೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ -೫೮೫ ೧೦೨ ☎ ೨೫೩೦೨

### ಹೊಸತು

ಇಂದು ಉಚ್ಚ ಶಿಕ್ಷಣ ಪಡೆದವರು, ರಾಜಕಾರಣಿಗಳು, ವಿಚಾರವಾದಿ ಎನಿಸಿಕೊಂಡವರು, ಜನಸಾಮಾನ್ಯರು 'ಬೋಗಸ್ ದೇವರು'ಗಳನ್ನು ಮೊರೆಹೊಕ್ಕು ಕಂದಾಚಾರವನ್ನು ಬಿತ್ತುತ್ತಿರುವ ಈ ಪ್ರಸ್ತುತ ಸಮಯದಲ್ಲಿ ಇಂಥ ಪತ್ರಿಕೆಗಳ ಪಾತ್ರ ತುಂಬ ಮಹತ್ವದ್ದು.

ಬನಹಟ್ಟಿ **ದು. ನಿಂ. ಬೆಳಗಲಿ**

ಅನೇಕ ವಿಚಾರಯುಕ್ತ ಲೇಖನಗಳಿಂದ ತುಂಬಿದೆ. ಓದುಗನ ಬುದ್ಧಿ ಚುರುಕುಗೊಳ್ಳುತ್ತದೆ. ಚಿಂತನೆಗೆ ದಾರಿ ಮಾಡಿಕೊಡುತ್ತದೆ. ಒಂದು ಪುಟ ಪ್ರವಾಸ ಕಥನಕ್ಕೆ ಮೀಸಲಿಟ್ಟರೆ ಚೆನ್ನ. ಅಲ್ಲಿ ಪ್ರಕೃತಿಯ ಬಹುವರ್ಣದ ಚಿತ್ರ ಕೂಡಿರಲಿ.

ಸಂಪಾಜೆ **ಲೈನ್ಕಜೆ ರಾಮಚಂದ್ರ**

ವೈಚಾರಿಕತೆ ಎಂದರೆ ಬರೀ ಬರಡು ವಿಜ್ಞಾನವಲ್ಲ- ಮುಕ್ತ ಮನಸ್ಸಿನ ವಿಶ್ಲೇಷಣೆ, ವಿಶಾಲ ಮನೋಭಾವನೆ. ನೈತಿಕತೆಯ ಆಚೆ ಇರುವ ವಿಜ್ಞಾನದಿಂದಲೇ ನಾವು ನಿಸರ್ಗಕ್ಕೆ ಹಾನಿ ಮಾಡಿರುವುದು. ಅರಿತು ನಿಸರ್ಗದೊಡನೆ ಸಹಬಾಳ್ವೆ ನೈಜ ಜೀವನದ ಸಾರ. ಈ ಸಂದೇಶವನ್ನೇ ನೀವು ಉಳಿಸಿ ಬೆಳಸಬೇಕಾದ್ದು ಎಂದು ನನ್ನ ಅನಿಸಿಕೆ.

ಬೆಂಗಳೂರು. **ಎ. ಶ್ರೀನಿವಾಸ ಮೂರ್ತಿ**

ಲೇಖನಗಳ ಕುರಿತು ಹೇಳಬೇಕೆಂದರೆ ಮೌಲಿಕವಾದ, ಉಪಯುಕ್ತವಾದ, ಅರ್ಥಪೂರ್ಣವಾದ ಲೇಖನಗಳನ್ನೇ ಕೊಟ್ಟಿದ್ದೀರಿ. ಪತ್ರಿಕೆ ಸಾಕಷ್ಟು ದಷ್ಟಪುಷ್ಟವಾಗಿದೆ. 'ಹೊಸತು' ವಿನಂತ ಒಂದು ಪತ್ರಿಕೆಯನ್ನು ನಾನು ಬಹಳ ದಿನಗಳಿಂದ ಎದುರುನೋಡುತ್ತಿದ್ದೆ.

ಬೆಂಗಳೂರು **ಪಿ. ಮಹಮ್ಮದ್**

ಎಡಪಂಥೀಯ ಧೋರಣೆಗಳಿಗೇ ನೀವು ಬಹಳ ಆದ್ಯತೆಯನ್ನು ನೀಡಿರುವುದು ಕಾಣುತ್ತದೆ- ನಿಚ್ಚಳವಾಗಿ, ಮತ್ತು ನಿರೀಕ್ಷಿತವಾಗಿಯೂ ಕೂಡ. ಇ.ಎಚ್.ಕಾರ್ ಹೇಳುವಂತೆ 'ಆಧಾರಗಳು ಪವಿತ್ರ, ಅಭಿಪ್ರಾಯಗಳು ಸ್ವತಂತ್ರ'.... ಮುಖಪುಟದಲ್ಲಾದರೂ ಕನ್ನಡ ಅಂಕಿಗಳಿಗೆ ಸ್ಥಾನವಿದೆಯಲ್ಲ !

ಮೈಸೂರು **ನಾಗರಾಜರಾವ್**

ಈ ಹೊಸ ಹೆಜ್ಜೆ ಕರ್ನಾಟಕದ ವಾಚಕರಲ್ಲಿ ಪ್ರಸ್ತುತವಾಗಿ ಅವಶ್ಯವಿರುವ ನವಪ್ರಜ್ಞೆಯ ಪ್ರಚೋದನೆಯನ್ನು ಮಾಡಲಿ.

ಧಾರವಾಡ **ವಾಮನ ಬೇಂದ್ರೆ**

ಒಂದು ಮಾತಿದೆ- ಮೊದಲ ದಿನದ ನಾಟಕ ನೋಡಬಾರದು; ಕೊನೆ ದಿನದ ಸರ್ಕಸ್ ನೋಡಬಾರದು, ಎಂದು. 'ಹೊಸತು' ಸಂಚಿಕೆ ಮೊದಲ ದಿನದ ನಾಟಕದಂತಿದೆ. ಮತ್ತು ಒಂದು ತರಹ 'ಬೆಂಗಳೂರು ಚಿಪ್ಸ್' ಅನಿಸಿತು. ಸಮಗ್ರ ಕನ್ನಡಿಗರ ಹೃದಯದ ಕಣ್ಣಾಗಿ ಬರಬೇಕೆಂದು ಇಚ್ಛೆ. ಅವಕಾಶವಾದಿ ಕಮಾಯಿ ಮಾಡಿ ಬರೀ ಹೊಗಳಿದರೆ ಉಳಿದ ಸಮೂಹ ಮಾಧ್ಯಮವೇ ಆದೀತು ! ಬದ್ಧತೆಯೊಳಗೇ ವೈವಿಧ್ಯತೆ ಯಿರಲಿ. ಒಂದು ಲೇಖನ ಬಿಟ್ಟರೆ ಹಸಿವು ಹಿಂಗಲಿಲ್ಲ.

ಜಮಖಂಡಿ **ಅರ್ಜುನ ಕೋರಟಕರ 'ಭಾವಜ್ಞ'**

ಕಲೆ, ಸಾಹಿತ್ಯ, ಸಂಸ್ಕೃತಿ, ಸಾಮಾಜಿಕ, ರಾಜಕೀಯ ವಿಷಯಗಳನ್ನು ಹೊರಹೊಮ್ಮಿಸುವ ಜೊತೆಗೆ 'ಮಹಿಳೆಯರಿಗಾಗಿಯೇ ಕಾನೂನು' ಎಂಬ ಲೇಖನಗಳನ್ನು ಆಗಾಗ್ಗೆ ಪ್ರಕಟಿಸುವುದರಿಂದ ತುಳಿತಕ್ಕೆ ಒಳಗಾದ ಸ್ತ್ರೀಪ್ರಜ್ಞೆ ಜಾಗೃತಗೊಂಡು ನಾಳೆಯ ನೆಮ್ಮದಿಯ ಜೀವನಕ್ಕೆ ನಾಂದಿಯಾಗಿ 'ಹೊಸತು' ಹೊಸತಾಗಲಿ ಎಂದು ಹಾರೈಸುತ್ತೇನೆ.

ಬೆಂಗಳೂರು **ಎಸ್. ಶಶಿ**

ಪತ್ರಿಕೋದ್ಯಮವನ್ನು ಪ್ರಜಾಪ್ರಭುತ್ವದ 'ನಾಲ್ಕನೇ ಅಂಗ' ಎಂದು ಗುರುತಿಸಲಾಗುತ್ತದೆ. ವ್ಯವಸ್ಥೆಯ ಮೂರು ಅಂಗಗಳನ್ನು ಜಾಗೃತಗೊಳಿಸುವ ಜವಾಬ್ದಾರಿ ಪತ್ರಿಕೆಗಳದ್ದು. ಅಂತಹ ಒಂದು ಪತ್ರಿಕೆಯಾಗಿ ಮೂಡಿ ಬರಬಹುದೆನ್ನುವ ಆಶಯವನ್ನು ಮೂಡಿಸಿ ಪ್ರಕಟಗೊಂಡಿರುವ ಹೊಸತು ಪತ್ರಿಕೆಗೆ ಶುಭಾಶಯಗಳು. ವಾಸ್ತವತೆಗೆ ಬೆಳಕು ಚೆಲ್ಲುವಂತಹ, ವಿಜ್ಞಾನ, ಪರಿಸರಗಳಿಗೆ ಹೆಚ್ಚು ಒತ್ತುಕೊಡುವಂತಹ ಪತ್ರಿಕೆಯಾಗಿ ''ಹೊಸತು'' ಎಲ್ಲರ ಮನಮುಟ್ಟಲಿ, ತಟ್ಟಲಿ.

ಹೊಸತನದ ನೆಮ್ಮದಿಯ ನಾಳೆಗಳಿಗೆ ''ಹೊಸತು'' ಸುಪ್ರಭಾತವ ಹೊಸೆಯಲಿ. ಹಸನಾಗಲಿ ಎಲ್ಲ.

ಬೆಂಗಳೂರು **ಗ. ರಾ. ಅರವಿಂದ ಸಿಗದಾಳ್**

ಪತ್ರಿಕೆಯ ಈಗಿನ ಸ್ವರೂಪದೊಂದಿಗೆ ಖಂಡಿತವಾಗಿಯೂ 'ಹೊಸತಿ'ಗೆ ದೀರ್ಘ ಉಳಿಗಾಲವಿಲ್ಲ. ಎಷ್ಟೊಂದು ಪೂರ್ವತಯಾರಿಯ ಬಳಿಕವೂ ಯಾಕೆ ಹೀಗಾಯಿತು ?

ಮಂಗಳೂರು **ಶ್ರೀನಿವಾಸ ಕಾರ್ಕಳ** (ವಿಳಾಸ ಕೊಟ್ಟಿಲ್ಲ)

### ಬಾಬಾಬುಡನ್ - ದತ್ತಾತ್ರೇಯ

ಮೊದಲ ನೋಟಕ್ಕೆ 'ಹೊಸತು' ಇತರೆ ಮಾಸಿಕಗಳಿಗಿಂತ ಭಿನ್ನ ಎನಿಸಿತು. ಡಾ॥ ರಹಮತ್ ತರೀಕೆರೆಯವರ ಲೇಖನ ಬಾಬಾಬುಡನ್‌ಗಿರಿಯ ಬಗ್ಗೆ ಹಲವಾರು ಹೊಸ ವಿವರಗಳನ್ನು ಜನರಿಗೆ ತಲುಪಿಸುವಲ್ಲಿ ಯಶಸ್ವಿಯಾಗಿದೆ. ಇನ್ನಷ್ಟು ಫೋಟೋಗಳು ಮತ್ತು ದತ್ತಾತ್ರೇಯ ಪೀಠ-ದರ್ಗದ ಒಳ ಆವರಣದ ಫೋಟೋಗಳು ಇದ್ದಿದ್ದರೆ ಇನ್ನೂ ಚೆನ್ನಾಗಿರುತ್ತಿತ್ತು.

ಚಿತ್ರದುರ್ಗ **ಬೇದ್ರೆ, ಎನ್. ಮಂಜುನಾಥ್**

ವೈದಿಕ ಸಂಸ್ಕೃತಿಯಲ್ಲಿ 'ನಾಯಿ ಅತ್ಯಂತ ಅಪವಿತ್ರ ಸಂಕೇತ' ಎಂಬ ಬರೆಹಗಾರರ ಅಭಿಪ್ರಾಯ ಕುರಿತು : ವೈದಿಕ ಸಂಸ್ಕೃತಿಯ ಮಹಾಕಾವ್ಯಗಳಲ್ಲೊಂದಾದ ಮಹಾಭಾರತದಲ್ಲಿ ಸ್ವರ್ಗಾರೋಹಣ ಪ್ರಸಂಗದಲ್ಲಿ ಯುಧಿಷ್ಠಿರನೊಂದಿಗೆ ಕೊನೆಯ ವರೆಗೂ ಇದ್ದುದು ನಾಯಿ. ನಾಯಿ ಆತನ ಧರ್ಮದ ಸಂಕೇತ. ಇದೇ ತೆರನಾಗಿ ವೈದಿಕ ಸಾಹಿತ್ಯದಲ್ಲಿ ನಾಯಿ, ಚಾಂಡಾಲ, ನರಪುಂಗವರೆಲ್ಲರಲ್ಲಿಯ ಆತ್ಮವು ಒಂದೇ ಎಂದು ಬಿಂಬಿಸುವ ಸೂಕ್ತಿಗಳಿವೆ... ಪ್ರತಿಕ್ರಿಯಾತ್ಮಕವಾಗಿ ಇತ್ತೀಚೆಗೆ ನಮ್ಮಲ್ಲಿ ಬೆಳೆಯುತ್ತಿರುವ ಮೂಲಭೂತವಾದದ ಬಗ್ಗೆ ಕಳಕಳಿ ಸುಯೋಗ್ಯವೇ. ವಿಶ್ವಾದ್ಯಂತ ಅದರ ಬೀಜಾರೋಪಣ, ಪರಿಪೋಷಣೆ ಎಲ್ಲಿ ನಡೆದಿದೆ ಹಾಗೂ ತತ್ಫಲವಾಗಿ ಭಾರತದ ಪರಿಸರವು ಮಲಿನಗೊಂಡು ಇಲ್ಲಿದ್ದ ಸಾಮರಸ್ಯ, ಸಹಿಷ್ಣುಭಾವಕ್ಕೆ ಭಂಗವನ್ನುಂಟುಮಾಡುತ್ತಿದೆ ಎಂಬುದೂ ಚಿಂತನೀಯ.

ಬೆಳಗಾವಿ **ಅನಂತ ಕಲ್ಲೋಳ**

### ಸೋನಿಯಾ ಗಾಂಧಿ

ಅವರ ಸಾಮಾಜಿಕ ಮುಖದ ಕೊರತೆ, ವಿಶಿಷ್ಟತೆಗಳನ್ನು ಗಮನಿಸದೆ ಅವರನ್ನು ಕೇವಲ ನೆಹರೂ ಮನೆತನದ ಸೊಸೆಯಾಗಿ ಕಾಣುವ ಭಾರತೀಯ ಜಡಮನಸ್ಸಿಗೆ ಹೆಣ್ಣು ಕೇವಲ ತಾಯಿ, ಹೆಂಡತಿ, ಸೊಸೆ ಎಂಬ ಸಾಂಪ್ರದಾಯಿಕ ಚೌಕಟ್ಟಿನಲ್ಲಿ ಮಾತ್ರ ದಕ್ಕಬಲ್ಲಳು. ಆಕೆಯನ್ನು ವಿದೇಶೀ ಸಂಜಾತಳೆಂದು ಆಕ್ಷೇಪಿಸುವುದರಲ್ಲೂ ವ್ಯಕ್ತಿಯ ಹುಟ್ಟೇ ನಿರ್ಣಾಯಕ ಅಂಶವೆಂಬ ಸಂಕುಚಿತವಾದವನ್ನು ಎತ್ತಿ ತೋರಿಸುತ್ತದೆ. ಸೋನಿಯಾ ನಮಗೆ ಬೇಡ. ಏಕೆಂದರೆ ಅವಳಿಗೆ ಯಾವ ರಾಜಕೀಯ ಗಂಧಗಾಳಿಯೂ ಇಲ್ಲ ಎಂಬುದಷ್ಟೇ ಕಾರಣವಾಗಬೇಕು. ಆಗ ಈ ಪಟ್ಟಿಯಲ್ಲಿ ಬೆಳ್ಳಿತೆರೆಯ ಮಿನುಗುತಾರೆಗಳನ್ನೂ ಸೇರಿಸಬಹುದು.

ಮೈಸೂರು **ಆರ್. ವಿ. ರಮಾದೇವಿ**

ಒಂದು ಬೇಸರದ ಸಂಗತಿಯೆಂದರೆ ಸ್ತ್ರೀ ಸಮೂಹವನ್ನೇ ಸೋನಿಯಾ ನೆಪದಲ್ಲಿ ಅರೆದು ಕುಡಿದಂತಿದೆ. ಈ ಹೆಣ್ಣು ಪರಕೀಯಳೆಂದ ಮಾತ್ರಕ್ಕೆ ಅವಳನ್ನು ವಿವಸ್ತ್ರಳನ್ನಾಗಿ ಮಾಡಿ, ಎಣ್ಣೆ ಸುರಿದು ಬೆಂಕಿ ಹಚ್ಚಿದಂತಿದೆ. ಈ ಹೆಣ್ಣಿನ ಬಗ್ಗೆ ಇರುವ ಕಹಿಯನ್ನು ರಾಜಾರೋಷವಾಗಿ ಕಾರಿದಂತಿದೆ.

ಗುತ್ತಲು, ಮಂಡ್ಯ ಜಿಲ್ಲೆ **ಪಿ.ಜವರಾಯಿಗೌಡ**

### ಬಿಕ್ಕಳಿಕೆ

ಗಿರಿಜೆಯ ನಿಷ್ಠೆಗೆ ಮೆಚ್ಚುಗೆ ದೊರೆಯಬೇಕು. ಕಷ್ಟಕ್ಕೆ ಸಹಾನುಭೂತಿ ಇದೆ. ಕೆಲವೇ ವಾಕ್ಯಗಳಲ್ಲಿ ಅವಳ ವ್ಯಕ್ತಿತ್ವದ ಚಿತ್ರಣವಿದೆ. ಪೊಲೀಸರು, ಸ್ವಾಮಿಗಳು ಯಥಾಪ್ರಕಾರ ಲಂಪಟತನ, ಭ್ರಷ್ಟಾಚಾರಗಳಲ್ಲಿ ತೊಡಗಿದ್ದಾರೆ !

ಸುಳ್ಯ **ಕುತ್ಯಾಳ ನಾಗಪ್ಪಗೌಡ**

### ಶಿಕ್ಷಕ ಪ್ರಶಸ್ತಿ

ಅರ್ಜಿಯಲ್ಲಿ ಕೆಲವು ಮೂರ್ಖ ಪ್ರಶ್ನೆಗಳ ಅಂಕಣಗಳಿವೆ. ಅವಕ್ಕೆ ಸುಳ್ಳು ಉತ್ತರ ಬರೆದು ಯಾರದೋ ಮರ್ಜಿ ಹಿಡಿದರೆ ಪ್ರಶಸ್ತಿ ಗ್ಯಾರಂಟಿ. ...ಶಿಕ್ಷಣ ಕ್ಷೇತ್ರಕ್ಕೆ ಒಂದು ನಯಾಪೈಸೆ ಕಾಣಿಕೆ ಸಲ್ಲಿಸದ ಆಷಾಢಭೂತಿಗಳಿಗೂ ಪ್ರಶಸ್ತಿ ಸಿಗುತ್ತಿರುವುದು ತಪ್ಪು.

ಶ್ರೀಮಂಗಲ, ಕೊಡಗು **ಪ್ರೊ॥ ಕಾಳಯ್ಯ**

*(ಹಾಗೆ ಸಾರಾಸಗಟಾಗಿ ದೂಷಿಸಲು ಬರುತ್ತದೆಯೇ ? - ಸಂ)*

ಪ್ರಶಸ್ತಿ ಮೊದಲು ದೊರೆತದ್ದು ಡಾ॥ ಬಿ. ಗುರುಮೂರ್ತಿ ಯವರಿಗೆ. ಆಗ ಅವರು ಅಧಿಕಾರಿಗಳು. ಪಾಠ ಮಾಡಿ ಎಷ್ಟೋ ವರ್ಷ ಆಗಿತ್ತು. ಆಮೇಲೆ ಅವರು ಬೋಧನೆಗೆ ಹಿಂದಿರುಗಿಯೇ ಇಲ್ಲ. ಅದಕ್ಕೇ ಅವರಿಗೆ ಪ್ರಶಸ್ತಿಯೇನು ?

ಹಾಸನ **ಸುಂದರರಾವ್**

# ಎ. ಎನ್. ಮೂರ್ತಿರಾಯರ ಮಾನವಮತ



ಸ್ವದೇಶಿ ಕಪ್ಪುಹಣ ಹಾಗೂ ಅನಿವಾಸಿ ಭಾರತೀಯ ಡಾಲರುಗಳ ಸಹಯೋಗದಿಂದ ದೇವರಿಗೆಂದು ಕಟ್ಟಲಾಗುತ್ತಿರುವ ಸ್ಥಾವರಗಳ ಪ್ರತಿಕ್ರಾಂತಿ-ಪುನರುತ್ಥಾನ ನಡೆಯುತ್ತಿರುವ ಸಂದರ್ಭದಲ್ಲೇ ಪ್ರೊ॥ ಎ. ಎನ್. ಮೂರ್ತಿರಾಯರ ಕೃತಿ ''ದೇವರು'' ಹಲವಾರು ಬಾರಿ ಪುನರ್‌ಮುದ್ರಣಗಳನ್ನು ಕಂಡಿರುವುದು ಒಂದು ಸೋಜಿಗದ ಸಂಗತಿಯಾಗಿದೆ. ಕೋಮುವಾದಿಗಳ 'ಮುಖ್ಯ ವಾಹಿನಿ'ಗೆ ಸೇರಲು ನಿರಾಕರಿಸಿರುವ ನಿರೀಶ್ವರವಾದಿಗಳಿಗಾದರೋ ಈ ಪ್ರಕಟಣೆ ಮಹತ್ವವೂ, ಆಶಾದಾಯಕವೂ ಆದ ವಾಙ್ಮಯ-ಸಾಂಸ್ಕೃತಿಕ ದಾಖಲೆಯೆಂದೇ ತೋರುವುದು.

ವಿಚಾರವಾದಿಗಳು ಈ ಕೃತಿಯ ಬಗ್ಗೆ ಉತ್ಸುಕರಾಗಿರುವರಾದರೂ ಅವರಲ್ಲಿ ಕೆಲವರು, 'ಮೂರ್ತಿರಾಯರು ಇದೇ ಮಾರ್ಗದಲ್ಲಿ ಇನ್ನಷ್ಟು ದೂರ ಕ್ರಮಿಸಬಹುದಾಗಿತ್ತಲ್ಲ' ಎಂದು ಹೇಳುವವರೂ ಇದ್ದಾರೆ.

ಈಗ 'ದೇವರಿಗೆ' ಸಲ್ಲುತ್ತಿರುವ ಸೇವೆ-ಅಭಿಷೇಕ, ವಸ್ತ್ರಾರ್ಪಣ ಇತ್ಯಾದಿ ಸಮಸ್ತ ಉಪಚಾರವೂ - ಎಲ್ಲ ಮಾನವರಿಗೆ, ಅದರಲ್ಲೂ ಮುಖ್ಯವಾಗಿ, ಸಹಜವಾಗಿ, ಮಾನವನಿಗೆ ದೊರೆಯಬೇಕಾದ ಸೌಲಭ್ಯಗಳಿಂದ ವಂಚಿತರಾದವರಿಗೆ ಲಭ್ಯವಾಗಬೇಕು. ಇದು ಸಾಧ್ಯವಾಗುವಂಥ ಸಾಮಾಜಿಕ ವ್ಯವಸ್ಥೆಯನ್ನು ಅಸ್ತಿತ್ವಕ್ಕೆ ತರುವುದೇ ನಮ್ಮ ಗುರಿಯಾಗಬೇಕು (ದೇವರು ಪು.191-92) - ಎಂಬ ಮೂರ್ತಿರಾಯರ ಆದರ್ಶವು ಅತ್ಯಂತ ಸಮಯೋಚಿತವಾಗಿದೆ.

ಆದರೆ ಈ ಗುರಿಯನ್ನು ಸಾಧಿಸುವುದಕ್ಕೆ ನಾವು ಎಂತಹ ಆರ್ಥಿಕ ನೀತಿ, ತತ್ವಗಳನ್ನು ಅನುಸರಿಸಬೇಕು ? ಎಂತಹ ಆರ್ಥಿಕ-ಸಾಮಾಜಿಕ ಸಂಬಂಧಗಳನ್ನು ಅಸ್ತಿತ್ವಕ್ಕೆ ತಂದರೆ ಮೂರ್ತಿರಾಯರ ಮಾನವಮತ ಸಿದ್ಧಿಸುವುದು ? ಅವರ ಪುಸ್ತಕವನ್ನು ಓದಿ ಮುಗಿಸಿದ ನಂತರ ಇಂತಹ ಪ್ರಶ್ನೆಗಳು ಸ್ವಾಭಾವಿಕವಾಗಿಯೇ ನಮ್ಮೆದುರು ನಿಲ್ಲುತ್ತವೆ.

ನಮ್ಮ ದೇಶದಲ್ಲಿ ಇಂದಿರಾ ಗಾಂಧಿಯವರ ಕಾಲದಲ್ಲೇ ಪ್ರಾರಂಭವಾದ ಉದಾರ ಆರ್ಥಿಕ ನೀತಿ ಇತ್ತೀಚಿನ ವರ್ಷಗಳಲ್ಲಿ ಮತ್ತಷ್ಟು ಉಗ್ರವಾಗಿಯೂ ವ್ಯಾಪಕವಾಗಿಯೂ ಬೇರೂರುತ್ತಿದೆ. ಆದರಿಂದಾಗಿ ಹೆಚ್ಚು ಹೆಚ್ಚು ಜನರು ಬಡತನದ ರೇಖೆಗಿಂತ ಕೆಳಗೆ ತಳ್ಳಲ್ಪಡುತ್ತಿದ್ದಾರೆ. ಈ ಕಟು ವಾಸ್ತವವನ್ನು ಲೆಕ್ಕಿಸದೆ ಉದಾರೀಕರಣ-ಖಾಸಗೀಕರಣ ಕಾರ್ಯಕ್ರಮದ ಎರಡನೇ ಹಂತವನ್ನು ಜಾರಿಗೊಳಿಸುವುದಕ್ಕಾಗಿ ಯಶವಂತ ಸಿನ್ಹಾ ತಮ್ಮ ಸರ್ಕಾರವನ್ನು ಸಜ್ಜುಗೊಳಿಸುತ್ತಿದ್ದಾರೆ. ನಮ್ಮ ಯೋಜನಾ ಆಯೋಗವು ಮುಂದಿನ 15 ವರ್ಷಗಳಲ್ಲಿ ಆರ್ಥಿಕ ರಂಗದಲ್ಲಾಗುವ ಬೆಳವಣಿಗೆಗಳ ಅಂದಾಜು ನಕ್ಷೆಯೊಂದನ್ನು ಕಲ್ಪಿಸಿದೆ. ಬಹು ಸ್ಥೂಲವಾಗಿ, ಸಂಕ್ಷಿಪ್ತವಾಗಿ ಆ ಅಂದಾಜಿನ ಒಂದೇ ಒಂದು ಅಂಶವನ್ನು ನಾವಿಲ್ಲಿ ಉಲ್ಲೇಖಿಸಬಹುದು: ಅದರ ಪ್ರಕಾರ 1997ರಲ್ಲಿದ್ದ 397 ಮಿಲಿಯ ಕಾರ್ಮಿಕರ ಸೇನೆಯು 2012ನೇ ವರ್ಷಕ್ಕೆ 563 ಮಿಲಿಯ ಸಂಖ್ಯೆಯನ್ನು ಮುಟ್ಟುತ್ತದೆ. ಈಗಿರುವ ನಿರುದ್ಯೋಗಿಗಳ ಪಡೆಗೆ ಮತ್ತು ಅದಕ್ಕೆ ಮುಂದೆ ಸೇರುವ ಉದ್ಯೋಗಾರ್ಹ ವಯಸ್ಕರಿಗೆ ಕೆಲಸ (ಮತ್ತು ಅದರಿಂದ ಆದಾಯ) ಒದಗಿಸಬೇಕಾದರೆ ಮುಂಬರುವ ವರ್ಷಗಳಲ್ಲಿ ನಮ್ಮ ರಾಷ್ಟ್ರೀಯ ಆರ್ಥಿಕ ಬೆಳವಣಿಗೆ ವಾರ್ಷಿಕವಾಗಿ ಸರಾಸರಿ ಪ್ರತಿಶತ 7.4ರಷ್ಟು ಬೆಳೆಯುತ್ತಾ ಹೋಗಬೇಕಾಗುತ್ತದೆ. ಈ ಗುರಿಯನ್ನು ಸಾಧಿಸಲು ಅವಶ್ಯವೆನಿಸುವ ಬಂಡವಾಳ ಹೂಡಿಕೆ, ವಿದೇಶಿ ವ್ಯಾಪಾರದ ಹೆಚ್ಚಳ ಇತ್ಯಾದಿ ನಮ್ಮಿಂದ ಸಾಧ್ಯವಾಗದ ಮಾತು. ಇಂತಹ ಆರ್ಥಿಕ ಬೆಳವಣಿಗೆಯ ದರವನ್ನು (ದೀರ್ಘಾವಧಿಯಲ್ಲಿ) ನಾವು ಹಿಂದೆಂದೂ ಸಾಧಿಸಿಲ್ಲ. ಮುಂದಿನ 15 ವರ್ಷಗಳಲ್ಲಿ ಅದನ್ನು ಸಾಧಿಸುತ್ತೇವೆಂಬ ಮಹತ್ವಾಕಾಂಕ್ಷೆ ಹೊಂದುವುದಕ್ಕೆ ನಮ್ಮ ಈಚಿನ ವರ್ಷಗಳ ಬಜೆಟ್‌ಗಳಲ್ಲಿ ಯಾವ ಆಧಾರವೂ ಇಲ್ಲ - ಎಂದು ಆರ್ಥಿಕ ಕ್ಷೇತ್ರವನ್ನು ಗಂಭೀರವಾಗಿ ಅಭ್ಯಾಸ ಮಾಡಿರುವ ತಜ್ಞರು ಅಭಿಪ್ರಾಯಪಟ್ಟಿದ್ದಾರೆ (ದಿ ಹಿಂದು ಪತ್ರಿಕೆ, 20.2.99). ಇದರರ್ಥ, ಈಗ ಬಡತನದ ರೇಖೆಗಿಂತ ಕೆಳಗಿರುವ ಕೋಟ್ಯಾಂತರ ಮಂದಿಯಲ್ಲಿ ಬಹುಪಾಲು ಜನರು ಅದೇ ಅಧೋಗತಿಯಲ್ಲಿ ಮುಂದುವರೆದಾರೆಂದು ಅವರ ಹಸ್ತ ರೇಖೆಗಳನ್ನು ಓದದೆಯೇ ಭವಿಷ್ಯ ನುಡಿಯಬಹುದು.

ಅಮೇರಿಕದಲ್ಲಿ ಸಹ, ಅಲ್ಲಿಯ ಸಾಮಾನ್ಯ ಜನರ ದೃಷ್ಟಿಯಲ್ಲಿ, ಆರ್ಥಿಕ ಪರಿಸ್ಥಿತಿ ಅಷ್ಟೊಂದು ಆಶಾದಾಯಕವಾಗಿಲ್ಲ. 1993ರಲ್ಲಿ ಕಾರ್ಮಿಕ ಪಡೆಯ ಪ್ರತಿಶತ 27ರಷ್ಟು ಮಂದಿ ಅಲ್ಲಿಯ ಬಡತನ ರೇಖೆಯನ್ನು ಮೀರುವಷ್ಟು ವೇತನಗಳನ್ನು ಸಂಪಾದಿಸುತ್ತಿರಲಿಲ್ಲ. ಇದೇ ದಶಕದಲ್ಲಿ

**ಡಾ॥ ಎಸ್. ಗುರುದತ್**

ಕಾರ್ಪೊರೇಟ್ ಸಂಸ್ಥೆಯ ಒಬ್ಬ ಸರಾಸರಿ ಮುಖ್ಯ ನಿರ್ವಾಹಕ ಅಧಿಕಾರಿಯ (ಸಿ ಇ ಒ) ವರಮಾನ ಒಬ್ಬ ಸಾಮಾನ್ಯ ಫ್ಯಾಕ್ಟರಿ ಕಾರ್ಮಿಕನದಕ್ಕಿಂತ 149 ಪಟ್ಟು ಹೆಚ್ಚಾಗಿತ್ತು ; 1960ರ ದಶಕದಲ್ಲಿ ಅದು 40 ಪಟ್ಟು ಹೆಚ್ಚಾಗಿತ್ತು (ದಿ ಹಿಂದು 31-12-97).

ಅಂದರೆ, ಉದಾರೀಕರಣ-ಖಾಸಗೀಕರಣದ ಜಾಗತಿಕ ಆರ್ಥಿಕ ನೀತಿಯ ಫಲವಾಗಿ ಅಮೇರಿಕದಲ್ಲಿ ಸಹ ಕೆಳಸ್ತರದಲ್ಲಿ ಅತಿ ಬಡತನ ಹಬ್ಬುತ್ತಿದೆ ; ಅದೇ ಸಮಯಕ್ಕೆ ಮೂರನೆಯ ವಿಶ್ವದಲ್ಲಿ ಮೊದಲನೇ ವಿಶ್ವದ ಶ್ರೀಮಂತಿಕೆಯ ನಡುಗಡ್ಡೆಗಳು ಸೃಷ್ಟಿಯಾಗುತ್ತಿವೆ. ಇಂತಹ ಬೆಳವಣಿಗೆಗಳನ್ನು ಮೂರ್ತಿರಾಯರು ಗಮನಿಸಿಲ್ಲವೆಂದಲ್ಲ, ಖಾಸಗಿ ಬಂಡವಾಳದ ವ್ಯವಸ್ಥೆ ಅವರಿಗೆ ಒಪ್ಪಿಗೆಯಾಗಿದೆಯೆಂದು ಹೇಳುವಂತಿಲ್ಲ. ಅವರು ಅಮೇರಿಕಾ ಯಾತ್ರೆಯಲ್ಲಿದ್ದಾಗ, ರೆಸ್ಟಾರೆಂಟಿಗೆ ಹೋಗದೆ, ತಾವೇ ಖುದ್ದಾಗಿ ಒಂದು ಊಟ ತಯಾರಿಸಿಕೊಂಡು, ಅದರಿಂದ ರೆಸ್ಟಾರೆಂಟಿನ ಮಾಲೀಕನಿಗೆ ಲಾಭ ತಪ್ಪಿಸಿದ್ದಕ್ಕಾಗಿ ಹೆಮ್ಮೆಪಡುತ್ತ, 'ಈ bloated capitalists ಗೆ (ಬೊಜ್ಜು ಬೆಳೆದ ಬಂಡವಾಳಗಾರರಿಗೆ) ಹಾಗೇ ಆಗಬೇಕು!' ಎಂದು ಲಘುವಾಗಿ ಶಪಿಸಿದ್ದಾರೆ (ಪು. 247). 'ಬಂಡವಾಳಗಾರರು ಪಟ್ಟಭದ್ರರಾಗಿ ಕುಳಿತು ರಾಜಕೀಯ ಮತ್ತು ಆರ್ಥಿಕ ಸೂತ್ರಗಳನ್ನು ತಮ್ಮ ಕೈಯಲ್ಲಿಟ್ಟುಕೊಂಡು ಮಾನವ ಕುಲವನ್ನು ತಮ್ಮ ಪುಂಗಿಯ ಲಯಕ್ಕೆ ಇವತ್ತೂ ಕುಣಿಸುತ್ತಿದ್ದಾರೆ' ಎಂದೂ ಬರೆದಿದ್ದಾರೆ (ದೇವರು, ಪು. 135-36).

ಇಷ್ಟಾಗಿಯೂ ಸಾಮಾನ್ಯ ಸೌಲಭ್ಯಗಳಿಂದ ವಂಚಿತರಾಗಿರುವ ಕೋಟಿಗಟ್ಟಲೆ ಜನರಿಗೆ ಆ ಸೌಲಭ್ಯಗಳನ್ನು ಒದಗಿಸಲು ಎಂತಹ ಆರ್ಥಿಕ-ಸಾಮಾಜಿಕ ಸಂಬಂಧಗಳನ್ನು ಅನಾವರಣಗೊಳಿಸಬೇಕು ಎಂಬುದರ ಬಗ್ಗೆ ನಿಖರವಾದ, ಮೂರ್ತವಾದ ಒಂದು ಬದಲಿ ವ್ಯವಸ್ಥೆಯ ತತ್ತ್ವವನ್ನು ಅವರು ಹೊರಗೆಡಹಿಲ್ಲವೆಂದು ತೋರುತ್ತದೆ. ಅವರ ಚಿಂತನೆಗೆ ಅಂಥದೊಂದು ಆಯಾಮವನ್ನು ಕೊಟ್ಟಿದ್ದಾದರೆ ಅವರ ಮಾನವಮತದ ಬುನಾದಿ ಭದ್ರವಾಗುತ್ತದೆಯೆಂದು ನನಗನ್ನಿಸುತ್ತದೆ.

ಇನ್ನೊಂದು ಮಾತು. ಮಾನವಕುಲದಲ್ಲಿ ಒಳಿತು ಪ್ರಸರಿಸುತ್ತಿರುವ ಬಗೆಯನ್ನು ಮೂರ್ತಿರಾಯರು ಹೀಗೆ ವರ್ಣಿಸಿದ್ದಾರೆ : ನಮ್ಮ ಯೋಚನೆಗಳು, ಭಾವನೆಗಳು ಇತ್ಯಾದಿ ಅಲೆಅಲೆಯಾಗಿ ಒಬ್ಬರಿಂದ ಮತ್ತೊಬ್ಬರ ಮೇಲೆ ಪ್ರಭಾವ ಬೀರುತ್ತವೆ. ಅಂತಹ ಅಲೆಗಳು ಕೋಟ್ಯಂತರ ಜನರೆಲ್ಲರಿಂದಲೂ ಹರಡುತ್ತಿವೆ, ಸಾಗುತ್ತಿವೆ, ಪರಿಣಾಮವನ್ನುಂಟು ಮಾಡುತ್ತಿವೆ... ಇವೆಲ್ಲದರ ಪರಿಣಾಮವಾಗಿ ವಿಶ್ವದಲ್ಲಿ ಪರಮಪ್ರಜ್ಞೆಯೊಂದು ಬೆಳೆಯುತ್ತಿದೆ. ಅದರಲ್ಲಿ ಒಳ್ಳೆಯದರ ಕೈ ಮೇಲಾಗುತ್ತಿದೆ (ದೇವರು, ಪು. 174-75).

ಒಟ್ಟಿನಲ್ಲಿ ಕೆಡಕು ಕಡಿಮೆಯಾಗಿ, ಮನುಷ್ಯ ಹೆಚ್ಚುಹೆಚ್ಚಾಗಿ ಮಾನವನಾಗುತ್ತಿದ್ದಾನೆ, ಮತ್ತು ಈ ಸಾಧನೆ ಮಾನವಕುಲದ್ದೇ ಹೊರತು 'ದೇವರ'ದ್ದಲ್ಲ ಎಂಬ ವಾದವನ್ನು ವಿಚಾರಪರರು ಬಹುಮಟ್ಟಿಗೆ ಒಪ್ಪುತ್ತಾರೆ. ಆದರೆ, ದಿನನಿತ್ಯದ ಅಗತ್ಯತೆಗಳನ್ನೂ ಆತ್ಮಘಟನೆಯನ್ನೂ ಪೂರೈಸಿಕೊಳ್ಳುವ ಸಲುವಾಗಿ ಸಾಮಾನ್ಯ ಜನರು ವ್ಯಕ್ತಪಡಿಸಿದ ವಿರೋಧ, ಪ್ರತಿಭಟನೆ ; ಅವರು ನಡೆಸಿದ ಸಂಘರ್ಷ, ಅಂತರ್‌ಯುದ್ಧ, ಕ್ರಾಂತಿಗಳ ಮೂಲಕ ಸ್ವಲ್ಪಮಟ್ಟಿಗೆ ಕೇಡನ್ನು ಹಿಮ್ಮೆಟ್ಟಿಸಿ ಒಳಿತನ್ನು ಸಾಧಿಸಲು ಸಾಧ್ಯವಾಗಿದೆ ಎಂಬ ಸಂಗತಿಯನ್ನು ಇತಿಹಾಸ ಸಾರಿಹೇಳುತ್ತಿದೆ. ಹೋರಾಟಗಳಿಲ್ಲದ ಇತಿಹಾಸವೇ ಇಲ್ಲವೆಂದು ಹೇಳಬಹುದೇನೋ!

ಮೂರ್ತಿರಾಯರದು ನಿಜಕ್ಕೂ - ನೂರರ ಹರೆಯದವರಾಗಿದ್ದಾಗಲೂ - 'ತೆರೆದ ಮನ'. ''ದೇವರು'' ಕೃತಿಯ ಮುಂದಿನ ಆವೃತ್ತಿಯನ್ನು ಬರೆಯುವಾಗ ಅವರು ಮೇಲ್ಕಾಣಿಸಿದ ವಿಮರ್ಶೆಯನ್ನು ಪರಿಗಣಿಸುತ್ತಾರೆಂದು ನಿರೀಕ್ಷಿಸಬಹುದಾಗಿದೆ.

**ಪ್ರೊ॥ ಎ. ಎನ್. ಮೂರ್ತಿರಾಯರ ಕೃತಿಗಳಿಂದ.....**

ಸಂಕಟವನ್ನು ವಾಸ್ತವ ಜೀವನದಲ್ಲಿ ನೋಡುವುದು ಕಷ್ಟ; ಅನುಭವಿಸುವುದು ಮತ್ತೂ ಕಷ್ಟ. ಆದರೆ ಘನವಾದ ಸಾಹಿತ್ಯ ನಮ್ಮ ಮೇಲೆ ವಿಚಿತ್ರವಾದ ಪರಿಣಾಮವನ್ನು ಉಂಟುಮಾಡುತ್ತದೆ: ಜೀವನದಲ್ಲಿ ಸಹ್ಯವಲ್ಲದ್ದು ಯಾವುದೋ ಗಾರುಡಿಯಿಂದ ಸಾಹಿತ್ಯದಲ್ಲಿ ಸಹ್ಯ ಮಾತ್ರವಲ್ಲ, ಪ್ರಿಯವೂ ಆಗುತ್ತದೆ. ಷೇಕ್ಸ್‌ಪಿಯರ್‌ನ ರುದ್ರನಾಟಕಗಳನ್ನು, ಸೀತಾಪರಿತ್ಯಾಗದ ಕರುಣಕಥೆಯನ್ನು ಜನರು ಮತ್ತೆ ಮತ್ತೆ ಓದಿ ಕಣ್ಣೀರು ಕರೆದು ಒಂದು ಬಗೆಯ ಆನಂದವನ್ನು ಅನುಭವಿಸುತ್ತಾರೆ... ಸಂಸ್ಕೃತಿ ಬೆಳೆಯಬೇಕಾದರೆ ಈ ಬಗೆಯ ಪರಿಣಾಮ ಉಂಟಾಗಬೇಕು.

-ಸಂಸ್ಕೃತಿ ಮತ್ತು ಸಾಹಿತ್ಯ (1982)

# ವಂದಿಪೆವು ನಿನಗೆ ಗಣನಾಥ


ಆರ್. ಎಸ್. ಎನ್. ರೇಖಾಚಿತ್ರ

ಕೆ. ಎಲ್. ಗೋಪಾಲಕೃಷ್ಣ ರಾವ್

ಇಂದು ದೇವತೆಗಳಲ್ಲೆಲ್ಲ ಗಣಪತಿ ಅತ್ಯಂತ ಜನಪ್ರಿಯನಾದವ. ಇವನ ಮಂದಿರಗಳು ಊರಿನ ಬೀದಿ ಬೀದಿಗಳಲ್ಲೂ ಮೂಲೆ ಮೂಲೆಗಳಲ್ಲೂ ಕಾಣಿಸಿಕೊಂಡಿವೆ. ಎಷ್ಟೋ ಕಡೆ ರಾತ್ರೋರಾತ್ರಿ ಉದ್ಭವಿಸಿವೆ. ಜಾತಿ, ಮತ, ಲಿಂಗ ಭೇದವಿಲ್ಲದೆ ಎಲ್ಲರೂ ಇವನನ್ನು ಆರಾಧಿಸುವವರೇ. ಯಾವ ಕಾರ್ಯ ಕೈಗೊಳ್ಳುವುದಕ್ಕೂ ಮುನ್ನ ಇವನ ಪೂಜೆ ಮಾಡಿದರೆ ಕಾರ್ಯಸಿದ್ಧಿಯಾಗುವುದೆಂಬ ನಂಬಿಕೆ ಬಲವಾಗಿ ಬೇರೂರಿದೆ. ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಉತ್ತೀರ್ಣರಾಗಲೂ ಇವನ ಮೊರೆ ಹೋಗುತ್ತಾರೆ. ಇವನು ಸಿದ್ಧಿ-ಬುದ್ಧಿ ವಿನಾಯಕನಷ್ಟೆ

ಪ್ರತಿ ವರ್ಷವೂ ಭಾದ್ರಪದ ಶುದ್ಧ ಚೌತಿಯ ದಿನ ದೇಶದ ಜನರೆಲ್ಲ ಗಣಪತಿಯ ಪೂಜೆಯನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. ಇವನಿಗೆ ನಾನಾ ರೂಪ ವೇಷಗಳನ್ನು ತೊಡಿಸಿ ಮೆರವಣಿಗೆಯಲ್ಲಿ ಒಯ್ಯುತ್ತಾರೆ. ಇವನು ಎಲ್ಲರ ಇಷ್ಟ ದೇವತೆ. ಎಲ್ಲರ ಅಭೀಪ್ಸಿತಾರ್ಥಗಳನ್ನೂ ಸಿದ್ಧಿಗೊಳಿಸುವವನಷ್ಟೆ ಅಲ್ಲ, ಮುಕ್ತಿ ಪ್ರದಾಯಕನೂ ಹೌದು. ಹುಲು ಮಾನವರೇನು, ದೇವಾಧಿದೇವತೆಗಳೂ ಇವನ ಆರಾಧಕರು.

**ಗಣಪತಿಯ ಹುಟ್ಟು**

ಇಂಥ ಮಹಾನ್ ದೇವತೆಯ ಹುಟ್ಟಿನ ಬಗೆಗೆ ಅನೇಕ ಅಸಾಧಾರಣ ಕಥೆಗಳಿವೆ. ಇವನು ಹೆಂಗಸಿನ ಪ್ರಮೇಯವಿಲ್ಲದೆ, ಪುರುಷ ಪ್ರಸಕ್ತಿಯಿಲ್ಲದೆ ಹುಟ್ಟಿದವ ಎನ್ನುತ್ತದೆ ಒಂದು ಕಥೆ. ಕೈಲಾಸದಲ್ಲಿ ಪಾರ್ವತಿ ಗಂಡನ ಆಗಮನವನ್ನು ದೇವತೆಗಳಿಂದ ತಿಳಿದು (ಅವನೆಲ್ಲಿಗೆ ಪ್ರವಾಸ ಹೋಗಿದ್ದನೋ ತಿಳಿಯದು) ಆನಂದಗೊಂಡು ಅಭ್ಯಂಗ ಸ್ನಾನ ಮಾಡಿ ತನ್ನ ದೇಹದಿಂದ ಬಂದ ಕೊಳೆಯಿಂದ ಒಬ್ಬ ಬಾಲಕನನ್ನು ಮಾಡಿ, ಅದಕ್ಕೆ ಪ್ರಾಣ ಕೊಟ್ಟು ಬಾಗಿಲು ಕಾಯುವುದಕ್ಕಾಗಿ ಇಟ್ಟಳು, ಇವನೇ ಗಣಪತಿ ಎನ್ನುತ್ತದೆ ಇನ್ನೊಂದು ಕಥೆ. ಮತ್ತೊಂದು ಕಥೆಯ ಪ್ರಕಾರ, ಪಾರ್ವತಿ ತಾನು ಉಪಯೋಗಿಸುವ ಎಣ್ಣೆಯಲ್ಲಿ ತನ್ನ ದೇಹದ ಮಲಿನಗಳನ್ನು ಕೂಡಿಸಿ ಗಂಗೆಯಲ್ಲಿಗೆ ಹೋಗಿ ಆನೆಯ ತಲೆ ಇರುವ ಮಾಲಿನಿ ಎಂಬ ಹೆಸರಿನ ಒಬ್ಬ ರಾಕ್ಷಸಿಗೆ ಅದನ್ನು ಕುಡಿಸಿದಳಂತೆ. ಆಕೆ ಗರ್ಭಧರಿಸಿ ಹಡೆದ ಮಗುವೇ ಗಣಪತಿ.

ಮತ್ತೊಂದು ವಿಶ್ವಸನೀಯ ಪುರಾಣ ಕಥೆ ಹೀಗೆ ಹೇಳುತ್ತದೆ : ಶಿವನ ವಾಸಸ್ಥಾನವಾದ ಸೋಮನಾಥ ಎಂಬ ಗುಡ್ಡಗಾಡು ಪ್ರದೇಶದಲ್ಲಿ ಶೂದ್ರರು, ಹೀನ ಜಾತಿಯ ಜನರು ತಮ್ಮ ಹೆಂಗಸರೊಂದಿಗೆ ಬಂದು ಬೀಡು ಬಿಟ್ಟರು. ಇಂದ್ರನಿಗೆ ಈ ಹೀನ ಜಾತಿಯ ಜನ ಶಿವನ ನಿವಾಸವನ್ನು ಆಕ್ರಮಿಸಿಕೊಂಡುದು ಇಷ್ಟವಾಗಲಿಲ್ಲ. ಆದರೆ ಶಿವ ಅವರನ್ನು ಹೊರದೂಡಲು ಇಷ್ಟಪಡಲಿಲ್ಲ. ಹಾಗಾಗಿ ದೇವತೆಗಳು ಪಾರ್ವತಿಯ ಬಳಿ ಹೋದರು. ಅವಳು ತನ್ನ ದೇಹದ ಮಲಿನ ಮಣ್ಣಿನಿಂದ ಒಂದು ಮೂರ್ತಿ ತಯಾರಿಸಿ, ಅವನು ವಿಘ್ನನಾಯಕನೆಂದೂ, ವಿವಿಧ ಗಣಗಳ ಆಕ್ರಮಣಗಳನ್ನು ತಡೆಯಬಲ್ಲವನೆಂದೂ ಆಶ್ವಾಸನೆ ಇತ್ತಳು.

ಈ ಕಥೆಗಳೆಲ್ಲಾ ಎಷ್ಟೇ ರೋಚಕವಾಗಿದ್ದರೂ, ಗಣಪತಿಯ ಹುಟ್ಟು ಅಸಾಧಾರಣವಾದುದು ಹಾಗೂ ಅದು ರಾಕ್ಷಸರೊಂದಿಗೆ, ಅರಣ್ಯ ಜಾತಿಯ ಜನಗಳೊಂದಿಗೆ ಸಂಬಂಧಿತವಾಗಿದೆ ಎಂಬ ಅಂಶವಂತೂ ಸ್ಫುಟಗೊಳ್ಳುತ್ತದೆ.

**ಲಟ್ಟಣಿಗೆ**

ಲಟ್ಟಣಿಗೆ
ಅಡಿಗೆ ಮನೆಯಲ್ಲಿ
ಕೆಲಸ ಮಾಡಿದ್ದಕ್ಕಿಂತ
ಹಾಸ್ಯ ಸಾಹಿತ್ಯದಲ್ಲಿ
ದುಡಿದದ್ದೇ ಹೆಚ್ಚು,
ಗಂಡಿನ ತಲೆ ಮೇಲೆ
ಗಂಟುಗಳನ್ನಿಟ್ಟು !

– ಹಾಲಾಡಿ ಮಾರುತಿರಾವ್

**ಗಣಗಳ ಪತಿ**

ಹುಟ್ಟು ಹೇಗಾದರೂ ಇರಲಿ, ಗಣಪತಿ ಎಂಬ ಹೆಸರಾದರೂ ಹೇಗೆ ಬಂದಿತು ? ಇದನ್ನು ತಿಳಿದುಕೊಳ್ಳಲು ನಾವು ಸಮಾಜದ ಪದ್ಧತಿಗಳು ಬೆಳೆದುಬಂದ ಕಡೆಗೆ ಸ್ವಲ್ಪ ಗಮನ ಹರಿಸಬೇಕು. ಗಣ ಎಂಬ ಪದದ ನಿಜವಾದ ಅರ್ಥವನ್ನು ತಿಳಿಯಬೇಕು.

ಆದಿಮಾನವ . ಬೇಟೆಯಾಡಿಕೊಂಡು ಜೀವಿಸುತ್ತಿದ್ದನಷ್ಟೆ. ಆಗಿದ್ದುದು ಸಾಮೂಹಿಕ ಜೀವನ ಪದ್ಧತಿ. ಅದರಲ್ಲಿ ಯಾವುದೇ ರೀತಿಯ ನಿರ್ಬಂಧ ಕಟ್ಟುಪಾಡುಗಳಿರಲಿಲ್ಲ, ಹಕ್ಕು ಕರ್ತವ್ಯಗಳ ನಡುವೆ ವ್ಯತ್ಯಾಸವಿರಲಿಲ್ಲ. ವರ್ಗ ಅಂತಸ್ತುಗಳು ಹೋಗಲಿ, ಗಂಡು-ಹೆಣ್ಣು ಭೇದವೂ ಇರಲಿಲ್ಲ. ಎಲ್ಲರೂ ಒಟ್ಟಿಗೆ ದುಡಿಯುತ್ತಿದ್ದರು, ಲಭಿಸಿದ ಫಲವನ್ನು ಸಮಾನವಾಗಿ ಹಂಚಿಕೊಂಡು ತಿನ್ನುತ್ತಿದ್ದರು. ಅದೊಂದು ರೀತಿಯ ಆದಿಮ ಸಾಮ್ಯವಾದಿ ಸಮಾಜ ಎನ್ನುವಂಥ ವ್ಯವಸ್ಥೆಯಾಗಿದ್ದಿತು. ಆಗ ಅವರು ಬಳಸುತ್ತಿದ್ದುದು ಕೇವಲ ಕಲ್ಲು ಕೊಂಬೆಗಳಂಥ ಅಪರಿಷ್ಕೃತ ಆಯುಧಗಳಷ್ಟೆ.

ಕಾಲಾನಂತರ ಅವರ ಈ ಉತ್ಪಾದನಾ ಸಾಧನಗಳಲ್ಲಿ ಬೆಳವಣಿಗೆಯಾದಂತೆ, ಕಲ್ಲು ಕೊಂಬೆ ಈಟಿಗಳು ಹೋಗಿ ನೇಗಿಲು ಉಳಿ ಮುಂತಾದ ಆಯುಧಗಳು ಬಂದವು. ಅವರ ಜೀವನ ವಿಧಾನವೂ ಅವರ ನಡುವಿನ ಸಂಬಂಧಗಳೂ ಬದಲಾದವು. ಬೇಟೆಗಾರ ಸಮಾಜ ಪದ್ಧತಿ ಹೋಗಿ ಪಶುಪಾಲನೆ ಹಾಗೂ ಕೃಷಿ ಸಮಾಜ ಪದ್ಧತಿ ಬಂದಿತು. ಅದರೊಂದಿಗೇ ಜನಗಳ ನಡುವೆ ವರ್ಗ ವ್ಯತ್ಯಾಸ ಉಂಟಾಯಿತು. ಕೃಷಿಕಾರ ಜನರು ಒಂದು ಸ್ಥಳದಲ್ಲಿ ನೆಲೆನಿಂತು ಜೀವನ ಸಾಗಿಸುತ್ತಿದ್ದಲ್ಲಿ ಬೇಟೆಗಾರರೂ ಪಶುಪಾಲಕರೂ ವಲಸೆ ಜೀವನ ನಡೆಸುತ್ತಿದ್ದರು. ಸಹಜವಾಗಿಯೇ ಇವರ ನಡುವೆ ಕಲಹಗಳು ಉಂಟಾಗುತ್ತಿದ್ದವು. (ಮೇಲೆ ತಿಳಿಸಿದ ಪುರಾಣ ಕಥೆಯಲ್ಲಿ ಅರಣ್ಯ ಪಂಗಡಗಳು ಶಿವನ ವಾಸಸ್ಥಾನದಲ್ಲಿ ಬೀಡು ಬಿಟ್ಟುದು ಇಂಥದೇ ಒಂದು ಪ್ರಸಂಗವಾಗಿರಬೇಕು).

ಭಾರತದ ವಿಷಯದಲ್ಲಿ ಮತ್ತೊಂದು ಅಂಶವನ್ನೂ ಗಮನಕ್ಕೆ ತಂದುಕೊಳ್ಳಬೇಕು. ಅದೆಂದರೆ– ಆರ್ಯರ ಆಗಮನ. ಇವರು ತಮ್ಮನ್ನು ಉತ್ತಮ ವರ್ಗದವರೆಂದು ಕರೆದುಕೊಂಡರು. ಸ್ಥಳೀಯರನ್ನು ರಾಕ್ಷಸರನ್ನಾಗಿ, ಕೀಳುವರ್ಗದವರನ್ನಾಗಿ ಕಂಡರು. ಅಷ್ಟೇ ಅಲ್ಲ, ಆರ್ಯರ ನಡುವೆಯೇ ಮೇಲುವರ್ಗ (ವೈದಿಕ ಜನ) ಹಾಗೂ ಕೀಳು ವರ್ಗ (ಬುಡಕಟ್ಟು ಜನ)ವೆಂಬ ಪಂಗಡಗಳೂ ಉಂಟಾಗಿದ್ದವು. ಉತ್ತಮರು ತಾವು ನಡೆಸುತ್ತಿದ್ದ ಯಜ್ಞ ಯಾಗಾದಿಗಳಿಗೆ ಅಡ್ಡಿ ಉಂಟುಮಾಡುತ್ತಿದ್ದ ಕೀಳುವರ್ಗದವರನ್ನು ಗಣಗಳನ್ನಾಗಿ ವರ್ಣಿಸಿದರು.

ಇಂಥ ಗಣದ (ಬುಡಕಟ್ಟಿನ) ಅಧಿಪತಿಯೇ ಗಣಪತಿ. ಗಣಗಳು ಒಂದಲ್ಲ, ಅನೇಕವಿದ್ದವು. ಆದ್ದರಿಂದ ಆದಿಯಲ್ಲಿ ಅನೇಕ ಗಣಪತಿಗಳೂ ಇದ್ದರು. ಆದ್ದರಿಂದಲೇ ಯಜುರ್ವೇದದ ವಾಜಸನೇಯಿ ಸಂಹಿತೆಯಲ್ಲಿ ಗಣಪತಿಗಳು ಎಂಬ ಬಹುವಚನ ಪ್ರಯೋಗವಿದೆ. ಮಾನವ ಗೃಹ್ಯ ಸೂತ್ರಗಳಲ್ಲಿ ನಾಲ್ವರು ವಿನಾಯಕರಿಗೆ, ಯಾಜ್ಞವಲ್ಕ್ಯ ಸಂಹಿತೆಯಲ್ಲಿ ಅನೇಕ ಗಣಪತಿಗಳಿಗೆ ಉಲ್ಲೇಖವಿದೆ. ಮಹಾಭಾರತದಲ್ಲೂ ಗಣಪತಿಗಳು, ಗಣೇಶ್ವರರು, ವಿನಾಯಕರುಗಳೆಂದು ಅನೇಕ ಜನರಿದ್ದಂತೆ ಪ್ರಸ್ತಾಪವಿದೆ.

ಇದನ್ನೆಲ್ಲ ನೋಡಿದಾಗ ಒಂದು ಅಂಶ ಎದ್ದು ಕಾಣುತ್ತದೆ. ಆದಿಕಾಲದ ಪುರಾಣ ಕಥೆಗಳಲ್ಲಿ ಗಣಪತಿ ವಿಘ್ನ ನಿವಾರಕನಾಗಿರಲಿಲ್ಲ, ಆದರೆ ವಿಘ್ನ ಕರ್ತೃವಾಗಿದ್ದ. ಗಣಪತಿಗಳ ಬಗೆಗೆ ಆಗ ನಾಗರಿಕ (ವೈದಿಕ) ಜನರಲ್ಲಿ ಭಯವಿತ್ತು. ಅವರು ಗಣಪತಿಗಳನ್ನು ದುಷ್ಟರನ್ನಾಗಿ, ಕೆಟ್ಟ ಪರಿಣಾಮಗಳನ್ನು ಉಂಟುಮಾಡುವವರನ್ನಾಗಿ ಭಾವಿಸಿದ್ದರು.

ಆ ಕಾಲದ ಶಿಲಾವಿಗ್ರಹಗಳನ್ನು ನೋಡಿದಾಗ ಗಣಪತಿಯ ಬಗೆಗೆ ಜನರಲ್ಲಿ ಎಂಥ ದ್ವೇಷವಿದ್ದಿತೆಂದು ತಿಳಿದುಬರುತ್ತದೆ. ಅವುಗಳಲ್ಲಿ ವಿನಾಯಕನನ್ನು ದಿಗಂಬರನನ್ನಾಗಿ, ಆಭರಣರಹಿತನನ್ನಾಗಿ, ವಿಕಾರ ಭಯಂಕರ ಸ್ವರೂಪದವನನ್ನಾಗಿ ಚಿತ್ರಿಸಲಾಗಿದೆ. ಬಂಗಾಳದ ಕೆಲವು ಶಿಲಾವಿಗ್ರಹಗಳಲ್ಲಿ ಗಣಪತಿ ಪದ್ಮಾಸನದ ಕೆಳಗೆ ಸಾಷ್ಟಾಂಗ ಬಿದ್ದಂತೆ, ಹೋರಾಡಿ ಶರಣಾಗತನಾದಂತೆ ಚಿತ್ರಿತನಾಗಿದ್ದಾನೆ. ಟಿಬೆಟ್ಟಿನ ಕೆಲವು ಶಿಲ್ಪಿಗಳಲ್ಲಿ ಮಹಾಕಾಲನು ಗಣಪತಿಯನ್ನು ಭೂಮಿಗೆ ಹಾಕಿ ಕಾಲಿನಿಂದ ತುಳಿಯುತ್ತಿರುವಂತೆ ತೋರಿಸಲಾಗಿದೆ. ಇದರಿಂದೆಲ್ಲ ತಿಳಿದುಬರುವ ಒಂದು ಅಂಶವೆಂದರೆ, ಗಣಪತಿ ಆದಿಕಾಲದ ಗಣಗಳಲ್ಲೊಂದರ ಒಡೆಯನಾಗಿದ್ದ ಮತ್ತು ಉತ್ತಮ ಕುಲದ ಜನರ (ಆರ್ಯರ, ವೈದಿಕರ) ದ್ವೇಷಕ್ಕೆ ಪಾತ್ರನಾಗಿದ್ದ.

### ಏಕದಂತ

ಗಣಪತಿಯನ್ನು ಏಕದಂತ ಎಂದು ಕರೆಯಲಾಗುತ್ತದೆಯಷ್ಟೆ. ಅನೇಕವನ್ನು (ಅಂದರೆ ವಿಪುಲವಾಗಿ) ಕೊಡುವ ಏಕದಂತ ಅವನು (ಅನೇಕದಂ ತಂ ಭಕ್ತಾನಾಂ ಏಕದಂತಂ ಉಪಾಸ್ಮಹೇ). ಈ ಹೆಸರು ಹೇಗೆ ಬಂದಿತು ? ವ್ಯಾಸರು ಮಹಾಭಾರತವನ್ನು ರಚಿಸಿದಾಗ, ಅದನ್ನು ಬರೆದಿಡಲು ಗಣಪತಿ ಲಿಪಿಕಾರನಾಗಿ ತನ್ನ ಒಂದು ಕೋರೆಹಲ್ಲನ್ನು ಕಿತ್ತು ಬಳಸಿದ, ಆದ್ದರಿಂದ ಅದು ಮುಕ್ಕಾಯಿತು, ಗಣಪತಿ ಏಕದಂತನಾದ, ಎಂಬುದು ಒಂದು ಜನಜನಿತ ವ್ಯಾಖ್ಯಾನ.

ಆದರೆ ಬ್ರಹ್ಮವೈವರ್ತ ಪುರಾಣದಲ್ಲಿರುವ ಒಂದು ವಿವರಣೆಯ ಪ್ರಕಾರ, ಒಮ್ಮೆ ಪರಶುರಾಮ ಮತ್ತು ಗಣಪತಿ ನಡುವೆ ಭೀಕರ ಹೋರಾಟ ನಡೆಯಿತು. ಗಣಪತಿಯ ತಂದೆ ಶಿವ ದಯಪಾಲಿಸಿದ್ದ ಪರಶುವಿನಿಂದ ಪರಶುರಾಮ ಗಣಪತಿಯನ್ನು ಹೊಡೆದಾಗ ಗಣಪತಿಯ ಹಲ್ಲೊಂದು ಮುರಿಯಿತು. ಗಣಪತಿ ಪರಶುರಾಮನನ್ನು ಸೋಲಿಸಲಾರದಕ್ಕಾಗಿ ಅಲ್ಲ, ತನ್ನ ತಂದೆ ನೀಡಿದ್ದ ಆಯುಧಕ್ಕೆ ಅವಮಾನ ಮಾಡಲು ಮನಸ್ಸಿಲ್ಲದೆ ಅದರ ಶಕ್ತಿಯನ್ನು ಗೌರವಿಸುತ್ತ ತನ್ನ ಹಲ್ಲನ್ನು ಮುರಿಯಲು ಬಿಟ್ಟುಕೊಟ್ಟ, ಎಂದು ಅದು ಹೇಳುತ್ತದೆ. ಪರಶುರಾಮ ಬ್ರಾಹ್ಮಣಾಧಿಕ್ಯತೆಯ ಸಂಕೇತ. ಗಣಪತಿ ಅಹಂಕಾರಿ ಬ್ರಾಹ್ಮಣ ವರ್ಗದೊಂದಿಗೆ ಹೋರಾಡಿದನೆಂದು ಈ ಕಥೆಯಿಂದ ತಿಳಿಯಬೇಕಾಗುತ್ತದೆ

ಈ ಮುಕ್ಕಾದ ಹಲ್ಲು ಕೆಂಪು ಬಣ್ಣ ಹೊಂದಿದೆ. ಶತ್ರು ಸಂಹಾರ ಮಾಡಿದ ಗುರುತಾಗಿ ವೈರಿಯ ರಕ್ತದ ಕಲೆಗಳು ಅವನ ಹಲ್ಲನ್ನು ಕೆಂಪಾಗಿಸಿವೆಯೆಂದು ತಂತ್ರಶಾಸ್ತ್ರದ ಸಾಹಿತ್ಯ ಹೇಳುತ್ತದೆ. ಹೀಗೆ ಆ ಕಾಲದಲ್ಲಿ ಗಣಪತಿಯನ್ನು ಹಿಂದುಳಿದ ಹೀನ ಜಾತಿಯ ಜನರ ದೇವತೆಯನ್ನಾಗಿ ಚಿತ್ರಿಸಲಾಗಿದೆ. ಮನುವೂ ಒಂದು ಕಡೆ ಹೀಗೆಯೇ ಹೇಳಿದ್ದಾನೆ. ಶೂದ್ರರೆಂದು ಹೇಳಿಕೊಳ್ಳುತ್ತಿದ್ದವರು ಗಣಪತಿಯನ್ನು ಪೂಜಿಸುತ್ತಿದ್ದರು. ಜೀರ್ಣವಸ್ತ್ರಗಳನ್ನು, ಇತರರು ತಿಂದು ಬಿಟ್ಟ ಆಹಾರವನ್ನು ಭುಂಜಿಸುತ್ತಿದ್ದ ಶೂದ್ರ ಜನರ ಈ ದೇವತೆಯನ್ನು ಆ ಕಾರಣಕ್ಕಾಗಿಯೇ ಉಚ್ಚಿಷ್ಟ ಗಣಪತಿ ಎಂದು ವರ್ಣಿಸಲಾಗಿದೆ

### ಗಜಾನನ

ಗಣಪತಿಗೆ ಗಜಾನನ ಎಂಬ ಹೆಸರೂ ಉಂಟು. ಇದು ಹೇಗೆ ಬಂದಿತು ? ಗಣಪತಿ ಗಜಾನನನಾಗಲು ಸರಿಯಾದ ಕಥೆ ಸೃಷ್ಟಿಸಲು ಪುರಾಣಗಳು ತುಂಬ ಹೆಣಗಾಡಿವೆ. ಹುಟ್ಟಿದ ಸಮಯದಲ್ಲೇ ಶನಿದೃಷ್ಟಿ ತಾಕಿ ಗಣಪತಿ ತಲೆ ಕಳೆದುಕೊಂಡ; ದುಃಖಿತಪ್ತ ತಾಯಿಯಲ್ಲಿ ಕನಿಕರಗೊಂಡು ವಿಷ್ಣು ಮಗುವಿಗೆ ಆನೆಯ ತಲೆಯನ್ನು ತಂದು ಅಂಟಿಸಿದನೆಂದು ಬ್ರಹ್ಮವೈವರ್ತ ಪುರಾಣ ಹೇಳುತ್ತದೆ. ಸ್ಕಾಂದ ಪುರಾಣದ ಪ್ರಕಾರ 'ಸಿಂಧೂರ' (ಕೆಂಪು) ಎಂಬ ಭೂತ ಗಣೇಶನ ತಾಯಿಯ ಗರ್ಭ ಪ್ರವೇಶಿಸಿ ಮಗುವಿನ ತಲೆಯನ್ನು ತಿಂದುಬಿಟ್ಟಿತು. ತಲೆ ಇಲ್ಲದೆ ಹುಟ್ಟಿದ ಮಗು ಗಜಾಸುರನನ್ನು ಸಂಹರಿಸಿ ಆತನ ತಲೆಯನ್ನು ತನ್ನ ಶರೀರಕ್ಕೆ ಅಂಟಿಸಿಕೊಂಡಿತು ! ದಕ್ಷಿಣ ಭಾರತದಲ್ಲಿ ಜನಜನಿತವಾದ ಇನ್ನೊಂದು ಕಥೆಯ ಪ್ರಕಾರ, ಪಾರ್ವತಿ ಪರಮೇಶ್ವರರು ಗಜರೂಪ ಧರಿಸಿ ರತಿಕ್ರೀಡೆ ನಡೆಸಿದಾಗ ಹುಟ್ಟಿದ ಮಗುವೇ ಈ ಗಜಾನನ !

ಆದರೆ ವಾಸ್ತವವಾಗಿ ಇದರ ಅರ್ಥ ಬೇರೆಯೇ. ಆ ಕಾಲದಲ್ಲಿ ವಿವಿಧ ಗಣಗಳು (ಅಂದರೆ ಬುಡಕಟ್ಟುಗಳು) ವಿವಿಧ ಪ್ರಾಣಿಗಳನ್ನು ತಮ್ಮ ಚಿಹ್ನೆಗಳನ್ನಾಗಿ ಇಟ್ಟುಕೊಂಡಿದ್ದವು. ಕೆಲವು ಬಣಗಳ ಚಿಹ್ನೆ ಎತ್ತು ಆಗಿದ್ದರೆ, ಇನ್ನು ಕೆಲವು ಹಾವನ್ನು ಗಣಚಿಹ್ನೆಯನ್ನಾಗಿ ಇಟ್ಟುಕೊಂಡಿದ್ದವು. ವೃಷಭ ಚಿಹ್ನೆಯವರು ವೃಷಭಧ್ವಜರಾದರೆ, ವೃಷ ಚಿಹ್ನೆಯವರು ವೃಷಿಕೇತನರಾದರು.

ನಾವು ಆರಾಧಿಸುವ ಗಣಪತಿ ಸೇರಿದ್ದ ಗಣ ಆನೆಯನ್ನು ತನ್ನ ಸಂಕೇತವನ್ನಾಗಿ ಹೊಂದಿದ್ದುದರಿಂದ ಗಣಪತಿ ಗಜ್ಞಾನನನಾದ. ಹಾಗೆಯೇ ಅವನು ಮೂಷಿಕ (ಇಲಿ) ಸಂಕೇತ ಹೊಂದಿದ್ದ ಗಣವನ್ನು (ಇಲಿ ಸಂಕೇತದ ಪಂಗಡಗಳು ವಿಂಧ್ಯಾರಣ್ಯ ಪ್ರದೇಶದಲ್ಲಿ ಇದ್ದುವೆಂಬುದಕ್ಕೆ ಗ್ರೀಕ್ ಇತಿಹಾಸಕಾರರ ಬರವಣಿಗೆಗಳಲ್ಲಿ ಸಾಕ್ಷ್ಯ ದೊರೆಯುತ್ತದೆ. ಮಹಾಭಾರತದಲ್ಲೂ ಇಲಿ ಸಂಕೇತ ಹೊಂದಿದ್ದ ಪಂಗಡಗಳಿಗೆ ಉಲ್ಲೇಖವಿದೆ) ಸೋಲಿಸಿದ್ದಿರಬೇಕು. ಅಂತೆಯೇ ಇಲಿ ಅವನ ವಾಹನವಾಯಿತು. ಗಜಾನನನು ಮೂಷಿಕ ವಾಹನನಾದ. ವಿವಿಧ ಸಂಕೇತಗಳನ್ನು ಹೊಂದಿದ್ದ ಗಣ, ಜಾತಿ, ಪಂಗಡಗಳಿಂದ ರಾಜ್ಯಗಳು, ಮತ್ತೆ ರಾಜ್ಯಗಳಿಂದ ಸಾಮ್ರಾಜ್ಯಗಳು ಏರ್ಪಟ್ಟವು. ಇದು ಇತಿಹಾಸದ ವಿಕಾಸ ಕ್ರಮ.

### ಪುರಾಣಗಳ ಪುನರ‍್ರಚನೆ

ಇವೆಲ್ಲ ಗಣಪತಿಯ ಪೂರ್ವೇತಿಹಾಸ. ಈ ವಿಘ್ನಕರ್ತೃವು ವಿಘ್ನನಾಶಕನಾಗಿ, ವಿಘ್ನ ನಿವಾರಕನಾಗಿ ಆದದ್ದು ಹೇಗೆ ?

ಕ್ರಿ.ಪೂ. 500ನೆಯ ವರ್ಷದವರೆಗೂ ಗಣಪತಿಯ ವರ್ಣನೆಯನ್ನು ಪರಿಶೀಲಿಸಿದಾಗ ಅವನನ್ನು ಅವಹೇಳನಕರ ರೀತಿಯಲ್ಲಿ ಚಿತ್ರಿಸಿರುವುದೇ ಕಂಡುಬರುತ್ತದೆ. ಆದರೆ ಗುಪ್ತರ ಕಾಲ ಅಥವಾ ಅದಕ್ಕೆ ಸ್ವಲ್ಪ ಮುನ್ನಿನ ಕಾಲದ ವಿಗ್ರಹಗಳಲ್ಲಿ ಹಠಾತ್ ಬದಲಾವಣೆಯಾಗಿರುವುದು ಕಂಡುಬರುತ್ತದೆ.

ಆ ಕಾಲದ ಹೊತ್ತಿಗೆ ಅನಾರ್ಯ, ಬರ್ಬರ, ಗಣಗಳ ಹಾಗೂ ಜಾತಿಗಳ ಜನರನ್ನು ಆರ್ಯ ಶ್ರೇಷ್ಠರು ತಮ್ಮ ಹಿಂದೂ ಮತದಲ್ಲಿ ವಿಲೀನಗೊಳಿಸಿಕೊಳ್ಳುವ ಪ್ರಕ್ರಿಯೆ ಪ್ರಾರಂಭವಾಗಿದ್ದಿತು. ಅರಣ್ಯ ಪಂಗಡಗಳು ಕುಲಗಳಾಗಿ ಪರಿವರ್ತಿತವಾದರೂ ಅವುಗಳಲ್ಲಿಯ ಅರಣ್ಯ ಲಕ್ಷಣಗಳು ಹೋಗಿರಲಿಲ್ಲ. ಅವುಗಳನ್ನು ತೆಗಳುವ ಬದಲು ಹೊಗಳಲಾಯಿತು.

ಹಿಂದೂ ಪುರಾಣಗಳು, ಬ್ರಾಹ್ಮಣ ಮತ ಹಾಗೂ ಬೌದ್ಧ ಮತಗಳು ಈ ಶೂದ್ರ ಅನಾರ್ಯ ದೇವತೆಯನ್ನು ತಮಗೆ ಒಪ್ಪಿಗೆಯಾಗುವ ಆರ್ಯ ದೇವತೆಯನ್ನಾಗಿ ಮಾಡಲೋಸುಗ ಅನೇಕ ಕಟ್ಟುಕಥೆಗಳನ್ನು ಸೃಷ್ಟಿಸಿ ಪ್ರಚಾರ ಮಾಡಿದವು. ಬ್ರಹ್ಮ ವೈವರ್ತ ಪುರಾಣ, ಸ್ಕಾಂದ ಪುರಾಣಗಳಲ್ಲಿ ಗಣಪತಿಯನ್ನು ಅದ್ಭುತವಾಗಿ ವರ್ಣಿಸಲಾಗಿದೆ. ಗಣಪತಿ ಸಾಕ್ಷಾತ್ ಭಗವಂತನ ಅವತಾರವೆಂದು ಹೊಗಳಲಾಗಿದೆ. ಅವನ ಬಗೆಗೆ ಒಂದು ಉಪ ಪುರಾಣ ಹಾಗೂ ಒಂದು ಚಿಕ್ಕ ಉಪನಿಷತ್ತನ್ನು ಕೂಡ ಸೃಷ್ಟಿಸಲಾಗಿದೆ. ಪೃಥ್ವಿ, ಅಪ್, ವಾಯು, ನೀನೇ; ನೀನೇ ಬ್ರಹ್ಮ, ವಿಷ್ಣು, ರುದ್ರ. ನೀನು ಈ ತ್ರಿಮೂರ್ತಿಗಳಿಗಿಂತ ದೊಡ್ಡವ, ಎಂದೆಲ್ಲ ವರ್ಣಿಸಲಾಗಿದೆ. ಇಲ್ಲಿ ಇಂದ್ರನನ್ನೇ ಗಣಪತಿಯೆಂದು ಕರೆಯಲಾಗಿದೆಯಾದರೂ ಋಗ್ವೇದದ ಸೂಕ್ತಗಳಲ್ಲಿ ಅನೇಕ ಬಾರಿ ಗಣ ಎಂಬ ಮಾತು ಬಂದಿರುವುದು ಗಮನಾರ್ಹ. ವೇದಕಾಲದ ಕವಿಗಳು ಗಣಪತಿಯ ಬಗೆಗೆ ತಿಳಿದಿದ್ದರೂ ಅವನ ಆನೆಯ ತಲೆಯ ಬಗೆಗೆ ತಿಳಿದಿರಲಿಲ್ಲ. ಆದಾಗ್ಯೂ ಋಗ್ವೇದದಲ್ಲಿ ಯಜ್ಞಸ್ಥಳಕ್ಕೆ ಬಂದು ತನ್ನ ಸ್ಥಳದಲ್ಲಿ ಆಸೀನನಾಗಿ ಯಜ್ಞ ಕಾರ್ಯವನ್ನು ಮಂಗಳವಾಗಿ ನಡೆಸಿಕೊಡಬೇಕೆಂದು ಗಣಪತಿಯನ್ನು ಪ್ರಾರ್ಥಿಸುವ ಅನೇಕ ಸ್ತೋತ್ರಪಾಠಗಳಿವೆ

### ದ್ವಿದೇಹಕ

ಗಣಪತಿಗೆ 'ದ್ವಿದೇಹಕ' ಎಂಬ ಹೆಸರೂ ಒಂದಿದೆ. ಅಂದರೆ ಅವನಿಗೆ ಎರಡು ದೇಹಗಳಿವೆ ಎಂದರ್ಥ. ಇದು ನಿಜಕ್ಕೂ ಸರಿಯೇ. ಏಕೆಂದರೆ ಅವನಿಗೆ ಎರಡು ಕಾಯಗಳಿವೆ. ಎರಡು ಅಸ್ತಿತ್ವಗಳಿವೆ, ಎರಡು ಜನ್ಮಗಳಿವೆ. ಒಂದು ಹಿಂದಿನದು, ಇನ್ನೊಂದು ಅನಂತರದ್ದು; ಒಂದು ಪಾಷಂಡ ಇನ್ನೊಂದು ಪವಿತ್ರ; ಒಂದು ವಿಘ್ನಕಾರಕ, ಇನ್ನೊಂದು ವಿಘ್ನನಾಶಕ, ಸಿದ್ಧಿದಾಯಕ

ಈಗಂತೂ ಗಣಪತಿಯ ಉತ್ತರೇತಿಹಾಸ ಅವನ ಪೂರ್ವೇತಿಹಾಸಕ್ಕಿಂತ ಹೆಚ್ಚು ಪ್ರಚಾರದಲ್ಲಿದ್ದು ಅವನು ವರಸಿದ್ಧಿವಿನಾಯಕ, ಸರ್ವವಿಘ್ನೋಪಹಾರಕ, ಬುದ್ಧಿ ಪ್ರದಾಯಕ ಎಂದು ಸರ್ವಜನರ ಮನ್ನಣೆಗೆ ಪಾತ್ರನಾದ ದೇವತೆಯಾಗಿದ್ದಾನೆ.

ವಂದಿಪೆವು ನಿನಗೆ ಗಣನಾಥ.

*(ಆಧಾರ: ಡಾ॥ ದೇವಿಪ್ರಸಾದ ಚಟ್ಟೋಪಾಧ್ಯಾಯರ 'ಲೋಕಾಯತ' ಕೃತಿಯಿಂದ)*

ಶ್ರೀ ಕೆ. ಎಲ್. ಗೋಪಾಲಕೃಷ್ಣ ರಾವ್
ನಂ. 261, 2ನೇ ಕ್ರಾಸ್, ಸಿ.ಟಿ.ಬೆಡ್,
ತ್ಯಾಗರಾಜನಗರ, ಬೆಂಗಳೂರು - 560 028

*ಒಳ್ಳೇ ವಿನಾಯಕ ಆದ್ಯಲ್ಲ ನೀನು!*
*ವಡೆ-ಗಿಡೆ ಅಲಂಕಾರ ಒಲ್ಲೆ, ಅಂತೀಯ. ಹುಂಡಿ ವಸೂಲು ಮಾಡ್‌ಬ್ಯಾಡಿ ಅಂತೀಯ. ಸಿನಿಮಾ ರೆಕಾರ್ಡು ಅಂದ್ರೆ ಎಗ್ರಿ ಎಗ್ರಿ ಬೀಳ್ತೀಯ. ಡಿಸ್ಕೋ ಡ್ಯಾನ್ಸ್ ಅಂದ್ರೆ ಕೆಂಗಣ್ ಬಿಡ್ತೀಯ. 'ನನ್ನ ಒಳ್ಳೇ ನೀರ್ನಲ್ಲೇ ಮುಳುಗ್ಸಿ' ಅಂತ ಬ್ಯಾರೆ ಹಟ ಮಾಡ್ತೀಯ. ಬೆಂಗ್ಳೂರಲ್ಲಿ ಮಾಡುವಂಗೆ ನಾವೂ ಮಾಡಾನ ಅಂದ್ರೆ ನಿಂದೊಳ್ಳೆ ತಕರಾರಾಯ್ತಪ್ಪ...*





# ಚುನಾವಣೆ ಚಕ್ರವ್ಯೂಹ

ಈ ಶತಮಾನದ ಕೊನೆಯ ಸೂರ್ಯಗ್ರಹಣ ಬಂದು ಹೋಯಿತು. ಆದರೆ ನಮ್ಮ ಪ್ರಜಾಪ್ರಭುತ್ವದ ಬಹುತೇಕ ರಾಜಕೀಯ ಪಕ್ಷಗಳಿಗೆ ಹಿಡಿದಿರುವ ಗ್ರಹಣ ಮಾತ್ರ ಬಿಟ್ಟಿಲ್ಲ. ಬಿಡುವ ಸೂಚನೆಯೂ ಇಲ್ಲ. ದಿನೇ ದಿನೇ ಈ ಪಕ್ಷಗಳು ಅಧೋಗತಿಗಿಳಿಯುತ್ತಿವೆ. ರೀತಿ, ನೀತಿ, ಸಿದ್ಧಾಂತ, ಜನಪರ ನಿಲುವು ಇವೆಲ್ಲ ಈ ಪಕ್ಷಗಳಿಗೆ ಈಗ ಅಗತ್ಯವಿಲ್ಲ. ಅವುಗಳಿಗೆ ಬೇಕಾಗಿರುವುದು ಓಟು, ಸೀಟು ಅಷ್ಟೇ. ಅಧಿಕಾರದ ಗದ್ದುಗೆಗೇರಿ ಅದಕ್ಕೆ ಅಂಟಿಕೊಳ್ಳುವುದೇ ಗುರಿ. ಅದಕ್ಕೆ ಎಂಥದ್ದನ್ನೂ ಮಾಡಲು ಸಿದ್ಧ. ಪಕ್ಷಾಂತರವಂತೂ ಬಿಡಿ. ಅದು ಬಟ್ಟೆ ಬದಲಿಸುವಷ್ಟೇ ಸಲೀಸು. ರಾಜಕಾರಣಿಗಳು ಎಂದರೇ ಮುಜುಗರವಾಗುತ್ತೆ ಈಗ. ಅವರಲ್ಲಿ ಕೆಲವರ ಹಿನ್ನೆಲೆ ನೋಡಿದರೆ ಗಾಬರಿಯಾಗುತ್ತದೆ. ಸ್ವಾತಂತ್ರ್ಯಾನಂತರದ ಮೊದಲ ವರ್ಷಗಳಲ್ಲಿ ಜೈಲಿಗೆ ಹೋಗಿ ಬಂದವರು ಗೌರವಾನ್ವಿತರು, ಆದರೆ ಇಂದು ಜೈಲಿಗೆ ಹೋಗಿ ಭ್ರಷ್ಟರೆನಿಸಿಕೊಂಡಿರುವವರು ಮುಖಂಡರು, ಸ್ವಲ್ಪವೂ ನಾಚಿಕೆ ಇಲ್ಲದೆ ಬೀಗುತ್ತಾರೆ. ಅಪರಾಧಿಗಳು ರಾಜಕಾರಣಿಗಳಾಗಿ ಮೆರೆಯುತ್ತಿದ್ದಾರೆ. ರಾಜಕಾರಣಿಗಳಿಗೂ ಅಪರಾಧಿಗಳಿಗೂ ಭಾರೀ ನಂಟಸ್ತನ ಬೆಳೆದಿದೆ. 'ರಾಜಕೀಯ ಅಪರಾಧೀಕರಣ' ಎನ್ನುವ ನುಡಿಗಟ್ಟು ಈಗ ಬಳಕೆಗೆ ಬಂದಿರುವುದೇ ಅದಕ್ಕೆ ಸಾಕ್ಷಿ. ಪ್ರತಿ ರಾಜಕಾರಣಿಯ ಹಿಂದೆ ಪುಂಡರ ಪರಿವಾರವೇ ಬೆಳೆದುಕೊಂಡಿದೆ.

ಇವೆಲ್ಲ ನಮ್ಮ ಪ್ರಜಾಪ್ರಭುತ್ವಕ್ಕೆ ಅಂಟಿಕೊಂಡಿರುವ ಜಾಡ್ಯಗಳು. ಇಂಥ ಹಿನ್ನೆಲೆಯಲ್ಲಿ ಹದಿಮೂರನೇ ಲೋಕಸಭೆಗೆ ಚುನಾವಣೆಗಳು ನಡೆಯುತ್ತಿವೆ. ಕರ್ನಾಟಕವೂ ಸೇರಿದಂತೆ ಕೆಲವು ರಾಜ್ಯಗಳಲ್ಲಿ ವಿಧಾನಸಭೆಗಳಿಗೂ ಚುನಾವಣೆ ನಡೆಯುತ್ತಿದೆ. ಇದು ಈ ಶತಮಾನದ ಕೊನೆಯ ಚುನಾವಣೆ. ಲೋಕಸಭೆಗೆ ಇರುವ ಐದುನೂರು ಚಿಲ್ಲರೆ ಸ್ಥಾನಗಳಿಗೆ ಸಾವಿರಾರು ಮಂದಿ ಪೈಪೋಟಿ ನಡೆಸಲಿದ್ದಾರೆ. ನೂರಾರು ರಾಜಕೀಯ ಪಕ್ಷಗಳು, ಇವುಗಳಲ್ಲಿ ಕೆಲವು ರಾಷ್ಟ್ರೀಯ ಎನಿಸಿಕೊಂಡವು. ಉಳಿದವು ಪ್ರಾಂತೀಯ, ಜಾತೀಯ, ವಗೈರೆ, ವಗೈರೆ. ಲೋಕಸಭೆಯ ಒಬ್ಬ ಸದಸ್ಯನನ್ನು ಮಾತ್ರ ಹೊಂದಿದ್ದ, ಪ್ರಾತಿನಿಧ್ಯವನ್ನೇ ಹೊಂದಿಲ್ಲದ ಪಕ್ಷಗಳೂ ಚುನಾವಣಾ ಕಣದಲ್ಲಿವೆ. ಎಲ್ಲವೂ ಚುನಾವಣಾ ಆಯೋಗದಿಂದ ಮಾನ್ಯತೆ ಪಡೆದ ಪಕ್ಷಗಳೇ. ನಾಲ್ಕು ಜನ ಪುಢಾರಿಗಳು, ಅವರ ಬೆಂಬಲಿಗರು ಸೇರಿದರೆ ಒಂದು ರಾಜಕೀಯ ಪಕ್ಷ ಸಿದ್ಧ. ಅದಕ್ಕೊಂದು ಹೆಸರು, ಬಾವುಟ, ಲಾಂಛನ. ಬೇರೆ ಇನ್ನೇನೂ ಬೇಕಿಲ್ಲ. ಹಣಕ್ಕೆ ಕೊರತೆ ಇಲ್ಲ, ಅಧಿಕಾರವೊಂದೇ ಗುರಿ. ಚುನಾವಣಾ ಸಮಯದಲ್ಲಂತೂ ಪಕ್ಷಗಳು ಒಡೆದು ನಾಯಿಕೊಡೆಗಳಂತೆ ಹೊಸ ಪಕ್ಷಗಳು ಹುಟ್ಟಿಕೊಳ್ಳುತ್ತವೆ.

ಸುಮಾರು ನಲವತ್ತು ವರ್ಷ ದೇಶದ ಆಡಳಿತ ಸೂತ್ರ ಹಿಡಿದಿದ್ದ ಕಾಂಗ್ರೆಸ್ ಈಗ ಅತಂತ್ರಸ್ಥಿತಿಯಲ್ಲಿದೆ. ಸಮರ್ಥ ನಾಯಕತ್ವವನ್ನು ರೂಪಿಸಲಾಗದ ಕಾಂಗ್ರೆಸ್ ನೆಹರೂ ಕುಟುಂಬದ ಸೆರಗಿಗೇ ಭದ್ರವಾಗಿ ಅಂಟಿಕೊಂಡಿದೆ. ಭ್ರಷ್ಟತೆ ಕಾಂಗ್ರೆಸ್ಸಿನ ಪ್ರತಿರೂಪ. ಪ್ರಜಾಪ್ರಭುತ್ವಕ್ಕೆ ಕಾಂಗ್ರೆಸ್ ಸಂಸ್ಥೆಯಲ್ಲಿ ಅವಕಾಶವೇ ಇಲ್ಲ. ಚುನಾವಣೆ ಖಚಿತವಾದೊಡನೆಯೇ ಮೊದಲ ಒಡಕು ಬಂದದ್ದೂ ಕಾಂಗ್ರೆಸ್‌ನಲ್ಲಿ. ಕಾಂಗ್ರೆಸ್ ಚುನಾವಣೆಗಳಲ್ಲಿ ಅಲ್ಲಲ್ಲಿ ಅನುಕೂಲಕ್ಕೆ ತಕ್ಕಂತೆ ಹೊಂದಾಣಿಕೆ ಮಾಡಿಕೊಂಡಿದೆ. ಮತ್ತೆ ಅಧಿಕಾರಕ್ಕೇರುವ ಕನಸು ಕಾಣುತ್ತಿದೆ. ಇನ್ನೂ ಅಧಿಕಾರದಲ್ಲಿರುವ ಭಾರತೀಯ ಜನತಾ ಪಕ್ಷ (ಭಾಜಪ) ಮತ್ತೆ ಅಧಿಕಾರಕ್ಕೆ ಬರಲು ಹವಣಿಸುತ್ತಿದೆ. ಕಾಂಗ್ರೆಸ್ಸಿಗಿಂತ ತನ್ನ ನಡವಳಿಕೆ ಭಿನ್ನವೇನಲ್ಲ ಎಂಬುದನ್ನು ಅತ್ಯಲ್ಪ ಕಾಲಾವಧಿಯಲ್ಲೇ ತೋರಿಸಿಕೊಂಡಿದೆ. ಖಾದಿಗೂ ಕಾವಿಗೂ ವ್ಯತ್ಯಾಸವೇನಿಲ್ಲ ಎಂಬುದನ್ನು ಈಗಾಗಲೇ ನೋಡಿದ್ದೇವೆ. ನಮ್ಮ ಅಧಿಕಾರಾವಧಿ ಪರಿಶುದ್ಧವಾದ್ದು ಎಂದು ಹೇಳಿಕೊಳ್ಳುತ್ತಿದ್ದಾಗಲೇ ಬಂದಿದೆ ಟೆಲಿಕಾಂ ನೀತಿಯ ಭ್ರಷ್ಟಾಚಾರ. ಸಣ್ಣ ಪುಟ್ಟ ಹಗರಣಗಳನ್ನು ಬಿಟ್ಟುಬಿಡಬಹುದು.

ಭಾಜಪದಲ್ಲಿ ಸಂಘ ಪರಿವಾರ ಹಾಗೂ ಇತರರ ಮಧ್ಯೆ ಮುಸುಕಿನೊಳಗೆ ಗುದ್ದಾಟ ಒಂದು ಕಡೆ. ಇನ್ನೊಂದು ಕಡೆ ನಾಯಕರಲ್ಲೇ ಮೇಲುಗೈ ಪಡೆಯಲು ಸೆಣಸಾಟ. ಅಧಿಕಾರಕ್ಕೇರಲು ಈ ಪಕ್ಷ ಬಹುದೊಡ್ಡ ವ್ಯೂಹ ರಚಿಸಿಕೊಂಡಿದೆ. ಹದಿಮೂರು ಹದಿನಾಲ್ಕು ಪಕ್ಷಗಳನ್ನು ಕಲೆಹಾಕಿ ರಾಷ್ಟ್ರೀಯ ಪ್ರಜಾಪ್ರಭುತ್ವರಂಗ (ಎನ್‌ಡಿಎ) ಸ್ಥಾಪಿಸಿಕೊಂಡಿದೆ. ಇದಕ್ಕೆ ಯಾವುದೇ ಬಗೆಯ ತತ್ವಾಧಾರವಿಲ್ಲ. ಭಾಜಪ ತನ್ನ ಮೂಲಸಿದ್ಧಾಂತಗಳನ್ನು ತತ್ಕಾಲಕ್ಕೆ ಅಮಾನತಿನಲ್ಲಿರಿಸಿದೆ. ಮಾಡಿಕೊಂಡಿರುವ ಏರ್ಪಾಟು ಸಿಂಹ ನರಿ ಕತೆ ಹಾಗೆ. ಸಿಂಹಪಾಲು ಭಾಜಪಕ್ಕೆ, ಉಳಿದದ್ದು ಜೊತೆಗಿರುವವರಿಗೆ.

## ಚೌಬೀನ

ಭಾಜಪ ಸರಕಾರಕ್ಕೆ ವಿರುದ್ಧವಾಗಿ ಮತ ಹಾಕಿದ್ದ ಡಿಎಂಕೆ ಪಕ್ಷ ಈಗ ಬೆಂಬಲಿಗ. ತಮಿಳುನಾಡಿನಲ್ಲಿ, ಎಐಎಡಿಎಂಕೆ ಕಾಂಗ್ರೆಸ್ಸಿನತ್ತ ವಾಲಿದ್ದರೆ ಡಿಎಂಕೆ ಭಾಜಪ ಜೋಳಿಗೆಗೆ. ಇದಕ್ಕೆ ಏನು ತಾತ್ವಿಕ ನೆಲೆ ಇರಲು ಸಾಧ್ಯ? ಆಂಧ್ರ ಪ್ರದೇಶದ ಚಂದ್ರಬಾಬು ನಾಯ್ಡು ತೆಲುಗು ದೇಶಮ್‌ನ ಸಂದರ್ಭ ಸಾಧಕತೆ ಬಗ್ಗೆ ಏನೂ ಹೇಳದಿರುವುದೇ ಲೇಸು. ನಮ್ಮ ಮುಖ್ಯಮಂತ್ರಿ ಜೆ. ಹೆಚ್. ಪಟೇಲ್ ಅವರು ಲೋಕಶಕ್ತಿ ನಾಯಕ ರಾಮಕೃಷ್ಣ ಹೆಗಡೆ, ಸಮತಾಪಕ್ಷದ ಜಾರ್ಜ್ ಫರ್ನಾಂಡಿಸ್ ಬೀಸಿದ ಬಲೆಯಲ್ಲಿ ಸಿಕ್ಕಿಕೊಂಡು ಭಾಜಪದ ಬಾಗಿಲು ಕಾಯುವ ಸ್ಥಿತಿಗೆ ತಲುಪಿದಲ್ಲಿ ನಾಚಿಕೆಗೇಡಲ್ಲವೆ? ಅವರಿಗೆ ಅದು ಯಾವತ್ತೂ ಇರಲಿಲ್ಲವೆನ್ನಿ. ಕಟ್ಟಾ ಸೋಷಲಿಸ್ಟ್ ಅಲ್ಲವೆ! ಈ ಎನ್‌ಡಿಎಗೆ ಇನ್ನೂ ಒಂದು ಕಾರ್ಯಕ್ರಮ ರೂಪುಗೊಂಡಿಲ್ಲ. ಚುನಾವಣಾ ಪ್ರಣಾಳಿಕೆಯಂತೂ ತೀರಾ ಅನಗತ್ಯ. ಏನೋ ಒಂದಷ್ಟು ಆಶ್ವಾಸನೆಗಳನ್ನು ಕೊಟ್ಟು ಬೆನ್ನು ತಟ್ಟಿಕೊಂಡರೆ ಈಗ ಪ್ರಣಾಳಿಕೆಗೆ ಹಿಂದೆ ಇದ್ದ ಪ್ರಾಮುಖ್ಯತೆ ಇಲ್ಲವೇ ಇಲ್ಲ ಅಲ್ಲವೆ?

ಇದು ಪ್ರಮುಖ ರಾಜಕೀಯ ಪಕ್ಷಗಳ ಕತೆ. ರಾಷ್ಟ್ರೀಯ ಪಕ್ಷ ಎನಿಸಿಕೊಂಡಿರುವ ಜನತಾದಳ ಒಡೆದು ಚೂರು ಚೂರಾಗಿದೆ. ಮಾಜಿ ಪ್ರಧಾನಿ ದೇವೇಗೌಡರು ಜಾತ್ಯಾತೀತ ಸರ್ಟಿಫಿಕೇಟ್ ಪಡೆದುಕೊಂಡಿದ್ದರೆ ಜೆ. ಹೆಚ್. ಪಟೇಲ್ ಗುಂಪು ಸಂಯುಕ್ತವಾಗಿದೆ. ಈ ಪಕ್ಷದ ನಾನಾ ಅವತಾರಗಳಿಂದಾಗಿ ಜಾತ್ಯಾತೀತ ಪ್ರಜಾಪ್ರಭುತ್ವ ಪಕ್ಷಗಳ ತೃತೀಯ ರಂಗ ನೆಲಕಚ್ಚಿತು. ಮಾನ, ಮರ್ಯಾದೆ, ರೀತಿ, ನೀತಿ ಎಲ್ಲ ಗಂಟು ಕಟ್ಟಿ ಮೂಲೆಗೆಸೆದು ಈಗ ಪಕ್ಷಗಳು ಚುನಾವಣಾ ಕಣಕ್ಕಿಳಿದಿವೆ. ಚುನಾವಣೆಗಳ ನಂತರ ಪರಿಸ್ಥಿತಿ ನೋಡಿಕೊಂಡು ಇವೆಲ್ಲ ಎತ್ತ ಕಡೆ ಹಾರಿದರೆ ಲಾಭ ಎನ್ನುವುದನ್ನು ನೋಡಿಕೊಳ್ಳುತ್ತವೆ. ಇತ್ತೀಚೆಗೆ ಬಹುಜನ ಪಾರ್ಟಿಯ ನಾಯಕಿ ಮಾಯಾವತಿ ತಮ್ಮ ಪಕ್ಷ ಯಾರೊಂದಿಗೂ ಸೇರದೆ ಸ್ವತಂತ್ರವಾಗಿ ಚುನಾವಣೆಗಳಲ್ಲಿ ಸ್ಪರ್ಧಿಸುತ್ತದೆ ಎಂದು ಹೇಳಿದ್ದಾರೆ. ಅದನ್ನು ಸಮರ್ಥಿಸುತ್ತ ಆಕೆ, ಈ ಚುನಾವಣೆಗಳಲ್ಲಿ ಯಾವ ಪಕ್ಷಕ್ಕೂ ಬಹುಮತ ದೊರಕದು ಎನ್ನುವುದು ಖಚಿತ; ಹಾಗಾಗಿ ತಮ್ಮಷ್ಟಕ್ಕೇ ವ್ಯವಹಾರ ಕುದುರಿಸಲು ಸದವಕಾಶವಿರುತ್ತದೆ ಎಂದಿದ್ದಾರೆ. ಚುನಾವಣಾ ಕಣದಲ್ಲಿ ಇಳಿದಿರುವ ಸಣ್ಣಪುಟ್ಟ ಪಕ್ಷಗಳೆಲ್ಲದರ ಧೋರಣೆಯೂ ಇಂಥದ್ದೆ. ಮಾಯಾವತಿ ಮುಚ್ಚುಮರೆಯಿಲ್ಲದೆ ಅದನ್ನು ಹೇಳಿಕೊಂಡಿದ್ದಾರೆ ಅಷ್ಟೇ. ಲಲ್ಲೂ ಪ್ರಸಾದ್ ಯಾದವ್, ಮುಲಾಯಮ್ ಸಿಂಗ್ ಯಾದವ್ ಮೊದಲಾದವರೂ ಕೂಡ ಹೇಗೆ ಬೇಕಾದರೂ ಹೊಂದಿಕೊಳ್ಳಬಲ್ಲವರು.

ಒಟ್ಟಿನಲ್ಲಿ ರಾಜಕೀಯ ಪಕ್ಷಗಳು ಇಂದು ನಡೆಸುತ್ತಿರುವ ಸರ್ಕಸ್ಸು ಎಂಥ ಅಧಃಪತನ ಎಂಬುದು ಇದರಿಂದ ಗೊತ್ತಾಗುತ್ತದೆ. ಈ ಬಗೆಯ ಸಂದರ್ಭವಾದಿಗಳನ್ನು ಸೇರಿಸಿಕೊಂಡು ರಚನೆಯಾಗುವ ಸರಕಾರ ಎಷ್ಟು ಯೋಗ್ಯವಾಗಿರುತ್ತದೆ ಎನ್ನುವುದನ್ನು ಊಹಿಸಿಕೊಳ್ಳಬಹುದು.

ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಎಡಪಕ್ಷಗಳು, ಮುಖ್ಯವಾಗಿ ಕಮ್ಯುನಿಸ್ಟ್ ಪಕ್ಷಗಳು, ನಿಜವಾದ ಪ್ರಜಾಪ್ರಭುತ್ವವಾದಿ ಪುರೋಗಾಮಿ ಪಕ್ಷಗಳು, ಪರಿಣಾಮಕಾರಿಯಾಗಿ ಮಧ್ಯೆ ಪ್ರವೇಶಿಸಲಾಗದೇ ಹೋಗಿರುವುದು ದುರದೃಷ್ಟಕರ. ಈ ಪಕ್ಷಗಳೂ ಕೂಡ ಗೊಂದಲದಲ್ಲಿ ಮುಳುಗಿವೆಯೇ ಎಂಬ ಸಂದೇಹ ಬಾರದಿರದು. ಜಾತೀಯವಾದಿ ಭಾಜಪ ಮತ್ತು ಭ್ರಷ್ಟ ಕಾಂಗ್ರೆಸ್ ಪಕ್ಷಗಳ ಮಧ್ಯೆ ಅವಕ್ಕೆ ಆಯ್ಕೆ ಇಲ್ಲವೇ ಇಲ್ಲ. ಇಂದಿನ ಸಂದರ್ಭವಾದಿ, ಹೊಲಸು ರಾಜಕೀಯ ವಾತಾವರಣದಲ್ಲಿ ತೃತೀಯರಂಗದ ಸ್ಥಾಪನೆ ಸಾಧ್ಯವಿಲ್ಲದ್ದು. ಈಗಿರುವ ಮಾರ್ಗ ಒಂದೇ. ತತ್ವಬದ್ಧವಾಗಿ ಒಂದು ಕಾರ್ಯಕ್ರಮದಡಿಯಲ್ಲಿ ಕಮ್ಯುನಿಸ್ಟ್ ಪಕ್ಷಗಳು ಹಾಗೂ ಇತರ ಪುರೋಗಾಮಿ ಪಕ್ಷಗಳು ಒಂದುಗೂಡುವುದು. ಹಿಂದೆ ಈ ಪಕ್ಷಗಳು ಸಂಖ್ಯಾಬಲದಲ್ಲಿ ಕಡಿಮೆಯಿದ್ದರೂ ಸರಕಾರ ಜನಪರ ನೀತಿ ಅನುಸರಿಸುವಂತೆ ಪ್ರಭಾವ ಬೀರಲು ಸಮರ್ಥವಾಗಿದ್ದುವು. ಈಗಲೂ ಕಾಲ ಮಿಂಚಿಲ್ಲ. ಈ ಎಲ್ಲ ಪಕ್ಷಗಳೂ ಒಂದಾದಲ್ಲಿ ಅಂಥ ಶಕ್ತಿಯನ್ನು ಪಡೆದಾವು. ಆದರೆ ಇಂದಿನ ಸೀಟು ಗಿಟ್ಟಿಸುವ ಹಂಬಲಕ್ಕೆ ಇವೂ ಸಿಕ್ಕಿಬಿದ್ದರೆ ಅಧೋಗತಿಯೆ.

ಈ ಸಲದ ಚುನಾವಣೆಗಳಲ್ಲಿಯೂ ಯಾವ ಪಕ್ಷಕ್ಕೂ ಬಹುಮತ ಬಾರದು. ಈಗಾಗಲೇ ಪ್ರಕಟಗೊಂಡಿರುವ ಕೆಲವು ಸಮೀಕ್ಷೆಗಳು ಅದನ್ನು ಖಚಿತಪಡಿಸಿವೆ. ರಚನೆಯಾಗುವುದು ಕಿಚಡಿ ಸರಕಾರ ಎನ್ನುವುದರಲ್ಲಿ ಸಂಶಯವಿಲ್ಲ. ಎಷ್ಟು ದಿನ ಹಳಸದೆ ಇರುವುದೋ ನೋಡಬೇಕು. ಆಮೇಲೆ ಇದ್ದೇ ಇದೆ ಇನ್ನೊಂದು ಚುನಾವಣೆ. ಇನ್ನಷ್ಟು ಹೊಂದಾಣಿಕೆ. ಜನಸಾಮಾನ್ಯರ ಪಾಡಿನ ಚಿಂತೆ ಮಾತ್ರ ಯಾವ ರಾಜಕಾರಣಿಗೂ ಇರದು. ಬೊಕ್ಕಸದ ಹಣ ಎಷ್ಟೋ ಖಾಸಗಿಯವರ ಜೇಬು ಸೇರಿದೆ. ಇನ್ನು ಮುಂದೆ ಹೀಗೇ ಚುನಾವಣೆ ನಡೆಯುತ್ತಿರಬೇಕಾದರೆ ಅಮೇರಿಕಾದಿಂದ ಸಾಲ ಪಡೆಯುತ್ತಾರೇನೊ!

೦೦

# ಸಂಯುಕ್ತರಂಗದ ಪ್ರಯೋಗ

ಕಳೆದ ಮೂರು ಚುನಾವಣೆಗಳಲ್ಲಿ ರಾಜಕೀಯದಲ್ಲಿ ಕಾಣುತ್ತಿರುವ ಒಂದು ಪ್ರಮುಖ ಬೆಳವಣಿಗೆ ಅಂದರೆ ಪಕ್ಷಗಳು ಸಂಯುಕ್ತರಂಗ ರಚಿಸಿಕೊಳ್ಳುತ್ತಿರುವುದು. ಹಿಂದೆಯೂ ಕೇರಳದಲ್ಲಿ, ಪಶ್ಚಿಮ ಬಂಗಾಳದಲ್ಲಿ ಈ ಪ್ರಯೋಗಗಳು ನಡೆದು, ಸಫಲವೂ ಆಗಿವೆ. ಕೇರಳದಲ್ಲಿಂದು ಎರಡೇ ಪಕ್ಷಗಳು ಎಂಬುದು ಸ್ಪಷ್ಟವಾಗಿ ಐಕ್ಯರಂಗದ ರಾಜಕೀಯ ಕಲೆಯನ್ನು ಕಾರ್ಯಗತಗೊಳಿಸಿವೆ. ಅಲ್ಲಲ್ಲಿ ರಾಜ್ಯ ಸರ್ಕಾರಗಳ ಹಂತದಲ್ಲಿ ಸಂಯುಕ್ತರಂಗದ ಪ್ರಯೋಗಗಳು ನಡೆದಿರುವುದು ಉಂಟು. ಆದರೆ ಈಗ ನಡೆಯುತ್ತಿರುವುದು ಕೇಂದ್ರದ ಹಂತದಲ್ಲಿ. 1970ರ ದಶಕದಲ್ಲಿ ಅಸ್ತಿತ್ವಕ್ಕೆ ಬಂದ ಜನತಾ ಪಾರ್ಟಿಯು ಒಂದು ರೀತಿ ಸಂಯುಕ್ತ ರಂಗವೇ. ಅಂದಿನ ಜನಸಂಘವೂ ಅದರಲ್ಲಿ ವಿಲೀನಗೊಂಡಿತ್ತು ಎಂಬುದನ್ನು ಜ್ಞಾಪಿಸಿಕೊಳ್ಳಬೇಕು. ವಿ. ಪಿ. ಸಿಂಗ್ ಸರ್ಕಾರ ರಚಿಸಿದಾಗ ಬಂದ ಜನತಾದಳದಲ್ಲಿ ಬಿಜೆಪಿ ಇರಲಿಲ್ಲವೆಂಬುದನ್ನು ಗಮನಿಸಬೇಕು.

ಸ್ವಾತಂತ್ರ್ಯ ಪೂರ್ವದಲ್ಲಿ, ರಾಷ್ಟ್ರವು ಸ್ವಾತಂತ್ರ್ಯದಂಥ ಮಹತ್ತರ ಆಶಯವನ್ನು ಸಾಧಿಸಲು ರಾಷ್ಟ್ರವ್ಯಾಪಿಯಾದ, ಎಲ್ಲರನ್ನೂ ಒಳಗೊಂಡ ಐಕ್ಯರಂಗ ರಚಿಸಬೇಕಾದುದು ಅನಿವಾರ್ಯವಾಗಿತ್ತು. ಕಾಂಗ್ರೆಸ್ ಪಕ್ಷ ಬೆಳೆಯುತ್ತಾ ಬಂದಂತೆಲ್ಲಾ, ಅದರ ಸ್ವರೂಪ ಇಂಥ ಒಂದು ರಾಷ್ಟ್ರೀಯ ಐಕ್ಯರಂಗವಾಗಿತ್ತು. ಸ್ವಾತಂತ್ರ್ಯಾನಂತರ, ದೇಶದ ಮುಂದಿನ ಆರ್ಥಿಕ ಸ್ವಾತಂತ್ರ್ಯ, ಸಾಮಾಜಿಕ ಪುನರುಜ್ಜೀವನದಂಥ ಗುರಿಗಳನ್ನು ಸಾಧಿಸುವುದರಲ್ಲಿ, ಸಹಜವಾಗೇ ಹಲವು ಹತ್ತು ತಾತ್ವಿಕ-ಸೈದ್ಧಾಂತಿಕ ಹಾದಿ-ಕವಲು ಹಾದಿಗಳ ಸಾಧ್ಯತೆಯಿದ್ದು, ಹೊಸ ಪಕ್ಷಗಳು ಬೆಳೆದು, ಕಾಂಗ್ರೆಸ್ಸನ್ನು ಐಕ್ಯರಂಗದ ಸ್ವರೂಪಗಳೆಂದುಕೊಂಡಿದ್ದು ಒಂದು ನಿರೀಕ್ಷಿತ ಬೆಳವಣಿಗೆ. ಅದರ ಸ್ವರೂಪ ನಾಶವಾದಂತೆಲ್ಲಾ, ಅದು ಅಧಿಕಾರದ ಮೇಲೆ ಹಿಡಿತವನ್ನು ಕಳೆದುಕೊಳ್ಳಲಾರಂಭಿಸಿತು. ದುರಂತವೆಂದರೆ ಒಂದು ನಿರ್ದಿಷ್ಟ ಆಕಾರ ಪಡೆದ ಯಾವೊಂದು ಪರ್ಯಾಯ ಪಕ್ಷವೂ ಬೆಳೆಯದೇ ಇದ್ದುದು. ಬಿಜೆಪಿಯಾಗಲೀ, ಜನತಾದಳವಾಗಲೀ, ಕಮ್ಯುನಿಸ್ಟ್ ಪಕ್ಷವೇ ಆಗಲೀ ರಾಷ್ಟ್ರದ ಬಹುಪಾಲು ಜನರ ಒಲವು ಪಡೆಯುವ ರೀತಿ ಗಣನೀಯವಾಗಿ ಬೆಳೆಯದೇ ಹೋಗಿ, ಕಾಂಗ್ರೆಸ್ಸು ತನ್ನ ವರ್ಚಸ್ಸನ್ನು ಕಳೆದುಕೊಂಡು, ಏತನ್ಮಧ್ಯೆ ರಾಜಕೀಯ ವ್ಯವಸ್ಥೆಯಲ್ಲಿ ಅಧಿಕಾರದ ಸ್ಥಾನ ತೆರವಾಗಿ ಬರಿದೋ ಬರಿದಾಗಿದೆ. ಈಗ ಆಗುತ್ತಿರುವ ಈ ಸಾಮಾಜಿಕ- ರಾಜಕೀಯ ಬೇಗುದಿ, ಒಂದು ಅವಶ್ಯವಾದ ಪ್ರಕ್ರಿಯೆಯೇ ಆದರೂ, ಈ ಕುದಿ ನಿಂತು, ತಿಳಿ ಮೂಡಿ, ಶಕ್ತ ಪಕ್ಷಗಳು ಹುಟ್ಟಿಬರುವವರೆಗೆ, ಒಂದು ಅನಾಯಕವೆನಿಸುವ ರಾಜ್ಯಶಕ್ತಿಯ ತೆರವು ಉಂಟಾಗುತ್ತದೆ. ಇದು ಪ್ರಜಾಪ್ರಭುತ್ವದ ಭವಿಷ್ಯಕ್ಕೆ ಆರೋಗ್ಯಕರವಾದುದಲ್ಲ. ಇಂಥ ಸಂದರ್ಭವನ್ನು ಬುದ್ಧಿವಂತರೆನಿಸಿಕೊಳ್ಳುವವರು ಹೊಸ ರಾಜ್ಯಾಂಗ ಬೇಕು ಅಂತಲೋ, ಚುನಾವಣಾ ರೀತಿಯಲ್ಲಿ ಪರಿಹಾರ ಬೇಕೆಂತಲೋ, ನಮ್ಮ ಜನ ಈ ರೀತಿಯ ಪ್ರಜಾಪ್ರಭುತ್ವಕ್ಕೆ .ಅರ್ಹರಲ್ಲವೆಂತಲೋ ಹಲವಾರು ಅರೆ ಸತ್ಯಗಳನ್ನು ಪ್ರಮಾಣೀಕೃತ ಸಂಪೂರ್ಣ ಸತ್ಯವೆಂಬಂತೆ ಬಣ್ಣಿಸಿ, ರಾಷ್ಟ್ರಾಧ್ಯಕ್ಷರ ಮಾದರಿ ಸರ್ವಾಧಿಕಾರ ಸರ್ಕಾರವನ್ನು ತರಲು ಹವಣಿಸುತ್ತಾರೆ. ಆದ್ದರಿಂದ ರಾಜಕೀಯ ಪಕ್ಷಗಳು ಬಲುಬೇಗ ತಮ್ಮೊಳಗಿನ ಸಮಸ್ಯೆಗಳನ್ನು ಪರಿಹರಿಸಿಕೊಂಡು ಸ್ಥಿರ ಮತ್ತು ಜವಾಬ್ದಾರಿಯುತ ಸರ್ಕಾರ ರಚಿಸದಿದ್ದರೆ, ಅವರ ವರ್ತನೆಯಿಂದ ಅವರೇ ಇಂದಿನ ಪ್ರಜಾಪ್ರಭುತ್ವವನ್ನು ಹಾಳುಗೆಡವಿದವರಾಗುತ್ತಾರೆ. ಅಂಥವರನ್ನು ಜನತೆ ಎಂದೂ ಕ್ಷಮಿಸಲಾರದು. ಈ ಸಾರಿ ಚುನಾವಣೆಯಲ್ಲಿ, ಇಂದಿನ ಸ್ಥಿತಿಗೆ ಕಾರಣವಾದ, ಮತ್ತು ಎಲ್ಲಾ ಪಕ್ಷಗಳಲ್ಲೂ ಇರುವ, ವ್ಯಕ್ತಿಗಳನ್ನು ಗುರುತಿಸಿ ಅವರನ್ನು ಒಬ್ಬ ವ್ಯಕ್ತಿಯಾಗಿ ಜನತೆ ಸೋಲಿಸಿ ಪಾಠ ಕಲಿಸುವ ಭರವಸೆಯಿದೆ. ಅಂಥ ವ್ಯಕ್ತಿಗಳು ಪದಚ್ಯುತರಾದರೆ, ಸೋಲು ಅನುಭವಿಸಿದರೆ, ರಾಜಕೀಯ ಪರಿಸ್ಥಿತಿ ಸುಧಾರಿಸಲು ಖಂಡಿತ ಅವಕಾಶವಾಗುತ್ತದೆ.

**ಪಾರ್ಥಸಾರಥಿ**

ಹೀಗಾಗಲು ಒಂದು ಮುಖ್ಯ ಪೂರ್ವಭಾವೀ ಸಿದ್ಧತೆ ಸೈದ್ಧಾಂತಿಕವಾಗಿ ಬಹಳ ವ್ಯತ್ಯಾಸವಿಲ್ಲದ ವಿವಿಧ ಪಕ್ಷಗಳು, ಒಂದು ಅಂಗೀಕೃತ ಪೂರ್ವ ಪ್ರಕಟಿತ ಆರ್ಥಿಕ-ಸಾಮಾಜಿಕ ಕಾರ್ಯಕ್ರಮಗಳ ಆಧಾರದ ಮೇಲೆ ಒಂದು ಕಡೆ ಸೇರುವುದು ಅಗತ್ಯ. ಇಂದಿನ ಪರಿಸ್ಥಿತಿಯಲ್ಲಿ ಒಂದೇ ಪಕ್ಷಕ್ಕೆ ಇಂಥ ಸಾಮರ್ಥ್ಯ ಕಳೆದುಹೋಗಿದೆ. ಅಂಥದು ರಾಷ್ಟ್ರವ್ಯಾಪಕವಾಗಂತೂ ಖಂಡಿತ ಇಲ್ಲ. ಇರುವ ಪಕ್ಷಗಳಲ್ಲಿ ಕೆಲವು ಜಾತಿ ಅಥವಾ ವ್ಯಕ್ತಿಯ ಆಕರ್ಷಣೆಯ ಆಧಾರದ ಮೇಲೆ ರೂಪಿಸಿದ ಪಕ್ಷಗಳಾದರೂ, ಈ ಪಕ್ಷಗಳ ಅಂತರಾಳದಲ್ಲಿ ಕೆಲವು ಸ್ಪಷ್ಟವಾದ ಸಾಮಾಜಿಕ - ಆರ್ಥಿಕ- ಭಾವನಾತ್ಮಕ ಒಲವುಗಳಿರುವುದು ನಿಜ. ಈ ಒಲವುಗಳಿಗೆ ಒತ್ತುಕೊಟ್ಟು ಪರಸ್ಪರ ಚರ್ಚೆ ನಡೆದರೆ, ಒಂದು ಸ್ಪಷ್ಟ ಐಕ್ಯರಂಗ-ಸಂಯುಕ್ತರಂಗ- ಹೊಂದಾಣಿಕೆ ಸಾಧ್ಯ. ಅಂಥ ಒಕ್ಕೂಟಕ್ಕೆ ತಾತ್ವಿಕ- ಸೈದ್ಧಾಂತಿಕ ಬಲ ಸಿಗುವುದೂ ಸಾಧ್ಯ. ಹಾಗೆ ಚುನಾವಣೆಗೆ ಒಂದಾಗಿ ನೆಲೆಸಿರುವುದು ಮುಖ್ಯ. ಪ್ರಾಮಾಣಿಕ ವರ್ತನೆ ಇದ್ದರೆ ಭಿನ್ನಾಭಿಪ್ರಾಯಗಳು ಬಂದಾವೇ ವಿನಾ ಬಿರುಕು ಬರಲಾರದು. ಯಾವೊಂದು ಪಕ್ಷವೂ, ಅಂಥ ಹೊಂದಾಣಿಕೆಯಲ್ಲಿ, ಇತರ ಸದಸ್ಯರ ಹಿತಕ್ಕೆ ವಿರೋಧವಾಗಿ ಕೆಲಸ ಮಾಡುವುದಿಲ್ಲ. ಎಷ್ಟೇ ಸಣ್ಣ ಪ್ರಭಾವದ ಸದಸ್ಯ ಪಕ್ಷಕ್ಕೂ ಸಮಾನ ಗೌರವ, ಮರ್ಯಾದೆ ಸಲ್ಲುತ್ತದೆ. ಇಲ್ಲಿಯವರೆಗಿನ ಒಕ್ಕೂಟಗಳು ಈ ಸಂಯುಕ್ತರಂಗದ ಮೂಲತತ್ವಗಳನ್ನು ಪರಿಪಾಲಿಸಲಿಲ್ಲವಾಗಿ ಅವು ಜನತೆಯ ಅಂಗೀಕಾರ ಪಡೆಯಲಾಗಲಿಲ್ಲ. ಈ ಮೂಲತತ್ವಗಳ ಆಧಾರದ ಮೇಲೆ ಎರಡು ಮೂರು ಸಂಯುಕ್ತ ರಂಗಗಳ ರಚನೆ ಸಾಧ್ಯ.



ನೋಡಿದೆ, ದಪ್ಪ ಚರ್ಮಾರೀ ನಿಮ್ಮದು. ಅಷ್ಟು ಸಲ ಕಮಂಗಿ ತರಹ ಹಾರಿದ್ದರೂ ಇನ್ನೂ ಮಂತ್ರಿಗಳಾಗೇ ಉಳಿದಿದ್ದೀರಲ್ಲ! ಹೃದಯಾನೂ ಚೆನ್ನಾಗಿ ಬಡಿದುಕೋತಾ ಇದೆ. ಅದೊಂದರಿಂದಲೇ ನಿಮಗೆ ಹೃದಯ ಇದೆ ಅಂತ ಗೊತ್ತಾಗೋದು ಅಂದ್ಕೋತೀನಿ.

**ಈ ಲೇಖಕನಿಗೆ ಕಾಣುವ ಕೆಲವು ಸಾಧ್ಯತೆಗಳು**

1. ಕಾಂಗ್ರೆಸ್ ಮೊದಲಿನಂತೆ ಏಕಪಕ್ಷವಾಗಿದ್ದುಕೊಂಡೂ ಸಂಯುಕ್ತರಂಗದ ಸ್ವರೂಪ ಪುನಃ ಗಳಿಸಿಕೊಳ್ಳಲು ಪ್ರಯತ್ನಿಸುತ್ತದೆ. ಆದರೆ ಇದು ಸದ್ಯದಲ್ಲೇ ಸಾಧ್ಯವಿಲ್ಲ. ಆದುದರಿಂದ ಅದೂ ಮಿತ್ರ ಪಕ್ಷಗಳನ್ನು ಹುಡುಕಿ, ಹೊಂದಾಣಿಕೆ ಮಾಡಿಕೊಳ್ಳುವುದು ತುರ್ತು ಅಗತ್ಯ. ಹೀಗಾದಾಗ ಮಾತ್ರ ಗಣನೀಯ ಪ್ರಮಾಣದಲ್ಲಿ ವ್ಯಾಪಕತೆಯನ್ನು ಗಳಿಸಲು ಸಾಧ್ಯ. ಜನತಾದಳ (ಸೆಕ್ಯೂಲರ್), ಆರ್‌ಜೆಡಿ, ಕಮ್ಯುನಿಸ್ಟ್ ಪಕ್ಷಗಳು, ಎಐಡಿಎಂಕೆ, ಇಂಥ ಒಕ್ಕೂಟವಾಗಬಲ್ಲುದು. ಆದರೆ ಕಾಂಗ್ರೆಸ್ ಈ ಮಿತ್ರ ಪಕ್ಷಗಳನ್ನು ಒಡೆಯುವ, ನುಂಗಿಹಾಕುವ ಪ್ರಯತ್ನ ಮಾಡಿದರೆ ಅವರಿಂದ ಸ್ಥಿರ ಸರ್ಕಾರ ರಚಿಸಲಾಗುವುದಿಲ್ಲ. ಸಹಕರಿಸಿ, ಈ ಸಾರಿ ಅಧಿಕಾರಕ್ಕೆ ಬರದಿದ್ದರೆ, ಕಾಂಗ್ರೆಸ್ ಪಕ್ಷ ಇನ್ನಷ್ಟು ಛಿದ್ರವಾಗಿ ರಾಷ್ಟ್ರದ ರಾಜಕೀಯ ಜೀವನದಲ್ಲಿ ಅಪ್ರಸ್ತುತವಾಗುವುದು ಖಂಡಿತ.

2. ಬಿಜೆಪಿ ಮತ್ತು ಅದರ ಮಿತ್ರ ಪಕ್ಷಗಳು ಈಗಾಗಲೇ ಹೊಂದಾಣಿಕೆಯಲ್ಲಿ ಫಲಪ್ರದವಾಗಿವೆ. ಇವರು ಕಾಂಗ್ರೆಸ್ ನೇತೃತ್ವದ ಸಂಯುಕ್ತ ರಂಗಕ್ಕೆ ಹಣಾಹಣಿ ಕಾಳಗ ನೀಡುವ ಸಾಧ್ಯತೆಯಿದೆ. ಆದರ ದೌರ್ಬಲ್ಯ ಅದರ ಕೋಮುವಾದಿ ನೀತಿ ಬಡ ಜನರಿಗೆ, ಗ್ರಾಮವಾಸಿಗಳಿಗೆ ಯಾವ ರೀತಿಯಲೂ ಪ್ರಯೋಜನವಾಗದ ಆರ್ಥಿಕ ನೀತಿ; ಹಾಗೂ ಒಂದು ಕಡೆ ಸೇರಿರುವ ಈ ಗುಂಪಿನಲ್ಲಿ, ಕಾಂಗ್ರೆಸ್ ಪಕ್ಷದ ಕಡೆ ಸೇರುವ ಪಕ್ಷಗಳ ನಡುವೆ ಸ್ವಲ್ಪಮಟ್ಟಿಗೆ ಇರುವಂಥ ಯಾವ ಸೈದ್ಧಾಂತಿಕ ಸಮೀಕರಣವೂ ಇಲ್ಲದೆ ಈ ಒಕ್ಕೂಟ ಕೇವಲ ಸಮಯ ಸಾಧಕ ಒಕ್ಕೂಟವಾಗಿರುವುದು. ಕಾಂಗ್ರೆಸ್ ನೇತೃತ್ವದ ಹೊಂದಾಣಿಕೆ ಬರದಿದ್ದರೆ ಮಾತ್ರ ಈ ಗುಂಪು ಸ್ವಲ್ಪ ಬಹುಮತ ಗಳಿಸೀತು. ಆಗ ಮತ್ತೊಮ್ಮೆ ಅಸ್ಥಿರತೆ- ಕ್ಷಿಪ್ರದಲ್ಲೇ ಮರುಚುನಾವಣೆ ಆದರೂ ಆದೀತು.

ರಾಜಕೀಯ ಪಕ್ಷಗಳಿಗೇ ಈ ಪರಿಪ್ರೇಕ್ಷ್ಯ ಬರದೇ ಹೋಗಬಹುದು. ಆದರೆ ಜನತೆ ಎಂದಿನಂತೆಯೇ ಅನುಭವಿಗಳಾಗಿದ್ದಾರೆ. ಹಾಗಾಗಿ, ಮೊದಲಿನ ಗುಂಪಿನವರಿಗೇ ಬಹುಮತ ನೀಡಬಹುದು. ಆದರೂ ಸರ್ಕಾರ ರಚಿಸುವ ಹಂತದಲ್ಲಾದರೂ ಅವರು ಒಂದಾಗುವುದು ಅವರ ಮೇಲೆಯೇ ಅವಲಂಬಿಸಿದೆ

ಪಾರ್ಥಸಾರಥಿ
713, ವಿಜಯ ಮ್ಯಾನ್ ಷನ್, ಮೊದಲನೇ ಮುಖ್ಯರಸ್ತೆ,
ಆರ್.ಪಿ.ಸಿ. ಲೇ ಔಟ್, ಬೆಂಗಳೂರು - 560 040



# ಚುನಾವಣೆ - ನಮ್ಮ ನಿರೀಕ್ಷೆಗಳು

ಇನ್ನು ಕೆಲವೇ ದಿನಗಳಲ್ಲಿ ದೇಶವ್ಯಾಪಿ ಚುನಾವಣೆಯಲ್ಲಿ ಈ ದೇಶದ ಭವಿಷ್ಯ ನಿರ್ಧಾರವಾಗಲಿದೆ. ಅತ್ಯಂತ ಗೊಂದಲಮಯ, ಅನಿಶ್ಚಿತ, ರಾಜಕೀಯ ಪರಿಸ್ಥಿತಿ ಮತ್ತು ಅವಕಾಶವಾದಿ, ಸಮಯ ಸಾಧಕ ರಾಜಕೀಯ ವ್ಯಕ್ತಿಗಳನ್ನು ನೋಡುತ್ತಿದ್ದೇವೆ. ಕಳೆದ ಕೆಲವು ವರ್ಷಗಳಿಂದ ದೇಶದಲ್ಲಿ ವಿಜೃಂಭಿಸುತ್ತಿರುವ ಕೋಮುವಾದಿ ಶಕ್ತಿಗಳು, ಬಹುರಾಷ್ಟ್ರೀಯ ಕಂಪೆನಿಗಳ ವೇಷದಲ್ಲಿ ದೇಶವನ್ನಾಳಲು ಹವಣಿಸುತ್ತಿರುವ ಸಾಮ್ರಾಜ್ಯವಾದಿಗಳು... ಅವುಗಳನ್ನು ಬರಮಾಡಿಕೊಳ್ಳಲು ಕೈ

**ಕೆ. ಎಸ್. ವಿಮಲ**

ಚಾಚಿ ಕರೆಯುತ್ತಿರುವ ''ಸ್ವದೇಶ'' ಪ್ರೇಮಿಗಳು.... ಈ ಎಲ್ಲವುಗಳ ಮಧ್ಯೆ ಚುನಾವಣೆ ನಡೆಯುತ್ತಿದೆ. ಪ್ರಜಾಪ್ರಭುತ್ವದ ಅತ್ಯಂತ ಮಹತ್ವದ ಕರ್ತವ್ಯಗಳಲ್ಲೊಂದು 'ಮತದಾನ'. ನಾವು ದಾನ ಮಾಡುವ ''ಮತ'' ಹಲವು ಭರವಸೆಗಳಿಂದಾಗಿ ಹುಟ್ಟಿಕೊಂಡ ನಿರೀಕ್ಷೆಗಳು ಮತ್ತು ನಾವು ಮಾಡಲೇಬೇಕಾದ ಕರ್ತವ್ಯಗಳಿಂದ ಕೂಡಿರುತ್ತವೆಯೇ ಹೊರತು ''ಕರ್ಮಣ್ಯೇವ ಅಧಿಕಾರಸ್ತೇ'' ಎಂಬ ಗೀತೆಯ ಉಕ್ತಿಯಂತಲ್ಲ. ಆದರೆ ನಮ್ಮ ದೇಶದಲ್ಲಿ ಕರ್ಮಸಿದ್ಧಾಂತದ ಬಗ್ಗೆ ಅತ್ಯಂತ ಗಾಢನಂಬಿಕೆ ಇರುವ ಜನರಿರುವ ಹಿನ್ನೆಲೆಯಲ್ಲಿ ನಮ್ಮ ರಾಜಕಾರಣಿಗಳು ಮತದಾರರಿಂದ ನಿರೀಕ್ಷಿಸುವುದು ನಿಷ್ಫಲಾಪೇಕ್ಷೆಯ ಮತದಾನವನ್ನು.

ಹಿಂದಿನ ಹಲವು ಅನುಭವಗಳ ಆಧಾರದಲ್ಲಿ ರಾಜಕೀಯ ಪಕ್ಷಗಳ ಭರವಸೆಗಳ, ಚುನಾವಣಾ ಪ್ರಣಾಳಿಕೆಗಳ ಕುರಿತು ದೇಶದ ಮಹಿಳಾ ಸಮೂಹಕ್ಕೆ ಭ್ರಮನಿರಸನವಾಗಿದೆ. ರಾಜಕೀಯ ಪಕ್ಷಗಳು ತಮ್ಮ ಚುನಾವಣಾ ಪ್ರಣಾಳಿಕೆಗಳ ಅನುಷ್ಠಾನದ ಕುರಿತು ಗಂಭೀರವಾಗಿ ಚಿಂತಿಸದಿರುವುದು ದೃಢಪಟ್ಟಿದೆ. ಇಷ್ಟಾಗಿಯೂ ರಾಷ್ಟ್ರೀಯ ಮಹತ್ವದ ವಿಷಯಗಳ ಕುರಿತಂತೆ ನಿಲುವು, ಚರ್ಚೆ ಮುಂತಾಗಿ ಪ್ರಣಾಳಿಕೆಗಳು, ಚುನಾವಣೆಗಳು ತಮ್ಮದೇ ಮಹತ್ವವನ್ನು ಹೊಂದುತ್ತವೆ.

ಈ ಹಿನ್ನೆಲೆಯಲ್ಲಿ ದೇಶದ ಮಹಿಳಾ ಸಮೂಹ

ಅ. 'ಮಹಿಳೆಯರ ವಿಷಯಗಳು' ಎಂದು ವರ್ಗೀಕರಿಸಲಾಗುವ ಸಮಸ್ಯೆಗಳು ಮುಖ್ಯವಾಹಿನಿಯ ಸಮಸ್ಯೆಗಳೇ ಎಂದು ಪರಿಗಣಿಸಿ ಅವುಗಳ ಪರಿಹಾರವನ್ನು ರಾಷ್ಟ್ರೀಯ ಕಾರ್ಯಸೂಚಿಯಲ್ಲಿ ಸೇರ್ಪಡೆ ಮಾಡಬೇಕೆಂದು ಅಭಿಪ್ರಾಯ ಪಡುತ್ತದೆ.

ಆ. ವಿದೇಶೀ ಬಂಡವಾಳವು ಸೇವಾಕ್ಷೇತ್ರಕ್ಕೆ ಕಾಲಿಡದಂತೆ ಭಾರತದ ಪೇಟೆಂಟ್ ಸ್ವಾಮ್ಯತೆಯ ರಕ್ಷಣೆ ಮತ್ತು ಭಾರತದ ಆಹಾರ ಸ್ವಾವಲಂಬನೆಗೆ ಮಾರಕವಾಗುವ ವಿಶ್ವವ್ಯಾಪಾರ ಸಂಸ್ಥೆಯ ಷರತ್ತುಗಳ ವಿರುದ್ಧ ದೇಶದ ಆರ್ಥಿಕ ಸಾರ್ವಭೌಮತೆಯನ್ನು ಕಾಪಾಡುವ ಬದ್ಧತೆ ನಮಗೆ ಬೇಕು.

ಇ. ಮಹಿಳಾ ಮೀಸಲಾತಿ ಮಸೂದೆಯ ವಿಷಯದಲ್ಲಿ ಗೋಸುಂಬೆತನವನ್ನು ಬಿಟ್ಟು ನಿಜವಾದ ದಿಟ್ಟ ಸಕಾರಾತ್ಮಕ ಹೆಜ್ಜೆ ಇಡುವುದು ಎಲ್ಲ ರಾಜಕೀಯ ಪಕ್ಷಗಳ ಜವಾಬ್ದಾರಿಯಾಗಬೇಕು.

ಈ. ಜಾತ್ಯಾತೀತ ಮೌಲ್ಯಗಳಿಗೆ ಬದ್ಧವಾಗಿ ಕೋಮು ಸೌಹಾರ್ದತೆ ಮತ್ತು ಶಾಂತಿಯನ್ನು ಕಾಪಾಡುವ, ಧರ್ಮ ಮತ್ತು ರಾಜಕೀಯವನ್ನು ಬೆರೆಸದ, ಕೋಮು ಮತ್ತು ಮತೀಯ ಭಾವನೆಗಳನ್ನು ಕೆರಳಿಸುವವರ ವಿರುದ್ಧ ನಿರ್ದಾಕ್ಷಿಣ್ಯವಾಗಿ ಕಠಿಣ ಕ್ರಮ ತೆಗೆದುಕೊಳ್ಳುವ ಬದ್ಧತೆ ಮುಂಬರುವ ಸರ್ಕಾರಕ್ಕಿರಬೇಕೆಂಬುದು ನಮ್ಮ ಆಶಯ.

ಉ. ಬಿಳಿ ದೊರೆಗಳನ್ನು ಮೆಚ್ಚಿಸಲು ತರುತ್ತಿರುವ ಆರ್ಥಿಕ ಸುಧಾರಣಾ ಕ್ರಮಗಳಿಂದಾಗಿ ಆರ್ಥಿಕ ಕ್ಷೇತ್ರದ ಮೇಲಿನ ದುಷ್ಪರಿಣಾಮವನ್ನು ಇಲ್ಲವಾಗಿಸಿ ಲಕ್ಷಾಂತರ ಬಡ ಜನರ, ಮಹಿಳೆಯರ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತಿರುವ ಬೆಲೆ ಏರಿಕೆ, ನಿರುದ್ಯೋಗಗಳನ್ನು ತಡೆಗಟ್ಟಲು ಬದ್ಧರಾಗುವಂತಹವರು ಸರ್ಕಾರ ನಡೆಸುವಂತಾಗಬೇಕು.

ಊ. ಪೌರುಷದ ಹೆಸರಿನಲ್ಲಿ ಯುದ್ಧೋನ್ಮಾದವನ್ನು ಕೆರಳಿಸದ, ಜನಪರ, ಜಾತ್ಯಾತೀತ, ಧರ್ಮನಿರಪೇಕ್ಷ ಸರಕಾರವನ್ನು ನಡೆಸಲು ಬದ್ಧವಾಗುವ ಪಕ್ಷಗಳು ಅಡಳಿತಕ್ಕೆ ಬಂದರೆ ಮಾತ್ರ ಈ ದೇಶಕ್ಕೆ ಒಂದು ಭವಿಷ್ಯವಿದೆ. ಇಲ್ಲವಾದಲ್ಲಿ ಅಲ್ಪಸಂಖ್ಯಾತರನ್ನು ಜೀವಂತ ಸುಡುವ, ಮಹಿಳೆಯರ ಮೇಲೆ ದೌರ್ಜನ್ಯ, ಅತ್ಯಾಚಾರ ಎಸಗುವ, ಬಡತನ, ಹಸಿವು, ದಾರಿದ್ರ್ಯದಿಂದ ಬಹುಸಂಖ್ಯಾತರು ನರಳುವಾಗ ಕೆಲವೇ ಮಂದಿ ಐಷಾರಾಮದಲ್ಲಿ ಓಲಾಡುವ ಕರಾಳ ದಿನಗಳಷ್ಟೇ ದೇಶದ ಪಾಲಿಗೆ ಉಳಿಯಲು ಸಾಧ್ಯ. ಭಾರತದ ಜನರ – ವಿಶೇಷವಾಗಿ ಮಹಿಳೆಯರ – ಕನಸಿನ ಭಾರತವು ಕತ್ತಲ ಭಾರತವಲ್ಲ. ಬಹುಧರ್ಮೀಯ, ಬಹುಭಾಷಿಕ, ಬಹುಸಂಸ್ಕೃತಿಯ ಈ ದೇಶ ತನ್ನತನವನ್ನು ಉಳಿಸಿಕೊಳ್ಳಬೇಕು. ಈ ದೇಶದ ಭವಿಷ್ಯ ರೂಪಿಸುವ ಹಸುಳೆಗಳು ಅಸಹನೆಯ ಸಂಸ್ಕೃತಿಯಲ್ಲಿ ಬೆಳೆಯಬಾರದು. ಒಟ್ಟಿನಲ್ಲಿ, ದೇಶದ ಮಹಿಳಾ ಸಮುದಾಯ ಬಯಸುವುದು ಇದನ್ನು, ಇಂತಹ ಒಂದು ಸರ್ಕಾರವನ್ನು, ಜನಪ್ರತಿನಿಧಿಗಳನ್ನು ಚುನಾಯಿಸಲು ಮುಂದಾಗೋಣ.

**ಶ್ರೀಮತಿ ಕೆ. ಎಸ್. ವಿಮಲ**
ನಂ. 3, ಎಸ್. ವಿ. ಲೇ ಔಟ್, ಬನಶಂಕರಿ 1ನೇ ಹಂತ
ಬೆಂಗಳೂರು - 560 050

# ಸ್ವದೇಶಿ–ವಿದೇಶಿ

ಈವರೆಗೆ ಬಳ್ಳಾರಿಯ ಹೆಸರು ಕೇಳಿಲ್ಲದಿದ್ದವರಿಗೆ ಈಗ ಆ ಊರಿನ ಹೆಸರು ಗೊತ್ತಿದೆ. ಆದರಿಂದ ಆ ಊರಿನವರಿಗೆ ಲಾಭವೇನೂ ದಕ್ಕಲಾರದು. ಚಿಕ್ಕಮಗಳೂರು, ಗುಲ್ಬರ್ಗಾ ಮತ್ತು ತುಮಕೂರು ಇಂಥವೇ ಕಾರಣಗಳಿಗಾಗಿ ಹಿಂದೆ ಪ್ರಸಿದ್ಧಿ ಹೊಂದಿದ್ದವು. ಸದ್ದು-ಗದ್ದಲ ಕಡಿಮೆಯಾದ ಮೇಲೆ ಅಲ್ಲಿನ ಜನ ಹಿಂದಿನಂತೆಯೇ ಮುಂದುವರೆದರು. ಕಿರೀಟ, ಗರಿ, ಯಾವುವೂ ಅವರ ತಲೆಗಳ ಮೇಲೆ ಮೂಡಿ ಭಾರವನ್ನು ಉಂಟುಮಾಡಲಿಲ್ಲ. ಸೋನಿಯಾ-ಸುಷ್ಮಾ ಪಾದಾರ್ಪಣೆಯಿಂದ ಬಳ್ಳಾರಿಯ ಬೇಗೆ ಕೊನೆಯಾಗುತ್ತದೆಂಬ ಭ್ರಾಂತಿ ಬೇಡ. ಅವರಿಬ್ಬರೂ ಚುನಾವಣೆಗೆ ಈ ಊರನ್ನು ಆಯ್ಕೆ ಮಾಡಿಕೊಂಡದ್ದರಿಂದ ರಾಜ್ಯದ ರಾಜಕೀಯದಲ್ಲಿ ದೊಡ್ಡ ತಿರುವೇನೂ ಉಂಟಾಗುವುದಿಲ್ಲ. ಭದ್ರವಾದ ಕೋಟೆಗಳನ್ನು ಹುಡುಕಿಕೊಂಡು ಹೋಗುವುದು ರಾಜಕಾರಣಿಗಳಿಗೆ ಹೊಸದೇನೂ ಅಲ್ಲ. ಅದು ಭಾರತಕ್ಕೆ ಮಾತ್ರ ಸೀಮಿತವೂ ಅಲ್ಲ. ಬ್ರಿಟನ್ನಿನಲ್ಲಿ ಈಗಲೂ ಲೇಬರ್ ಪಕ್ಷದ ನಾಯಕರು ಯಾರ್ಕ್‌ಷೈರ್‌ಗೆ ಮತ್ತು ಕನ್ಸರ್ವೇಟಿವ್ ಪಕ್ಷದವರು ಹ್ಯಾಂಪ್‌ಷೈರ್‌ಗೆ ಓಡುವುದಿಲ್ಲವೆ? ಅಟಲ್‌ಜಿ ಲಕ್ನೋದಲ್ಲಿ ತಲೆ ಹುದುಕಿಕೊಳ್ಳಲಿಲ್ಲವೆ? ಅದ್ವಾನಿ ಅಹಮದಾಬಾದಿಗೆ ಹೋಗಿದ್ದೂ ಅದಕ್ಕೇ. ನಮ್ಮ ಭೂಪತಿ ಹೆಗಡೆ ಹಿಂದೆ ಬಸವನಗುಡಿಗೆ ಧಾವಿಸಿಬಂದಿದ್ದುದು ತಿಳಿದ ವಿಷಯವೇ. ಧೀಮಂತ ವೆಂಕಯ್ಯ ನಾಯ್ಡು ರಾಜ್ಯಸಭೆ ಪ್ರವೇಶಿಸಿದ್ದು ಕರ್ನಾಟಕ ವಿಧಾನಸಭೆಯಿಂದ. ಜೇಠ್ಮಲಾನಿಗೂ ಒಮ್ಮೆ ಇದೇ ನೆಲೆಯಾಗಿತ್ತು, ಹೆಗಡೆ ಮಹಾರಾಜರಿಗೆ ವಕೀಲರಾಗಿದ್ದುದರಿಂದ. ಆದರೂ ಬಳ್ಳಾರಿಯದು ಏನೋ ವಿಶೇಷ ಎಂಬಂತೆ ಸುಷ್ಮಾಜಿ ಅರಚುತ್ತಿದ್ದಾರೆ, ಅವರ ಪರಿವಾರ ಅದಕ್ಕೆ ದನಿಗೂಡಿಸಿದೆ. ಅದು ಸ್ವದೇಶಿ-ವಿದೇಶಿಗಳ ಜಟಾಪಟಿಯಂತೆ! ಸಂವಿಧಾನದತ್ತವಾದ ಹಕ್ಕಿನಿಂದ ಸುಷ್ಮಾ ಅಲ್ಲಿಗೆ ಬರಬಹುದು, ಸೋನಿಯ ಬರುವಂತಿಲ್ಲ, ಎನ್ನುವುದು ಸಂವಿಧಾನವನ್ನು ಮನಬಂದಂತೆ ತಿರುಚುವವರು ಮಾತ್ರ ಒಪ್ಪುವ ಮಾತು. ಟೆಲಿಕಾಂ ಹಗರಣವೂ ಸೇರಿದಂತೆ ಎಲ್ಲ ಬಗೆಗಳಲ್ಲೂ ವಿದೇಶಿ ಕಂಪೆನಿಗಳಿಗೆ ಮಾರುಹೋಗಿರುವ ಸುಷ್ಮಾ ಪಕ್ಷ ಹೇಗೆ ಸ್ವದೇಶಿ? ಐವತ್ತು ವರ್ಷಗಳ ಕಾಲ ಅಮೇರಿಕಾದ ಹುನ್ನಾರವನ್ನು ಹಿಮ್ಮೆಟ್ಟಿಸಿದ್ದ ಭಾರತವನ್ನು ಈಗ ಅಮೇರಿಕಾದ ಪದತಲದಲ್ಲಿ ಒಗೆದಿರುವ ವಾಜಪೇಯಿ ಪಕ್ಷ ಸ್ವದೇಶಿಗೆ ಬದ್ಧವಾಗಿದೆಯೆನ್ನುವುದು ಆ ಪದಕ್ಕೆ ಅವಮಾನ. ಬಳ್ಳಾರಿಯೂ ಬೇರೆ ಕ್ಷೇತ್ರಗಳಿದ್ದಂತೆ, ಅಷ್ಟೆ. ಯಾರು ಗೆಲ್ಲುತ್ತಾರೋ ಅವರ ಪಕ್ಷಕ್ಕೆ ಒಂದು ಸ್ಥಾನ ಬಂದಂತಾಗುತ್ತದೆ. ಹಾಗೆ ಚುನಾಯಿತರಾದವರು ಮಂತ್ರಿಯಾಗಬಹುದು ಅಥವಾ ಆಗದಿರಬಹುದು. ಒಬ್ಬಾಕೆ ಗೆದ್ದರೆ 'ಸ್ವದೇಶಿ', ಇನ್ನೊಬ್ಬಾಕೆ ಗೆದ್ದರೆ 'ವಿದೇಶಿ' ಎನ್ನುವುದಂತೂ ಮೂರ್ಖತನ. ಪ್ರಜೆಗಳಿಗೆ ಸಂವಿಧಾನವು ಏಕರೀತಿಯಲ್ಲಿ ಅನ್ವಯವಾಗುತ್ತದೆಂಬ ಮೂಲಭೂತ ಅಂಶವನ್ನು ಸುಷ್ಮಾ ಮತ್ತು ಅವರ ಪಕ್ಷ ನಿರಾಕರಿಸಿದರೆ ಇಂದು ಸೋನಿಯಾ ಬಲಿ. ನಾಳೆ ಇನ್ನೆಷ್ಟು ಜನರ್ದ್ದೋ? ಯಾವ ಬಣಗಳದ್ದೋ? ಭಾರತೀಯ ಜನತಾ ಪಕ್ಷದ ಈ ಕೃತ್ರಿಮವನ್ನು ಬೇರೆಲ್ಲರಿಗಿಂತಲೂ ಅದರ ಮಿತ್ರ ಪಕ್ಷಗಳು ಅರಿತುಕೊಳ್ಳಬೇಕಾಗಿದೆ. ○○

ಮತದಾನ ಮಾಡು
ಆದರೆ
*ಮತ ದಾನ ಮಾಡಬೇಡ !!*



**ಕೊಪ್ಪರಂ ಅನ್ನಪೂರ್ಣ, ಬೆಂಗಳೂರು - 3**



# ಚುನಾವಣೆ

## ಸಾಮಾನ್ಯನ ವೀಕ್ಷಣೆ

## ಪ್ರಕಾಶ ಹಿಟ್ಟಿನಹಳ್ಳಿ

ಇತ್ತೀಚೆಗೆ ಒಬ್ಬ ತಾಲ್ಲೂಕು ಪಂಚಾಯತಿ ಸದಸ್ಯರನ್ನು ''ನಿನ್ನ ಸಂದರ್ಶನ ತಗೋಬೇಕಾಗೇದ ಬಾ,'' ಎಂದೆ. ನಾನು ಕರೆದದ್ದು ಒಬ್ಬನನ್ನು. ಆದರೆ ನಾಲ್ಕು ಜನ ನನ್ನ ಹತ್ತಿರ ಬಂದರು. ನಾನು ಹೇಳಿದೆ : ''ನಾಲ್ಕೂರು ನಿಮ್ಮ ಕೈಯ್ಯಾಗ ಅವ. ಮೊದಲ ನನ್ನ ಪ್ರಶ್ನೆಗೆ ಎಲ್ಲಾರೂ ಉತ್ತರ ಕೊಡ್ರಿ'' ಎಂದೆ. ಆಮೇಲೆ ನನ್ನ ಪ್ರಶ್ನೆಯಾಗಿ ''ಆರಿಸಿಬರುವ ನಮ್ಮ ನಾಯಕರು ಎಂಥವರು ಇರಬೇಕು ?'' ಎಂದು ಕೇಳಿದೆ. ಅದಕ್ಕೆ ಅವರು ಸರಳವಾಗಿ, ನೇರವಾಗಿ ತಟ್ಟನೆ ''ಏನು, ನೀವು ನೋಡಿಲ್ಲ, ನಾವು ನೋಡಿಲ್ಲ್ಯS ಇವರ್ನ ! ಅವ್ರೇ ನಿಂದ್ರಾವರು ! ಅವ್ರೇ ಬರಾವ್ರು !!'' ಎಂದರು. ನಾನು ''ಅಲ್ಲ ಮೊದಲೆಲ್ಲಾ ಬಿ.ಎಸ್.ಪಿ. ಅಂತಿದ್ರಿ..; ಅದನ ಬದಲ ಮಾಡಿ ಅವ್ರು-ಇವ್ರು ಅಂತ ದನೀ ಬ್ಯಾರೆ ಯಾಕ ಮಾಡಿದಿರಿ ? ಇನಾ ನೀವೂ ಗಟ್ಟಿ ಆಗಿಲ್ಲ. ಪಡತರ ಧಾರಣಿ ಅಂದಾಜು ಮುಗದಿಲ್ಲ,'' ಎಂದು ನನ್ನ ಸಂಶಯ ಹೊರಹಾಕಿದೆ. ಅವರೆಲ್ಲ ಬೇರೆ ವಿಷಯಗಳ ಕಡೆಗೆ ನನ್ನನ್ನು ಎಳೆಯತೊಡಗಿದರು.

ನಾನು ಮತ್ತೆ ಕೇಳಿದೆ. ''ಬರುವ ಅಕ್ಟೋಬರ್‌ದೊಳಗ ದಿಲ್ಲಿ-ಬೆಂಗಳೂರಗಳಾಗ ಹೊಸ ಸರಕಾರ ಬರ್‍ತಾವ. ದಿಲ್ಲಿ ಸರಕಾರದ ವಿದೇಶ, ಆರ್ಥಿಕ, ಕೈಗಾರಿಕಾ ನೀತಿ ಹ್ಯಾಂಗಿರಬೇಕು ?'' ಸ್ಥಾನಿಕ ರಾಜಕೀಯ, ಸಾಮಾಜಿಕ ಸಂದರ್ಭಗಳಲ್ಲಿ ತಮ್ಮ ಬುದ್ಧಿಮತ್ತೆಯನ್ನು ಮೆರೆಯುವ ಈ ಜಾಬಾದಿ ಜನರಿಗೆ ಈ ವಿಷಯಗಳು ಎಂದೂ ಎದುರುಬಂದಿರಲಿಲ್ಲ. ಇವರು ಅವಕ್ಕೆಂದೂ ತಲೆ ಹಾಕಿದವರಲ್ಲ. ನಮ್ಮೂರಿನ ಜನನಾಯಕರು ಹಾಗೆಂದರೇನು ಎಂದು ನನ್ನನ್ನೇ ಪ್ರಶ್ನಿಸಿದರು. ಆರ್ಥಿಕ, ಔದ್ಯಮಿಕ, ವಿದೇಶಾಂಗ ನೀತಿಗಳ ಬಗ್ಗೆ ಒಂದಿಷ್ಟು ಹೇಳಿದೆ. ಹಾಗೇ ಅವರಿಗೆ ನಿಮ್ಮಂತೆ ಒಂದೊಂದು ಊರಿಗೂ 5-10 ಮಂದಿ ಜನನಾಯಕರಿರುತ್ತಾರೆ. ದೇಶದಲ್ಲಿ 5 ಲಕ್ಷಕ್ಕಿಂತ ಹೆಚ್ಚಿಗೆ ನಮ್ಮಂಥ ಸಣ್ಣ-ದೊಡ್ಡ ಹಳ್ಳಿಗಳಿವೆ. ಇವರೆಲ್ಲರೂ ಸೇರಿದರೆ 50 ಲಕ್ಷಕ್ಕೂ ಹೆಚ್ಚು ಕಾರ್ಯಕರ್ತರ ಬಲಿಷ್ಠ ಸಮುದಾಯ. ನೀವೆಲ್ಲ ವಿದೇಶಿ ನೀತಿ, ಆರ್ಥಿಕ ನೀತಿ, ಕೈಗಾರಿಕಾ ನೀತಿ, ಕೃಷಿ ನೀತಿಗಳು ಸ್ವಾತಂತ್ರ್ಯ ಸಿಕ್ಕಾಗಿಂದ ಇಂದಿನವರೆಗೆ ಮಾಡಿದ ಪರಿಣಾಮಗಳನ್ನು ತಿಳಿದು ಮತದಾನದಲ್ಲಿ ಭಾಗವಹಿಸಿ, ನೇತೃತ್ವ ನೀಡಿದರೆ, ನಿಮ್ಮ ತಿಳಿವನ್ನು ನೀವು ನಿಮ್ಮ ಅನುಯಾಯಿಗಳಿಗೆ, ಅವರು ನೇರ ಮತದಾರರಿಗೆ ಹೇಳಿದರೆ, ಆಗಿನ ಪರಿಸ್ಥಿತಿ ಹೇಗಾಗಿರುತ್ತದೆ ಎಂದು ವಿಶ್ಲೇಷಿಸಿದೆ. ಅದಕ್ಕೆ ಅವರು ''ಇವೆಲ್ಲ ಆರಿಸಿ ಬರುವ ಎಂ.ಎಲ್.ಎ., ಎಂ.ಪಿ.ಗಳೂ ತಲ್ಯಾಗ ಹಾಕ್ಕೊಳುದಿಲ್ಲ !'' ಎಂದರು. ನಾನು ''ಆರಿಸಿ ಬಂದಾವ್ರು ದಡ್ಡರೇನೂ ಇರೋದಿಲ್ಲ. ಒಂದು ವೇಳೆ ಮೊದಲು ವಿಷಯಗಳ ತಿಳಿವು ಇರದಿದ್ದರೂ, ಅಧಿಕಾರ ಪಡೆದ ಮ್ಯಾಲ ಅನಿವಾರ್ಯವಾಗಿ, ತಿಳಿಲಾರದ್ದು ತಿಳಕೋಬೇಕಾಗ್ತದ' ಎಂದೆ.

ಇವೇ ಪ್ರಶ್ನೆಗಳನ್ನು ನನ್ನ ಸುತ್ತಲು ಕುಳಿತಿದ್ದ ರಸ್ತೆ ಕೆಲಸಗಾರ, ಉಸುಕು ತುಂಬುವ ಹುಡುಗರು, ಒಬ್ಬ ಟ್ರ್ಯಾಕ್ಟರ್ ಡ್ರ್ಯಾಯ್‌ವರನಿಗೆ ಕೇಳಿದಾಗ ಬಹಳಷ್ಟು ಜನ ಹಾರಿಕೆ ಉತ್ತರ ನೀಡಿದರು. ರಸ್ತೆ ಕೆಲಸಗಾರ, ''ಈಗ ಕಾಂಗ್ರೆಸ್, ಈ ದಳ ಅದು-ಇದು ಲಫಂಗರ ಗುಂಪದಾವು. ನೀವು ಕಮ್ಯುನಿಸ್ಟ್ ಪಾರ್ಟಿ ಬೆಳಸಲಿಲ್ಲ, ಇದ್ದದ್ರಾಗ ಬಿಜೆಪಿ ನಿಷ್ಠಾ ಅದS.'' ಎಂದ. ಸುತ್ತಲಿನ ಉಳಿದವರು ಯಾರನ್ನೋ ಹೊಗಳುವುದು, ಯಾರ್‍ಯಾರನ್ನೋ ತೆಗಳುವುದು ಮಾಡತೊಡಗಿದರು. 5000 ಜನ ವಸತಿಯ ನಮ್ಮ ಗ್ರಾಮದಲ್ಲಿ 30-40 ಜನರಿರಬಹುದಾದ ರಾಜಕೀಯ ತಜ್ಞರಲ್ಲಿ ತಾನೂ ಒಬ್ಬನೆಂದು ಗಟ್ಟಿಯಾಗಿ ನಂಬಿರುವ ಟ್ರ್ಯಾಕ್ಟರ್ ಡ್ರ್ಯಾಯ್‌ವರ್ ಹೇಳಿದ : ''ಕಾಕಾSರ, ಯಾರೇ ಬಂದ್ರೂ, ರೊಕ್ಕ ತಿನ್ನಾವ್ರSS ! ಇವರು ರೊಕ್ಕಾ ತಿಂದ್ರೂ ಕೆಲಸಾ ಮಾಡವ್ರು ಇರಬೇಕು'' ಎಂದ. ನಾನು ನಮ್ಮ ಊರಿನಲ್ಲಿಯೇ ಇನ್ನಿತರ ಜನನಾಯಕರು ರೊಕ್ಕ ತಿಂದು ಮಾಡಿಸಿದ ರಸ್ತೆ ನಿರ್ಮಾಣ, ಶಾಲೆ ಕಟ್ಟಡ, ಪಾಯಖಾನೆಗಳು, ತಾಳಿಕೆಗಳ ಯಾದಿ ಇಟ್ಟೆ. ''ಇವೆಲ್ಲಾ ಹಣ ತಿಂದಾವ್ರು ಮಾಡಿದ ಕೆಲಸಾ'' ಎಂದೆ. ಅವನು ಸುಮ್ಮನಾದ.

ಇದಕ್ಕೂ ಎರಡು ದಿನಗಳ ಹಿಂದೆ ಒಬ್ಬ ಇಲೆಕ್ಟ್ರಿಕಲ್ ಇಂಜಿನಿಯರಿಂಗ್ ಕಡೆಯ ವರ್ಷದ ವಿದ್ಯಾರ್ಥಿ, ಒಬ್ಬ ಹಾಯಸ್ಕೂಲ ಶಿಕ್ಷಕ ಮುಂತಾದವರೊಡನಿದ್ದೆ. ಜೆ.ಎಚ್. ಪಟೇಲ, ದೇವೇಗೌಡ, ಹೆಗಡೆಗಳ ಲೀಲಾ ಪ್ರಸಂಗಗಳನ್ನು ಜಪಿಸುತ್ತಿದ್ದರು. ನಾನು ಮೆಲ್ಲಗೆ ವ್ಯಕ್ತಿಗಳನ್ನು ಬಿಟ್ಟು ನೀತಿಗತ ರಾಜಕೀಯದ ಪ್ರಶ್ನೆ, ಅದಕ್ಕೆ ಸಂಬಂಧಿಸಿದ ವಿಭಿನ್ನ ಆಯಾಮಗಳನ್ನು ಮುಂದಿಟ್ಟಾಗ, ಉತ್ತರಗಳನ್ನು ಕೇಳತೊಡಗಿದಾಗ, ಶಿಕ್ಷಕ ಮಹೋದಯರು ಆರ್ಥಿಕ-ಕೈಗಾರಿಕಾ ನೀತಿಗಳಿಗೂ ಹಾಗೂ ವಿದೇಶ ನೀತಿಗೂ ಏನೂ ಸಂಬಂಧವಿಲ್ಲ. ವಿದೇಶ ನೀತಿ ಯಾಕಾದರೂ ಬೇಕು ? ಎಂದು ಪ್ರಶ್ನಾರ್ಥಕ ಉದ್ಗಾರ ತೆಗೆದರು. ಇಂಜಿನಿಯರಿಂಗ್ ವಿದ್ಯಾರ್ಥಿ ಮೀಸಲಾತಿಯ ಲಾಭ ಪಡೆದವ. ಹೆಚ್ಚುತ್ತಿರುವ ಖಾಸಗೀಕರಣದ ಬಗ್ಗೆ ಅಸಮಾಧಾನ ವ್ಯಕ್ತಪಡಿಸಿದ. ಆರ್ಥಿಕ-ಕೈಗಾರಿಕೆಗಳನ್ನು ಖಾಸಗೀಕರಿಸುವಾಗ, ಜಾಗತೀಕರಣಗೊಳಿಸುವಾಗ ಬಿ.ಜೆ.ಪಿ. ಕಾಂಗ್ರೆಗಳು ಪೂರಕವಾಗಿ ಸಹಕರಿಸಿದ್ದನ್ನು ಪ್ರಸ್ತಾಪಿಸಿದಾಗ ಇವೆಲ್ಲ ನಮಗೆ ಗೊತ್ತಿಲ್ಲ ಎಂಬ ಉತ್ತರ. ಬಿ.ಜೆ.ಪಿ-ಕಾಂಗ್ರೆಗಳು ಆರ್ಥಿಕವಾಗಿ ಈಗ ಒಂದೇ ಗಿಡದ ಎರಡು ಟೊಂಗೆಗಳು ಎಂದು ನಾನೆಂದಾಗ ಅವರಿಗೆ ಇರುಸು-ಮುರುಸು.

ಈ ಹಿಂದೆ ವಿದ್ಯಾರ್ಥಿ ಫೆಡರೇಷನ್ ಮೂಲಕ ಬೆಳೆದ ಮಿತ್ರನೊಬ್ಬನಿದ್ದ. ನಂತರದ ದಿನಗಳಲ್ಲಿ ಕಮ್ಯುನಿಸ್ಟ್ ಪಕ್ಷ ಬಿಟ್ಟು ಎಲ್ಲೆಲ್ಲೂ ಸೊರಗ್ಯಾಡುತ್ತ ನಗರಸಭೆಯ ಉಪಾಧ್ಯಕ್ಷನಾದ. ಎರಡು ಮೂರು ಸಲ ವಿಧಾನಸಭೆ ಚುನಾವಣೆಗೂ ನಿಂತ. ಹಿಂದಿನ ಚುನಾವಣೆಯಲ್ಲಿ ಮುಲಾಯಂ ಪಕ್ಷದ ಅಭ್ಯರ್ಥಿಯಾಗಿದ್ದ. ಆತನನ್ನು ಮತದಾರರ ಒಲವು ಕೇಳಿದೆ.

''ವಿಜಾಪುರ ಲೋಕಸಭೆ ಚುನಾವಣೆಯಲ್ಲಿ ಬಿ.ಎಸ್.ಪಿ. ತಿಕೀಟನಿಂದ ಮುಂಬೈಯಲ್ಲಿ ವರಿಷ್ಠ ಪೋಲೀಸಧಿಕಾರಿಯಾಗಿ ನಿವೃತ್ತರಾಗಿ ಬಂದ ಬಸವರಾಜ ಆಕಾಶೆಯವರ ಸ್ಪರ್ಧೆಯಿಂದ ಹರಿಜನ-ಗಿರಿಜನ, ಅಲ್ಪಸಂಖ್ಯಾತರ ಮತಗಳು ಕಾಂಗ್ರೆಸ್‌ಗೆ ಸಿಗುವುದಿಲ್ಲ. ಬಿ.ಎಸ್.ಪಿ.ಗಳಿಸುತ್ತದೆ. ಇದರಿಂದ ಕಾಂಗ್ರೆಸು ಹಿನ್ನಡೆದು, ಬಿ.ಜೆ.ಪಿ.ಗೆ ಲಾಭವಾಗುತ್ತದೆ...

''ಬಿ.ಎಸ್.ಪಿ. ಬಲಗೊಂಡಂತೆ ಹಿಂದಿ ಪ್ರಾಂತಗಳಲ್ಲಿ ಕಾಂಗ್ರೆಸು ದುರ್ಬಲಗೊಂಡಿತು. ಎಡಪಕ್ಷಗಳು ನಾಮಶೇಷವಾದವು. ಬಿಜೆಪಿ ರಾಕ್ಷಸನಂತೆ ಬೆಳೆಯಿತು. ಬಿ.ಎಸ್.ಪಿ. ಬೆಳೆಯುವುದೆಂದರೆ ಬಿ.ಜೆ.ಪಿ.ಯೂ ಬೆಳೆದಂತೆಯೇ. ರಾಮಕೃಷ್ಣ ಹೆಗಡೆ ಇಲ್ಲಿ ದಲಿತ ಸಂಘರ್ಷ ಸಮಿತಿಯನ್ನು ಹಣಕೊಟ್ಟು ಬೆಳೆಸಿದಂತೆಯೇ ಎಲ್ಲ ಕಡೆಯಲ್ಲಿಯೂ ಕೋಮುವಾದಿ ನಾಯಕರು ಹಣಕೊಟ್ಟು ತಮಗೆ ಬಯ್ಯುವ, ತೋರಿಕೆ ವಿರೋಧ ಮಾಡುವ ಬಿ.ಎಸ್.ಪಿ.ಯನ್ನು ಬೆಳೆಸುತ್ತಿದ್ದಾರೆ'' ಎಂದ. ಇಷ್ಟೇ ಅಲ್ಲ, ಮತದಾರನ ಸ್ಥಾನಿಕ ಪ್ರಭುಗಳಿಗೆ ವ್ಯಕ್ತಿಗತ ಲಾಭ ಮಹತ್ವದ್ದಾಗುತ್ತದೆಯೇ ಹೊರತು ರಾಷ್ಟ್ರೀಯ ಅಂತಾರಾಷ್ಟ್ರೀಯ ವಿಷಯಗಳು ಅವರೆಂದೂ ವಿಚಾರಿಸುವುದಿಲ್ಲವೆಂದ. ಮತದಾರರಲ್ಲಿ ಬಹಳಷ್ಟು ಜನರು ಜನಸಾಮಾನ್ಯರ ಒತ್ತಾಯಕ್ಕೆ ಮತ ನೀಡುತ್ತಾರೆಂದ.

ಈಚೆಗೆ ಕಾಲೇಜಿನ ಪ್ರಿನ್ಸಿಪಾಲರೊಬ್ಬರು ಸಿಕ್ಕರು. ''ಈ ಹೇಸಿ ರಾಜಕೀಯ ನನಗ್ಯಾಕ'' ? ಎಂದರು. ಮುಲಾಯಂ ಸಿಂಗ್, ಲಾಲೂ ಪ್ರಸಾದ, ದೇವೇಗೌಡ, ಬಂಗಾರಪ್ಪ, ಬಾಳಠಾಕ್ರೆಯವರ ಹಾಗೂ ಇತರ ಬೆಂಬಲಿಗರ ಕೃತ್ಯಗಳ ಚರ್ಚೆಯನ್ನು, ದೇಶದಲ್ಲಿ ಪ್ರಾಮಾಣಿಕ, ನಿಷ್ಠಾವಂತರಿಗೆ ಒದಗಿರುವ ಹೀನಸ್ಥಿತಿಯನ್ನು ಮಂದ್ರಸ್ವರದಲ್ಲಿ ಆಲಾಪಿಸಿದರು. ಮುಂದಿನ ಕಾಲದ ಬಗ್ಗೆ ಅವರ ಕಲ್ಪನೆ ಚಿಂತನೆಗಳನ್ನು ಕೇಳಿದ್ದಕ್ಕೆ ಅವರು ಲಕ್ಷ ಲಕ್ಷ ಕೋಟಿ ರೂಪಾಯಿಗಳ ಭ್ರಷ್ಟಾಚಾರಿಗಳೆಲ್ಲರೂ ನ್ಯಾಯಾಲಯಗಳಲ್ಲಿ ಆರೋಪ ಮುಕ್ತರಾಗುತ್ತಿದ್ದಾರೆಂದು ದೂರು ಮುಂದೆ ಮಾಡಿ ಒದರಾಡಿದರು. ಭ್ರಷ್ಟಾಚಾರ ವಿರೋಧಿ ಹೋರಾಟ ಮಾಡದ್ದಕ್ಕೆ ಪಕ್ಷಗಳನ್ನು ಆಕ್ಷೇಪಿಸಿದರು. ಕಾರಖಾನೆಗಳ ಮಾಲಿಕರು (ಟಾಟಾರಂಥವರು) ರಾಜಕೀಯ ಪಕ್ಷಗಳಿಗೆ ನಿಧಿ ಕೊಡುವುದಿಲ್ಲೆಂದು ಅವರನ್ನು ಶ್ಲಾಘಿಸಿದರು. ''ತಮ್ಮಂಥ ಶಿಕ್ಷಣ ಕ್ಷೇತ್ರದ ಜನರು, ಪ್ರೊಫೇಸರರು, ವಕೀಲರು, ಬ್ಯಾಂಕ್ ಮ್ಯಾನೇಜರರು, ನೌಕರರು, ಅಂಚೆ-ವಿಮಾ ನೌಕರರು, ದೇಶದ ಮುಖ್ಯ ಸಮಸ್ಯೆಗಳ ಬಗ್ಗೆ ಚಿಂತನೆ ನಡೆಸುವುದಿಲ್ಲ ಎಂದರೆ ಹೇಗೆ ?'' ಎಂದೆ. ಈ ಪ್ರಾಚಾರ್ಯ ಮಹೋದಯರು ''ತೇ ಹಿ ನೋ ದಿವಸಾ ಗತಾಃ'' ತಿಳುವಳಿಕೆಯಲ್ಲಿ ''ಇವೆಲ್ಲಾ ವಿಚಾರ ಮಾಡಲಿಕ್ಕೆ ನಮಗೆ ಹುರುಪು ಉಳಿದಿಲ್ಲ !'' ಎಂದರು. ಅದಕ್ಕೇ ತಾವು ಓಟು ಹಾಕುವುದಕ್ಕೂ ಹೋಗುವುದಿಲ್ಲ ಎಂದರು.

OO

ಶ್ರೀ ಪ್ರಕಾಶ ಹಿಟ್ಟಿನಹಳ್ಳಿ
ನೆಹರೂ ಮಾರ್ಕೆಟ್, ಬಿಜಾಪುರ-೫೮೬೧೦೧

* ಊಟದ ಸಮಯ. ಎಲ್ಲಾ ಅತಿಥಿಗಳೂ ಆಗಲೆ ಊಟಕ್ಕೆ ಕುಳಿತಾಗಿತ್ತು. ಎಲ್ಲಿಂದಲೋ ಆಗಂತುಕನೊಬ್ಬ ಓಡಿಬಂದು ಪಂಕ್ತಿಯನ್ನು ಸೇರಿಕೊಂಡ. ಮನೆಯ ಯಜಮಾನ ಕೆಂಡಕಾರುವ ಕಣ್ಣುಗಳಿಂದ ಅವನನ್ನು ದುರುಗುಟ್ಟಿ ನೋಡಿದ. ಆದರೆ ಆಗಂತುಕ ಸ್ವಸ್ಥವಾಗಿ ಪಂಕ್ತಿಯಲ್ಲಿ ಕುಳಿತೇ ಇದ್ದ. ಅಂತಹವನ ಬಗ್ಗೆ ಭರ್ತೃಹರಿ ತನ್ನ 'ನೀತಿ ಶತಕ'ದಲ್ಲಿ ಹೇಳುತ್ತಾನೆ: ''ವರಂ ಮೃತ್ಯುಃ ನ ಭೋಜನಂ'' (ಊಟಕ್ಕಿಂತ ಅವನಿಗೆ ಸಾವೇ ಲೇಸು).

* ಜೆ. ಎಚ್. ಪಟೇಲರಿಗೆ ಭರ್ತೃಹರಿಯ ಮಾತು ಕೇಳಲು ಸಮಯ-ಸಹನೆಗಳಿಲ್ಲ. ಹೇಗೋ ಊಟ ಮಾಡಿದರೆ ಸರಿ, ಮಂತ್ರಿಯಾಗಿ ಮುಂದುವರೆದರೆ ಸರಿ. ಇದೇ ಅವರ ನೀತಿ. ಲೋಹಿಯಾವಾದಿ ಎಂಬ ಹೆಸರು ಬೇರೆ ಕೇಡು ಅಂಥವರಿಗೆ !



# ಗೊಂದಲಪುರದಿಂದ ಒಂದು ಪತ್ರ

ಮಾನ್ಯ ಯಜಮಾನಪ್ಪನವರಿಗೆ

ಬೀರಣ್ಣನ ನಮಸ್ಕಾರಗಳು.

ಈಗೀಗ ಪ್ರತಿ ಎರಡು ವರ್ಷಗಳಿಗೊಮ್ಮೆ ಚುನಾವಣೆಗಳು ಬರುತ್ತಿವೆ. ನಮ್ಮ ಕೆಲಸ ಕಾರ್ಯ ಹಾಳು. ನಿಮಗೆ ಪತ್ರಿಕೆಯ ಕೆಲಸವೇ ಕೈತುಂಬಾ ಇರುತ್ತದೆ. ಆದರೆ ಈ ಚುನಾವಣೆಯ ಕನ್‌ಫ್ಯೂಷನ್ ನಿವಾರಿಸಿಕೊಳ್ಳುವ ಬಗ್ಗೆ ನಿಮಗೆ ತೊಂದರೆ ಕೊಡದೆ ಬೇರೆ ಮಾರ್ಗವಿಲ್ಲ.

ನಾನು ನೆಹರೂ ಶಾಸ್ತ್ರಿ ಕಾಲದಿಂದ ಚುನಾವಣೆ ಕಂಡವನು. ನೀವು ತಮಾಷೆ ಮಾಡಿದರೂ ಸರಿ, ಮತ ಹಾಕುವುದನ್ನು ಪವಿತ್ರ ಕಾರ್ಯವೆಂದು ನಂಬಿದವನು. ಹಿಂದೆ ರಾಜಕೀಯ ಪಕ್ಷಗಳು ತಮ್ಮ ಪಕ್ಷದ ಕಾರ್ಯಕ್ರಮ ಜನರೆದುರು ಮಂಡಿಸಿ ಮತ ಯಾಚಿಸುತ್ತಿದ್ದವು. ಈಗ ಯಾವುದೇ ಕಾರ್ಯಕ್ರಮದ ಸುದ್ದಿಯಿಲ್ಲ. ನಮ್ಮದು ಹಳೇ ಪಾರ್ಟಿ, ನಮ್ಮದು 'ಶುದ್ಧ' ಪಾರ್ಟಿ, ನಾವು ಇದೀಗ 'ಕಾರ್ಗಿಲ್' ಜಗಳದಲ್ಲಿ ಗೆದ್ದಿದ್ದೇವೆ, ಆಕಾಶದೆತ್ತರಕ್ಕೆ ಗುಡಿಗೋಪುರ ಕಟ್ಟಿಸುತ್ತೇವೆ, ನಮಗೆ ಓಟು ಕೊಡಿ ಎನ್ನುತ್ತಾರೆ. ಮತ್ತೊಂದು ಪಕ್ಷ 'ನೀನು ನಮ್ಮ ಜಾತಿಯವನು. ನಮ್ಮ ಜಾತಿಯ ಉಮೇದುವಾರನಿಗೇ ನಿನ್ನ ಓಟು' ಎಂದು ಜಬರ್‌ದಸ್ತ್ ಮಾಡುತ್ತದೆ. ಪಕ್ಷಗಳಾದರೂ ಎಷ್ಟು ? ಹೊಸ ಹೊಸ ಚಿನ್ಹೆಗಳು ಬೇರೆ. ಯಾವ ವ್ಯಕ್ತಿ ಯಾವ ಪಾರ್ಟಿ, ಆತನ ಚಿಹ್ನೆ ಯಾವುದು ಎಂಬುದೂ ತಿಳಿಯದಷ್ಟು ಗೊಂದಲ. ಈ ಮಧ್ಯೆ ಮಹೇಶ ಯೋಗಿಗಳು ಸಹ ಪಾರ್ಟಿ ಕಟ್ಟಿ ರಾಜಕೀಯಕ್ಕಿಳಿಯುತ್ತಾರಂತೆ. ಇವರ ಪಕ್ಷದವರಿಗೆ ಓಟು ಕೊಡಬೇಕಾದವರು ಆಧ್ಯಾತ್ಮಿಗಳಾಗಿರಲೇಬೇಕಾಗುತ್ತದೆ! ಮತ್ತೊಂದು ಜಾತ್ಯಾತೀತ ಪಕ್ಷ . ಆದರೆ ಅವರ ಹೆಸರಿನ ಮುಂದೆ ಬ್ರಾಕೆಟಿನಲ್ಲಿ ಅವರ ಜಾತಿ ಹೇಳಿಕೊಳ್ಳಲು ಅಡ್ಡಿಯಿರುವುದಿಲ್ಲ....

ನಿನ್ನೆವರೆಗೆ ನಮ್ಮೂರಿನಲ್ಲಿ ಉಂಡಾಡಿಗಳಾಗಿದ್ದವರೆಲ್ಲ ಒಂದೊಂದು ಪಕ್ಷದ ಏಜೆಂಟರಾಗಿ ನಮ್ಮ ತಲೆ ತಿನ್ನತೊಡಗಿದ್ದಾರೆ. ಈಗ ಹೊಸ ಸ್ಕೂಟರುಗಳಲ್ಲಿ ಓಡಾಡತೊಡಗಿದ್ದಾರೆ! ಕೈ ಬೆರಳುಗಳಲ್ಲಿ ಲಕಲಕ ಹೊಳೆಯುವ ಚಿನ್ನದ ಉಂಗುರಗಳು. ಜೇಬು ತುಂಬಾ ನೋಟುಗಳು. ಕೆಲವರ ಮನೆಗೆ ಬಣ್ಣದ ಟೆಲಿವಿಷನ್‌ಗಳು ಕೂಡ ಬಂದಿವೆಯಂತೆ. ಹೆಂಗಸರು ಗುಸುಗುಡುವುದನ್ನು ಕೇಳಿದ್ದೇನೆ. ವದಂತಿಗಳಿಗಂತೂ ತಲೆ ಬಾಲ ಇಲ್ಲ.



ಮತದಾರರಿಗಾಗಿ ಪಂಚೆ- ಟವಲು, ಸೀರೆ-ಕುಪ್ಪಸ ಅಲ್ಲದೆ ಬಾಟಲಿಗಳು ಸಹ ಬಂದಿವೆಯಂತೆ! ಚುನಾವಣೆಯ ಸಂದರ್ಭದಲ್ಲಿ ನಡೆಯುವ ಮೋಡಿ ಇದು !

ತಮಿಳ್ನಾಡಿನ ಮುಖ್ಯಮಂತ್ರಿಗಳು ಭ್ರಷ್ಟಾಚಾರಕ್ಕಿಂತ ಕೋಮುವಾದ ಆಗಬಹುದು ಎಂದು ಅಪ್ಪಣೆ ಕೊಡಿಸಿದ್ದಾರಂತೆ. ಇವರ ತಲೆ ಬೋಳಾಗಿರಬಹುದು ಅನಿಸುತ್ತದೆ. ಈಗಾಗಲೇ ಭ್ರಷ್ಟಾಚಾರದ ಆಪಾದನೆ ಹೊತ್ತ ಅನೇಕರು ದಿನಕ್ಕೊಬ್ಬರಂತೆ ನಿರಪರಾಧಿಗಳಾಗಿ ಬಿಡುಗಡೆಯಾಗುತ್ತಿರುವ ವಿಷಯ ಅವರಿಗೆ ತಿಳಿಯದೇ ? (ಇದನ್ನು ಕೇಳಿದ ಪೆರಿಯಾರ್ 'ವೆಂಗಾಯಂ' ಎಂದು ಕಣ್ಣು ಕೆಂಪಗೆ ಮಾಡಿಕೊಂಡರಂತೆ). ನಮ್ಮ ಗ್ರಾಮ ಪಂಚಾಯಿತಿಯಲ್ಲಿ ಭ್ರಷ್ಟಾಚಾರವೋ ಕೋಮುವಾದವೋ ಎಂಬ ಬಗ್ಗೆ ಚರ್ಚೆ ನಡೆದು ಕಚ್ಚಾಟದಲ್ಲಿ ಮುಕ್ತಾಯವಾಯಿತೆನ್ನಿ.

ಕರ್ನಾಟಕದ ಮುಖ್ಯಮಂತ್ರಿಗಳಂತೂ ಗೋಡೆಯನ್ನೇ ಬಾಗಿಲೆಂದು ಕಾಯುತ್ತ 'ಗಯಾರಾಂ' ಆದರೆಂದು ತಿಳಿಯಿತು. ಬೇಸರವಾಯಿತು. ಕರ್ನಾಟಕದ ಇತಿಹಾಸದಲ್ಲಿ ಪ್ರಾಯಶಃ ಇಂಥ ನಗೆಪಾಟಲಿಗೀಡಾದ ಮತ್ತೊಬ್ಬ ಮುಖ್ಯಮಂತ್ರಿ ಇಲ್ಲ ಅಲ್ಲವೆ ? ಈ ಮಧ್ಯೆ ಅವರು ಎಲ್ಲ ಬಿಟ್ಟು ಏನೋ ಮಾಡಿದ ಎಂಬಂತೆ ಕ್ಯಾನ್ಸರ್ ಮದ್ದು ಕೊಡುತ್ತಿದ್ದಾರಂತೆ! ಅವರು ಪದೇಪದೇ ಜಿಂದಾಲ್‌ಗೆ ಅಡ್ಮಿಟ್ ಆಗುತ್ತಿದ್ದ ವಿಷಯ ಕೇಳಿದ್ದೆ. ಸ್ವತಃ ಅವರೇ ಕ್ಯಾನ್ಸರ್ ಪಂಡಿತರು ಎಂಬುದು ತಿಳಿದಿರಲಿಲ್ಲ !

ಇಂಥ ಗೊಂದಲದ ಪರಿಸ್ಥಿತಿಯಲ್ಲಿ ಚುನಾವಣಾ ಕಮಿಷನರು ಮತದಾನದ ಸಂದರ್ಭದಲ್ಲಿ ಸಾಕಷ್ಟು ಪೋಲೀಸರನ್ನು ಒದಗಿಸುವುದಾಗಿ ಹೇಳಿದ್ದಾರೆ. ನಮಗೆ ಪೋಲೀಸರ ಭಯ ಇನ್ನೂ ಹೋಗಿಲ್ಲ. ಗೊಂದಲಪುರದ ಜನರು ಯಾರಿಗೆ ಓಟು ಕೊಡೋಣ ಎಂದು ನನಗೆ ದುಂಬಾಲು ಬಿದ್ದಿದ್ದಾರೆ. ರಾಜಧಾನಿಯಲ್ಲಿರುವ ನಿಮಗೂ ಇಂಥ ಗೊಂದಲ ಉಂಟಾಗಿರಬಹುದೆ ? ಈಗ ನೀವೇ ನಮಗೆ ಮಾರ್ಗದರ್ಶನ ಮಾಡಬೇಕು. 'ಗೋಸುಂಬೆ ಪುಡಾರಿಗಳಿಗೆ ಜನಸಾಮಾನ್ಯರು ಸರಿಯಾಗಿ ಬುದ್ಧಿ ಕಲಿಸಿದರು'-- ಎಂದು ನೀವೇ ಪತ್ರಿಕೆಯಲ್ಲಿ ಬರೆಯಬಹುದಾದಂತೆ ನಿಮ್ಮ ಸಲಹೆ ಇರಲಿ. ಇನ್ನೇನೂ ವಿಷಯವಿಲ್ಲ. ಈ ವರ್ಷ ಮಳೆ-ಬೆಳೆ ಸುಮಾರಾಗಿದೆ. ನಿಮ್ಮ ಉತ್ತರ ನಿರೀಕ್ಷಿಸುತ್ತ-

ಬೀರಣ್ಣ, ಗೊಂದಲಪುರ

## ಸಾದರ ಸ್ವೀಕಾರ

**ರಾಕೆಟ್** — ಜೆ.ವಿ. ಗಣೇಶಯ್ಯ
ಪುಟ : 86 +6 — ಬೆಲೆ : ರೂ. 40

**ಕಂಪ್ಯೂಟರ್ ಲೋಕ** — ಜೆ. ವಿ. ಗಣೇಶಯ್ಯ
ಪುಟ : 96+6 — ಬೆಲೆ : ರೂ. 35

**ವಿಜ್ಞಾನ ದರ್ಶಿನಿ** — ಜೆ. ಅನಂತನಾರಾಯಣ ಸ್ವಾಮಿ
ಪುಟ: 136+ 4 — ಬೆಲೆ : ರೂ. 40

**ವೈರಸ್‌ಗಳು** — ಪಿ. ಕೆ. ರಾಜಗೋಪಾಲ್
ಪುಟ 48+4 — ಬೆಲೆ :ರೂ. 35

**ರಕ್ತದ ಕಥೆ** — ಡಾ|| ನಡಿಬೈಲು ಉದಯಶಂಕರ
ಪುಟ : 104+4 — ಬೆಲೆ : ರೂ. 35

**ಸತ್ಯ ಜೀವನ** — ಡಾ|| ಪಿ. ಕೆ. ರಾಜಗೋಪಾಲ್
ಪುಟ: 92+4 — ಬೆಲೆ: ರೂ. 40

**ನಮ್ಮ ಭೂಮಿಯ ಕಥೆ** — ಇ. ಡಿ. ನರಹರಿ
ಪುಟ: 72+9 — ಬೆಲೆ: ರೂ. 35

**ಕೀಟ ಪ್ರಪಂಚ** — ಡಾ|| ಪಿ. ಶಿವರಾಮ ರೈ
ಪುಟ: 94+5 — ಬೆಲೆ: ರೂ. 40

ಮೇಲಿನ ಎಂಟು ಪುಸ್ತಕಗಳ ಪ್ರಕಾಶಕರು
ಕೈಂತಜೆ ಪ್ರಕಾಶನ, ಪೇರಮುಗೇರು - 574 289, ದ.ಕ.

**ಗಾಂಧಿಯೊಂದಿಗೆ** — ಪ್ರಮೋದ್ ತುರ್ವಿಹಾಳ್
(ಕವನ ಸಂಕಲನ)
ಪುಟ : 50+ 16 — ಬೆಲೆ: ರೂ. 30
**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ
ಗಾಂಧಿನಗರ, ಬಳ್ಳಾರಿ - 583 103

**ಗಿಲಿಗಿಲಿ ಗೆಜ್ಜೆ** — ಹಾಲಾಡಿ ಮಾರುತಿರಾವ್
ಪುಟ : 40 — ಬೆಲೆ : ರೂ. 15
**ಇಂಚರ ಪ್ರಕಾಶನ,** 167, 10ನೇ ಮೈನ್, 3ನೇ ಘಟ್ಟ
ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು- 58

# ನಾವು ಹಾಗೂ ಹಸಿರು-ಮನೆ ಪರಿಣಾಮ

ಇಂದಿನ ಪರ್ಯಾವರಣ ಸಮಸ್ಯೆಗಳಲ್ಲಿ ಪ್ರಾಮುಖ್ಯತೆ ಪಡೆದಿರುವ ಹಸಿರು-ಮನೆ ಪರಿಣಾಮ (Green-House Effect) ಅಂದರೇನು ಎಂಬ ಪ್ರಶ್ನೆ ಸಾಮಾನ್ಯವಾಗಿ ಎಲ್ಲರ ಮನದಲ್ಲಿ ಏಳುವುದು ಸಹಜ. ಧ್ರುವ ಪ್ರದೇಶಗಳ ಶೀತ ವಲಯದಲ್ಲಿ ಬರುವ ದೇಶಗಳಲ್ಲಿ ಕಾಯಿಪಲ್ಯೆ, ಫಲಪುಷ್ಪಗಳನ್ನು ದೊಡ್ಡದಾದ ಕಮಾನಿನಂತೆ ಕಾಣುವ ಗಾಜಿನ ಚಪ್ಪರಗಳಿದ್ದ ವಿಶೇಷ ಶೆಡ್ಡುಗಳಲ್ಲಿ ಬೆಳೆಯುತ್ತಾರೆ. ಹೊರಗಿನ ವಾತಾವರಣದ ಶೀತದಿಂದ ರಕ್ಷಣೆ ಹಾಗೂ ಸಸ್ಯಗಳ ಬೆಳವಣಿಗೆಗೆ ಅವಶ್ಯವಿರುವ ದ್ಯುತಿಸಂಶ್ಲೇಷಣೆ ಕ್ರಿಯೆ

**ಡಾ|| ವಿರೂಪಾಕ್ಷ ಕೆ. ಬಣಕಾರ**

ಸರಾಗವಾಗಿ ನಡೆಯಲು ಈ ಹಸಿರು ಮನೆಗಳು ಸಹಾಯಮಾಡುತ್ತವೆ. ದ್ಯುತಿಸಂಶ್ಲೇಷಣೆ ಕ್ರಿಯೆಯಿಂದ ಹೊರಬೀಳುವ ಇಂಗಾಲದ ಡೈ-ಆಕ್ಸೈಡ್ ($CO_2$) ಅನಿಲದಿಂದಾಗಿ, ಈ ಹಸಿರು-ಮನೆಗಳಲ್ಲಿನ ವಾತಾವರಣ ಉಷ್ಣವಲಯದಲ್ಲಿನ ವಾತಾವರಣದಂತೆ ಬಿಸಿಯಾಗಿರುವುದು. ಅಂದರೆ, ಇಂಗಾಲದ ಡೈ-ಆಕ್ಸೆಡ್ ಸೂರ್ಯನ ರಶ್ಮಿಗಳನ್ನು ಪೃಥಕ್ಕರಿಸದೆ ತನ್ನಲ್ಲಿ ಹಿಡಿದಿಟ್ಟುಕೊಳ್ಳುವ ಗುಣದಿಂದಾಗಿ ಉಷ್ಣದ ಏರಿಕೆಗೆ ಕಾರಣವಾಗುವುದು. ಈ ರೀತಿ ವಾತಾವರಣದಲ್ಲಿ ಏರುವ ಬಿಸಿಗೆ ಹಸಿರು-ಮನೆ ಪರಿಣಾಮ ಎನ್ನುವರು. ಈ ಹಸಿರು-ಮನೆ ಪರಿಣಾಮವೇ ನಾವೆಲ್ಲ ಈಗ ಎದುರಿಸುತ್ತಿರುವ ಮಹಾ ಸಮಸ್ಯೆ. ಈ ಸಮಸ್ಯೆಯ ತೀವ್ರತೆಯನ್ನು ಅರಿತುಕೊಳ್ಳಬೇಕಾದರೆ ನಮ್ಮ ಪೃಥ್ವಿಯ ಇತಿಹಾಸದ ಕೆಲ ಪುಟಗಳನ್ನು ತಿರುವಿ ಹಾಕುವುದು ಒಳಿತು.

ಸುಮಾರು 4.5 ಕೋಟಿ ವರ್ಷಗಳ ಹಿಂದೆ ಜನಿಸಿದ ನಮ್ಮ ಗ್ರಹ ಸತತವಾಗಿ ನೈಸರ್ಗಿಕ ಬದಲಾವಣೆ, ಹೊಂದಾಣಿಕೆ ಹಾಗೂ ಪ್ರಕೋಪಗಳಿಗೊಳಪಟ್ಟಿದೆ. ಈ ನೈಸರ್ಗಿಕ ಕ್ರಿಯೆಗಳ ಪರಿಣಾಮವಾಗಿ, ಬದಲಾವಣೆಗೆ ಹೊಂದಿಕೊಳ್ಳಲು ಅಶಕ್ತವಾದ ಎಷ್ಟೋ ಜೀವ ಪ್ರಭೇದಗಳು ನಶಿಸಿದವು. ಅದೇ, ಬದಲಾವಣೆಗೆ ಹೊಂದಿಕೊಂಡ ಎಷ್ಟೋ ಜೀವಕುಲಗಳು ಬದುಕುಳಿದವು ಹಾಗೂ ಕೆಲವು ಹೊಸ ಕುಲಗಳು ಜನಿಸಿದವು. ಕೇವಲ ಒಂದು ದಶಲಕ್ಷ ವರ್ಷಗಳ ಹಿಂದೆ ಈ ಗ್ರಹದ ಮೇಲೆ ಆಗಮಿಸಿದ ಮಾನವಕುಲದ ಭೂ-ಇತಿಹಾಸವನ್ನು, ಜ್ಯುರಾಸಿಕ್ ಯುಗದಲ್ಲಿ ಉತ್ತುಂಗಕ್ಕೇರಿದ ಸುಮಾರು ಎರಡು ನೂರು ದಶಲಕ್ಷ ವರ್ಷಗಳ ಇತಿಹಾಸವಿದ್ದ ಪೆಡಂಭೂತಗಳಿಗೆ (Dinosaurs) ಹೋಲಿಸಿದರೆ, ಪೃಥ್ವಿಗೆ ನಾವೆಷ್ಟು ಹೊಸಬರು ಎನ್ನುವುದು ಅರಿವಾಗುತ್ತದೆ. ಮಿಸೋರ್ಝೋಯಿಕ್ ಮಹಾಯುಗದಲ್ಲಿ ಎರಡು ನೂರು ದಶಲಕ್ಷ ವರ್ಷ ಈ ಗ್ರಹವನ್ನಾಳಿದ ಪ್ರಚಂಡ ಪೆಡಂಭೂತಗಳು, ಭೂಮಿಯ ವಾತಾವರಣದಲ್ಲಿ ಅಲ್ಪ ಪ್ರಮಾಣದಲ್ಲಿ ಹೆಚ್ಚಿದ ಇರಿಡಿಯಮ್ ಎನ್ನುವ ಲೋಹದಣುಗಳಿಂದಾಗಿ ಒಂದೇ ಹೊಡೆತಕ್ಕೆ ನಶಿಸಿಹೋದವು. ಅಂದಮೇಲೆ ಪೃಥ್ವಿಗೆ ಹೊಸಬರಾದ ನಾವ್ಯಾವ ಲೆಕ್ಕ ? ಅತ್ಯಂತ ವೇಗದಿಂದ ಬದಲಾಗುತ್ತಿರುವ ಪರ್ಯಾವರಣಕ್ಕೆ ಹೊಂದಿಕೊಂಡು, ಬದುಕುಳಿದು, ಭವಿಷ್ಯದ ಯುಗಗಳನ್ನು ಕಾಣುವಷ್ಟು ಸಶಕ್ತವೇ ಈ ಮಾನವ-ಕುಲ ಎನ್ನುವುದಿನ್ನೂ ತಿಳಿದಿಲ್ಲ. ಒಂದೇ ಒಂದು ದಿನ ಮನೆಯ ನಲ್ಲಿಯಲ್ಲಿ ನೀರು ಬರದಿದ್ದರೆ ಒದ್ದಾಡುವ ಈ ಆಧುನಿಕ ಮಾನವ-ಕುಲ, ಏನಾದರೊಂದು ಪ್ರಳಯದಿಂದಾಗಿ ಮರು ಭೂಮಿಯ ಪರಿಸ್ಥಿತಿ ಉಂಟಾದರೆ ಭವಿಷ್ಯದ ಯುಗಗಳನ್ನು ಕಾಣಬಹುದೇ ಎನ್ನುವುದನ್ನು ಸಮಯವೇ ತಿಳಿಸಬೇಕು. ಚಾರ್ಲ್ಸ್ ಡಾರ್ವಿನ್‌ನ ಸಿದ್ಧಾಂತ ''ಬದುಕಿನ ಹೋರಾಟದಲ್ಲಿ... ಸಶಕ್ತನ ಉಳಿವು, ಅಶಕ್ತನ ಅಳಿವು'' ಎನ್ನುವುದು ಸಂಪೂರ್ಣ ಸತ್ಯವಾಗಿದೆ. ಇಲ್ಲಿ ಸಶಕ್ತನೆಂದರೆ ಶ್ರೀಮಂತ ಅಥವಾ ಅಧಿಕಾರದ ಸೂತ್ರಧಾರನಲ್ಲ, ಬದಲಾದ ವಾತಾವರಣಕ್ಕೆ ಹೊಂದಿಕೊಳ್ಳುವ ಗುಣವಿದ್ದ ಜೀವಿ ಎಂದರ್ಥ. ಅಂದರೆ, ನಮ್ಮ ಪರ್ಯಾವರಣ ನಮ್ಮ ಅಳಿವು-ಉಳಿವಿನ ನಿಯಂತ್ರಕನೆಂದರೆ ತಪ್ಪಾಗಲಿಕ್ಕಿಲ್ಲ.

ವಾತಾವರಣವನ್ನು ಪ್ರದೂಷಿತಗೊಳಿಸಿ ಮಾನವ ಕುಲದ ಉಳಿವಿಗೆ ಸವಾಲನ್ನೆಸೆದಿರುವ ಬೃಹತ್ ರಾಕ್ಷಸರೆಂದರೆ ಹಸಿರು-ಮನೆ ಅನಿಲಗಳು. ಈ ಗುಂಪಿನಲ್ಲಿ ಇಂಗಾಲದ ಡೈ-ಆಕ್ಸೈಡ್, ಮಿಥೇನ್, ಇಂಗಾಲದ ಮೊನಾಕ್ಸೈಡ್ ಹಾಗೂ ಕ್ಲೋರೊ-ಫ್ಲೂರೊ-ಕಾರ್ಬನ್ ಎನ್ನುವ ಅನಿಲಗಳು ಸೇರಿವೆಯೆಂದು ವಿಜ್ಞಾನಿಗಳು ತೋರಿಸಿದ್ದಾರೆ. ಮಿತಿಯಿರದ ಖನಿಜ-ಇಂಧನಗಳ (Petroleum products and Coal) ಬಳಕೆ ಹಾಗೂ ಅರಣ್ಯ ನಾಶದಿಂದಾಗಿ ನಮ್ಮ ವಾತಾವರಣದಲ್ಲಿ ಇಂಗಾಲದ ಡೈ-ಆಕ್ಸೈಡ್‌ನ ಪ್ರಮಾಣ ಈ ಶತಮಾನದಲ್ಲಿ ಸುಮಾರು 25% ಹೆಚ್ಚಿರುವುದಾಗಿ ಹವಾಯಿಯಲ್ಲಿರುವ ಮೌನಾ ಲೋವ ವೀಕ್ಷಣಾ ಕೇಂದ್ರದ ಮಾಪನಗಳಿಂದ ತಿಳಿದುಬಂತು (ಚಿತ್ರ 1). 1850ರ ವಾತಾವರಣದಲ್ಲಿ ಸುಮಾರು 270 ಪಿ.ಪಿ.ಎಮ್ ಇದ್ದ ಈ ಅನಿಲ, 1993ರಲ್ಲಿ 340 ಪಿ.ಪಿ.ಎಮ್‌ಗೆ ಏರಿತು. ಈ ಹೆಚ್ಚಳದ ಪ್ರಕಾರ ಲೆಕ್ಕ ಹಾಕಿ ನೋಡಿದರೆ, ಇಪ್ಪತ್ತೊಂದನೇ ಶತಮಾನದ ಅಂತ್ಯದೊಳಗಾಗಿ ನಮ್ಮ ವಾತಾವರಣದಲ್ಲಿ ಇದರಂಶ ಸುಮಾರು 500 ಪಿ.ಪಿ.ಎಮ್ ತಲುಪಬಹುದು. ಹೋದ ಒಂದು ಸಾವಿರ ವರ್ಷಗಳ ಮಿಥೇನ್ ಅನಿಲ ನಮ್ಮ ವಾತಾವರಣದಲ್ಲಿ ಯಾವ ರೀತಿಯಾಗಿ ಹೆಚ್ಚಿತೆಂದು ಅರಿಯಲು ವಿಜ್ಞಾನಿಗಳು ಗ್ರೀನ್‌ಲ್ಯಾಂಡ್ ಹಾಗೂ ಅಂಟಾರ್ಕ್‌ಟಿಕ್ ಪ್ರದೇಶಗಳ ಬರ್ಫಿನ ಬಂಡೆಗಳ ಅಂತರಾಳವನ್ನು ಕೆದುಕಿ ಅಭ್ಯಸಿಸಿದರು. ಆ ಪರೀಕ್ಷೆಗಳ ಪ್ರಕಾರ, ಹೋದ ಎರಡು ಶತಮಾನಗಳಲ್ಲಿ ಮಿಥೇನ್ ಅನಿಲ ದುಪ್ಪಟ್ಟಾಗಿರುವುದು ಬೆಳಕಿಗೆ ಬಂತು (ಚಿತ್ರ 2). ಹಿಂದಿನ ಶತಮಾನಗಳಲ್ಲಿ ಸುಮಾರು 750 ಪಿ.ಪಿ.ಬಿ ಇದ್ದ ಮಿಥೇನ್ ಹದಿನೆಂಟನೆ ಶತಮಾನದಿಂದ ಮಿತಿಗೆಟ್ಟು ಏರತೊಡಗಿ, ಇಂದು ಸುಮಾರು 1500 ಪಿ.ಪಿ.ಬಿ ಮಟ್ಟಕ್ಕೇರಿದೆ. ಅದೇ ರೀತಿ, ಕ್ಲೋರೊ-ಫ್ಲೂರೊ-ಕಾರ್ಬನ್ 1978ರ 250 ಪಿ.ಪಿ.ಟಿ ಮಟ್ಟದಿಂದ ಏರುತ್ತ 1994ರಲ್ಲಿ 500 ಪಿ.ಪಿ.ಟಿ. ಮಟ್ಟ ತಲುಪಿತೆಂದು ವಿಜ್ಞಾನಿಗಳು ತಿಳಿಸಿದರು. ಹಾಗೆಯೇ ಇಂಗಾಲದ ಮೊನಾಕ್ಸೈಡ್, ಹ್ಯಾಲನ್ಸ್, ಇಂಗಾಲದ ಟೆಟ್ರಾಕ್ಲೋರೈಡ್, ಕ್ಲೋರೋಫಾರ್ಮ್‌ಗಳಂತಹ ಉಳಿದ ವಿಷಾನಿಲಗಳು ನಮ್ಮ ವಾತಾವರಣದಲ್ಲಿ ಹೆಚ್ಚಿದ್ದು ಕಂಡುಬಂದಿದೆ. ವಾತಾವರಣದಲ್ಲಿ ಅಗಾಧ ಪ್ರಮಾಣದ ಆಮ್ಲಜನಕ, ಸಾರಜನಕಗಳಂತಹ ಜೀವೋಪಯೋಗಿ ಅನಿಲಗಳಿರುವಾಗ, ಇಷ್ಟೊಂದು ಕ್ಷುಲ್ಲಕ ಪ್ರಮಾಣದಲ್ಲಿರುವ ಈ ಹಸಿರು-ಮನೆ ಅನಿಲಗಳು ನಮಗೇನು ತಾನೆ ಮಾಡಿಯಾವು ಎಂದು ಕಣ್ಣುಮುಚ್ಚಿ ಕುಳಿತುಕೊಳ್ಳುವ ಹಾಗಿಲ್ಲ. ಅವುಗಳ ಪ್ರಮಾಣ ಅತ್ಯಂತ ಕಡಿಮೆಯಿದ್ದರೂ, ಅವುಗಳ ಅಲ್ಪ ಹೆಚ್ಚಳದಿಂದ ಉದ್ಭವಿಸಬಹುದಾದ ದುಷ್ಪರಿಣಾಮಗಳನ್ನು ಯೋಚಿಸಿದರೆ ದೇಹ ಕಂಪಿಸಬಹುದು.




ಚಿತ್ರ-೧. ವರ್ಷದಿಂದ ವರ್ಷಕ್ಕೆ ವಾತಾವರಣದಲ್ಲಿ ಹೆಚ್ಚುತ್ತಿರುವ ಕಾರ್ಬನ್-ಡೈ-ಆಕ್ಸೈಡ್ ಅನಿಲ

ಜಗತ್ತಿನ ವಾತಾವರಣದಲ್ಲಿ ಹೆಚ್ಚುತ್ತಿರುವ ಉಷ್ಣತೆಗೆ 60% ಕಾರಣ ಇಂಗಾಲದ ಡೈ ಆಕ್ಸೈಡ್ ಹಾಗೂ 15% ಕಾರಣ ಮಿಥೇನ್ ಅನಿಲವೆಂದು ತಿಳಿದುಬಂದಿದೆ. ವಾತಾವರಣದ ಸ್ತರಗೋಲದಲ್ಲಿ (stratosphere) ಇರುವ ಓಝೋನ್ ಅನಿಲದ ಪರದೆ ನಮಗೆಲ್ಲ ರಕ್ಷಾಕವಚದಂತೆ. ಈ ಓಝೋನ್ ಪರದೆ, ಸೂರ್ಯನಿಂದ ಬರುವ ಹಲವಾರು ಹಾನಿಕಾರಕ ಅಧಿ-ನೇರಳೆ (ultraviolet) ಕಿರಣಗಳನ್ನು ತಡೆಹಿಡಿದು ಸೋಸಿ ಪೃಥ್ವಿಯ ಮೇಲಿರುವ ಜೀವಜಗತ್ತನ್ನು ಕಾಪಾಡುವ ಕಾರ್ಯ ಮಾಡುತ್ತದೆ. ಈ ಪರದೆಯನ್ನು




ಚಿತ್ರ-೨. ಗ್ರೀನ್‌ಲ್ಯಾಂಡ್ ಹಾಗೂ ಅಂಟಾರ್ಕ್‌ಟಿಕ ಪ್ರದೇಶದ ಬರ್ಫಿನ ಬಂಡೆಗಳ ಅಂತರಾಳದಲ್ಲಿ ಮಾಪಿಸಿದ ಮಿಥೇನ್ ಅನಿಲದ ಪ್ರಮಾಣ.

ಕ್ಲೋರೊ-ಫ್ಲೂರೊ- ಕಾರ್ಬನ್‌ನಂತಹ ಅನಿಲಗಳು ರಾಕ್ಷಸನಂತೆ ನುಂಗಿಬಿಡುವುವು. ಒಂದು ವೇಳೆ ಇಂಗಾಲದ ಡೈ ಆಕ್ಸೈಡ್‌ನ ಅಂಶ 500 ಪಿ.ಪಿ.ಎಮ್ ಮಟ್ಟ ತಲುಪಿದರೆ, ಹಲವಾರು ವಿಜ್ಞಾನಿಗಳ ಪ್ರಕಾರ, ಜಾಗತಿಕ ಸರಾಸರಿ ಉಷ್ಣತೆಯಲ್ಲಿ ಹೆಚ್ಚಳವಾಗುವುದು. ಈ ಹೆಚ್ಚಳ ಧ್ರುವ ಪ್ರದೇಶದ ಶೀತವಲಯದಲ್ಲಿ 2-4 ಡಿಗ್ರಿ ಸೆಲ್ಸಿಯಸ್ ಆದರೆ, ಉಷ್ಣ ವಲಯದಲ್ಲಿ 5 ಡಿಗ್ರಿ ಆಗಬಹುದು. ಉಷ್ಣತೆಯ ಈ ಹೆಚ್ಚಳದಿಂದ ಧ್ರುವ ಪ್ರದೇಶದಲ್ಲಿರುವ ಬರ್ಫಿನ ಬಂಡೆಗಳು ಕರಗಿ, ಸಾಗರಗಳಲ್ಲಿ ಹೊಸನೀರಿನ ಸಂಚಯವಾಗಿ ಸಮುದ್ರ ಪಾತಳಿ ಏರಬಹುದು, ಚಂಡಮಾರುತಗಳ ಸಂಖ್ಯೆ ಹಾಗೂ ಕ್ರೋಧದಲ್ಲಿ ವೃದ್ಧಿಯಾಗಬಹುದು, ಉಷ್ಣವಲಯದಲ್ಲಿರುವ ತಾಪವನ್ನು ಉತ್ತರದ ಶೀತವಲಯದತ್ತ ಸಾಗಿಸಿ, ತಾಪಮಾನದ ತೂಕ ಕಾಯ್ದುಕೊಳ್ಳುವ ಸಾಗರದಲ್ಲಿನ ಉಷ್ಣವಾಹಕ ಪಟ್ಟಿಯು (Heat Conveyor Belt) ತುಂಡಾಗಬಹುದು. ಈ ಎಲ್ಲಾ ಬದಲಾವಣೆಗಳ ಪರಿಣಾಮ ಒಂದೇ..., ಅದು ಪ್ರಕೃತಿಯ ಪ್ರಕೋಪ ಅಥವಾ ಪ್ರಳಯ.

ವಾತಾವರಣದಲ್ಲಿ ವೃದ್ಧಿಸಿದ ಈ ಹಸಿರು-ಮನೆ ಅನಿಲಗಳಿಗೆ ಏಶಿಯಾ ಖಂಡದ ಹಿಂದುಳಿದ ದೇಶಗಳೇ ಕಾರಣವೆಂದು ಬಲಿತ ರಾಷ್ಟ್ರಗಳು ಕಾರಣವಿಲ್ಲದೇ ಬೊಬ್ಬೆ ಹೊಡೆದವು. ಆದರೆ 18ನೇ ಶತಮಾನದಿಂದ ಆರಂಭವಾದ ಈ ವಿಷಾನಿಲಗಳ ಹೆಚ್ಚಳದ ಸಂಬಂಧ ತಮ್ಮ ರಾಷ್ಟ್ರಗಳಲ್ಲಿಯೇ ಆರಂಭವಾಗಿ ನಂತರ ಆಲದ ಮರದಂತೆ ಬೆಳೆದ ಔದ್ಯೋಗಿಕರಣವೆಂದು ಅರಿತಾಗ ಬಾಯಿ ಮುಚ್ಚಿಕೊಂಡು ಕುಳಿತವು. ಈಗ ಆ ಮುಂದುವರೆದ ರಾಷ್ಟ್ರಗಳನ್ನು ದೂಷಿಸಿ ನಾವು ಸುಮ್ಮನೇ ಕುಳಿತುಕೊಳ್ಳುವ ಹಾಗಿಲ್ಲ. ಜಗತ್ತಿನ ಪ್ರತಿ ದೇಶವೂ ಒಂದಿಲ್ಲ ಒಂದು ರೀತಿಯಾಗಿ ವಾತಾವರಣದ ಪ್ರದೂಷಣೆಯಲ್ಲಿ ಭಾಗಿಯಾಗಿದೆ. ಅದನ್ನು ನಿಯಂತ್ರಿಸುವ ಕಾರ್ಯ ನಮ್ಮೆಲ್ಲರದು. ಕೆಲಮಟ್ಟದವರೆಗೆ ಮಾನವ-ಒತ್ತಡವನ್ನು ತಡೆದುಕೊಳ್ಳುವ ಶಕ್ತಿ ನಮ್ಮ ನಿಸರ್ಗಕ್ಕಿದೆ. ಆದರೆ ಚೇಷ್ಟೆ ವಿಪರೀತವಾದರೆ ಅದು ಅಂತಹ ಜೀವಿಗಳನ್ನು ಮೆಟ್ಟಿಹಾಕಲು ಹಿಂದು ಮುಂದೆ ನೋಡಲಿಕ್ಕಿಲ್ಲ. ನೆನಪಿರಲಿ..., 4500 ದಶಲಕ್ಷ ವರ್ಷದ ಇತಿಹಾಸವಿರುವ ಪೃಥ್ವಿಯ ಮೇಲೆ, ಕೇವಲ ಒಂದು ದಶಲಕ್ಷ ವರ್ಷ ಹಿಂದಷ್ಟೇ ಆಗಮಿಸಿದ ಮಾನವನಿನ್ನೂ ತೀವ್ರ ಬದಲಾದ ಪರಿಸರಕ್ಕೆ ಹೊಂದಿಕೊಳ್ಳಬೇಕಾದ (adaptability) ಸಮಸ್ಯೆಯನ್ನು ಎದುರಿಸಿಲ್ಲ. ಆದ್ದರಿಂದ ಅವನಿನ್ನೂ ಹೊಂದಿಕೊಂಡು ಬಾಳುವ ಜೀವಿ ಎನ್ನುವುದು ಸಿದ್ಧವಾಗಿಲ್ಲ. ಅಂದಮೇಲೆ, ನಮ್ಮ ಅಳಿವು-ಉಳಿವಿನ ಪ್ರಶ್ನೆಗೆ ಬುದ್ಧಿಜೀವಿಗಳಾದ ನಾವೇ ಉತ್ತರ ಹುಡುಕಬೇಕು.

ಡಾ|| ವಿರೂಪಾಕ್ಷ ಕೆ. ಬಣಕಾರ
ವಿಜ್ಞಾನಿ, ರಾಷ್ಟ್ರೀಯ ಸಾಗರ-ವಿಜ್ಞಾನ ಸಂಸ್ಥೆ
ಡೋನಾಪೌಲ, ಗೋವಾ - 403 004

*ಬಸ್ಸಿನಿಂದ ಕೆಳಗೆ ನೂಕಿಸಿಕೊಂಡ ವೀರಯ್ಯ ತೂರಾಡುತ್ತಾ ದಾರಿ ನಡೆದ.*
*ಅಲ್ಲೊಂದು ಮೂಟೆ, ಹೊರಗೆ ಕಾಣಿಸುವ ಕಾಲು.*
*ಅದೇನದು? ಅರೇ ! ಚೈನು.... ಬೆಳ್ಳಿಯದು !*



## ಶೇಷನಾರಾಯಣ

ಹೊರಳಲಾರದೆ ಒಂದು ಹೊರಳು ಹೊರಳಿ ಚಿಕ್ಕಮ್ಮ ''ಕೂಸೂ... ಕೂಸೂ...'' ಎಂದಳು.

ಹೌದು. ಮೂರು ದಿನಗಳಿಂದ ಅವಳಿಗೆ ಸೊಂಟ ಹಿಡಿದು ಬಿಟ್ಟಿದೆ. ಮೇಲಕ್ಕೇ ಏಳಲು ಆಗುತ್ತಾ ಇಲ್ಲ. ಅವಳ ಗುಡಿಸಲ ಬಳಿಯ ಎಂ. ಎಸ್. ರಾಮಯ್ಯ ಆಸ್ಪತ್ರೆಗೆ ಹೋಗಿದ್ದಳು. ಆಸ್ಪತ್ರೆಯವರು ಏನೋ ಕೆಂಪು ನೀರು ಕೊಟ್ಟಿದ್ದರು. ಕುಡಿದಿದ್ದಳು. ಗುಣ ಆಗಲಿಲ್ಲ. ''ಎಕ್ಸರೇ ತೆಗೆಯಬೇಕು'' ಎಂದಿದ್ದರು. ಎಕ್ಸ್‌ರೇ ತೆಗೆಸಲು ಹಣ ಎಲ್ಲಿದೆ ?

ತಾಯಿಯ ಕೂಗನ್ನು ಕೇಳಿ ಮಗಳು ''ಏನವ್ವಾ'' ಎಂದಳು.

''ನಾಲ್ಕೈದು ಪೊರಕೆ ಉಳಿಕೊಂಡೈತಲ್ಲ. ಮಾರಿಕೊಂಡು ಬತ್ತೀಯಾ ? ಆಗ್ತೈತಾ ? ಅಷ್ಟು ಇಷ್ಟು ಸಿಕ್ಕಿದ್ರೆ ಸಂಜೀನಾಗೆ ವಸಿ ಗಂಜೀನಾದ್ರೂ ಕಾಯಿಸ್‌ಬೌದು...''

ಒಬ್ಬಳೇ ಎಂದೂ ಮಾರಾಟಕ್ಕೆ ಹೋಗದಿದ್ದರೂ ತಾಯಿಯೊಂದಿಗೆ ಅವಳೂ ಪೊರಕೆಗಳನ್ನು ಭುಜದ ಮೇಲೆ ಹಾಕಿ ಬೀದಿ ಬೀದಿ ಸುತ್ತಿದ್ದಾಳಷ್ಟೆ. ಆ ಅನುಭವ. ಈಗ ಮಂಗಳಿ-ಮಂಗಳಾ– ''ಊ, ಮಾರಿಕಂಬತ್ತೀನಿ, ಎಷ್ಟು ಹೇಳ್ಲಿ ?'' ಎಂದಳು.

''ಐದು ರೂಪಾಯಿ ಹೇಳು.''

''ನಾಕು ರೂಪಾಯಿಗೆ ಕೇಳಿದ್ರೆ ?''

''ಕೊಟ್ಬುಡು.''

''ಮೂರು ರೂಪಾಯಿಗೆ ಕೇಳಿದ್ರೆ ?''

''ಉಂ.... ಊ.... ಕೊಟ್ಬುಡು.''

''ಎರಡು ರೂಪಾಯ್ಗೆ ಚೌಕಾಸಿ ಮಾಡಿದ್ರೆ ?''

''ಎರಡು ರೂಪಾಯಿಗೆ ಪೊರಕೆ ಸಿಗುವುದಿಲ್ಲ. ಅಸಲೇ ಅದಕ್ಕೆ ಮೂರೂ ಕಾಲು ಬೀಳುತ್ತದೆ.'' ಆದರೆ ತಮಗೆ ಈಗ ತುಂಬಾ ತಾಪತ್ರಯ. ಹೊಟ್ಟೆಗೇ ಇಲ್ಲ, ಏನು ಮಾಡುವುದು ? ಏನೋ ಯೋಚಿಸಿ ಚಿಕ್ಕಮ್ಮ ''ಅತ್ಲಾಗೆ ಕೊಟ್ಬುಡು'' ಎಂದಳು.

ಮಂಗಳಿ ನಾಲ್ಕು ಪೊರಕೆಗಳನ್ನು ಹಿಡಿದು ಗುಡಿಸಲಿನಿಂದ ಹೊರಬಿದ್ದಳು. ಆಗ ಗಂಟೆ ಮಧ್ಯಾಹ್ನ ಒಂದೂವರೆ.

ಪ್ರತಿ ಭಾನುವಾರ ಸೇರುವ ಯಶವಂತಪುರದ ಸಂತೆಯಿಂದ ಅಷ್ಟು ಕಡ್ಡಿ ಪೊರಕೆಗಳನ್ನು ತಂದು ''ಪೊರಕೆ ಬೇಕೇನ್ರವ್ವಾ... ಪೊರಕೇ...'' ಎಂದು ಬೀದಿ ಬೀದಿ ಸುತ್ತಿ ಚಿಕ್ಕಮ್ಮ ಮಾರಾಟ ಮಾಡುತ್ತಾಳೆ. ಈ ಮಾರಾಟದಿಂದ ಬಂದ ಹಣದಿಂದ ಅವಳಿಗೆ ಹೊಟ್ಟೆ ತುಂಬುವುದಿಲ್ಲ– ನಿಜ. ಆದರೆ ಗಂಜಿ ಕಾಯಿಸುವುದಕ್ಕಾದರೂ ಅಷ್ಟು ಇಷ್ಟು ಪುಡಿಗಾಸು ಸಿಗುತ್ತದೆ.

ತಾಯಿಯೊಂದಿಗೆ ಮಗಳು ಮಂಗಳಿಯೂ ಆಗಾಗ್ಗೆ ಬೀದಿ ಬೀದಿಗಳಿಗೆ ಹೋಗುವುದು ಉಂಟು. ತಾಯಿಯಿಂದ ವ್ಯಾಪಾರವಾದರೂ ಅವಳ ಹಿಂದೆ ಇವಳು. ಬಾಲದಂತೆ. ತಂದ ಕಡ್ಡಿ ಪೊರಕೆಗಳು ಎಲ್ಲವೂ ಮಾರಾಟವಾದರೆ ಮತ್ತೆ ಅವುಗಳನ್ನು ಕೊಳ್ಳಲು ಅಸಲು ಉಳಿಸಿಕೊಳ್ಳಬೇಕು. ಲಾಭ ಬಂದದ್ದು ತಮ್ಮ ಜೀವನಕ್ಕೆ. ಎರಡು ವರುಷಗಳಿಂದ ಇದೇ ಬಾಳು; ಕಥೆ.

ಹಳ್ಳಿಯಲ್ಲಿ ತಮಗೆ ಹೊಲವಿಲ್ಲ, ಗದ್ದೆಯಿಲ್ಲ, ಕೂಲಿ ಪಾಲಿ ಸದಾ ಗೋಳು. ದಾರಿದ್ರ್ಯ ಎಂದು ಮಾದಯ್ಯನ ಶಿಫಾರ್ಸಿನ ಮೇರೆಗೆ ಗಂಡನೂ ಹೆಂಡತಿಯೂ ಬೆಂಗಳೂರಿನ ಒಂದು ಗುಡಿಸಲಿಗೆ ಬಂದು ಸೇರಿಕೊಂಡು ಹನ್ನೆರಡು ವರ್ಷಗಳು ದಾಟಿವೆ. ಈ ಗಬ್ಬುನಾತದ ಗುಡಿಸಲಿನಲ್ಲಿಯೇ ಮಂಗಳಿ ಹುಟ್ಟಿದ್ದು. ಈಗ ಅವಳಿಗೆ ಒಂಬತ್ತು ತುಂಬಿ ಹತ್ತು ನಡೆಯುತ್ತಿದೆ

ಮಾದಯ್ಯ ಚಿಕ್ಕಮ್ಮನಿಗೆ ಅಣ್ಣ ಆಗಬೇಕು. ದಾಯಾದಿ ರೀತಿ. ಅವನು ಇವರಿಗೂ ಮೊದಲೇ ಬೆಂಗಳೂರು ಬಂದು ಸೇರಿರುವನು. ಅವನಿಗೆ ಗಾರೆ ಕೆಲಸ. ವೀರಯ್ಯನೂ ಬೆಂಗಳೂರಿಗೆ ಬಂದ ಮೇಲೆ ಗಾರೆ ಕೆಲಸ ಕಲಿತ.

ಏನೋ ಗಂಜಿಗೆ ದಾರಿ ಆಯಿತು. ತಮ್ಮ ಬಾಳು ಒಂದು ವಿಧವಾಗಿ ದಡ ಸೇರುತ್ತ ಇದೆ ಎನ್ನುವಾಗ, ವೀರಯ್ಯ ಹೆಂಡದಂಗಡಿಗೆ ಹೋಗಲು ಕಲಿತ. ಅವನು ಹೆಂಡದಂಗಡಿಗೆ ಹೋಗಲು ಮಾದಯ್ಯನೇ ಕಾರಣ.

ಹೌದು. ಮೊದಲನೆಯ ಹೆಂಡತಿ ತೀರಿಕೊಂಡಳು ಎಂದು, ಎರಡನೆಯವಳು ಪರಮೇಶ್ವರಿಯನ್ನು ಮಾಡಿಕೊಂಡ ಮೇಲೆ ಒಂದು ದಿನ ಈ ಪರಮೇಶ್ವರಿ ಈ ಚಿನಾಲಿ ಈ ಹಲ್‌ಕಟ್ ರಂಡೆ, ಹೇಳದೆ ಕೇಳದೆ ಆಟೋ ಗೋವಿಂದನೊಂದಿಗೆ ಓಡಿಬಿಟ್ಟಳು. ಗೋವಿಂದನಿಗೂ ಅವಳಿಗೂ ಮೊದಲಿನಿಂದಲೂ ಗೆಳೆತನವಂತೆ.

ಈ ವ್ಯಥೆಯಲ್ಲಿ ಮಾದಯ್ಯ ಕುಡಿಯುವುದನ್ನು ಕಲಿತ. ''ಬಾರ್ಲಾ.. ಯಾನೂ ಆಗಾಕಿಲ್ಲ...'' ಎಂದು ಮೈದುನ ವೀರಯ್ಯನನ್ನೂ ಕರೆದುಕೊಂಡು ಹೋದ; ಚಟ ಹಿಡಿಸಿದ.

ವೀರಯ್ಯ ಈಗ ಮೇಲೂ ಮುಂದುವರೆದ. ದೊಡ್ಡ ಬೊಮ್ಮಸಂದ್ರದಲ್ಲಿರುವ ಹೂವಿನ ಸರೋಜಳೊಂದಿಗೆ ಸ್ನೇಹ ಬೆಳೆಸಿದ. ಆಕೆ ಭಾರೀ ಹೊಂಡ, ಹಲಸಿನ ಅಂಟು. ಅವಳ ಸಾವಾಸ ಮಾಡಿದವರು ಯಾರು ಉದ್ದಾರ ಆಗವ್ರೆ ಎಂದು ಅವರು ಇವರು ಮಾತಾಡಿಕೊಂಡರು. ಗಾರೆ ಕೆಲಸದಲ್ಲಿ ದುಡಿದದ್ದು ಎಲ್ಲವನ್ನೂ ವೀರಯ್ಯ ಹೆಂಡ-ಸರೋಜಾ ಹೀಗೆ ಖರ್ಚುಮಾಡಿ ಚಿಕ್ಕಮ್ಮನನ್ನು ಈಗ ಗೋಳು ಹುಯ್ಯಿಸಿಕೊಳ್ಳುತ್ತ ಇದ್ದಾನೆ

ಚಿಕ್ಕಮ್ಮನೂ ಗಾರೆ ಕೆಲಸ ಮಾಡುತ್ತ ಇದ್ದಳು. ಎರಡು ವರ್ಷಗಳ ಹಿಂದೆ ಆಕೆ ಕಾಯಿಲೆ ಬಿದ್ದು ''ಇನ್ನು ಮುಂದೆ ನೀನು ಸಿಮೆಂಟ್ ಮುಟ್ಟಕೂಡದು. ಅಲರ್ಜಿಯಾಗುತ್ತೆ'' ಎಂದು ಡಾಕ್ಟರ್ ಹೇಳಿದ ಮೇಲೆ, ಆಕೆ ಪೊರಕೆ ವ್ಯಾಪಾರಕ್ಕೆ ಇಳಿದಿದ್ದಾಳೆ.

ಹೀಗೆ ಚಟಗಳಿಗೆ ವೀರಯ್ಯ ದಾಸನಾದರೂ ತನ್ನ ಗುಡಿಸಲಿಗೂ ಆತ ಬಂದೇ ಬರುತ್ತಿದ್ದ. ಕಾರಣ ಮಗಳು ಮಂಗಳಿಗಾಗಿ. ಮಕ್ಕಳನ್ನು ಆತ ತುಂಬಾ ಪ್ರೀತಿಸುತ್ತಿದ್ದ. ಹೆಚ್ಚು ಕಡಿಮೆ ಹೆಂಡತಿಯೊಂದಿಗೆ ಮಾತನ್ನೇ ಬಿಟ್ಟಿದ್ದ. ಆತ ಮಂಗಳಿಯ ಕೈಗೆ ಅಷ್ಟು ರೂಪಾಯಿಗಳನ್ನು ಹಾಕಿ ಹೋಗುತ್ತಿದ್ದ. ಮೂರು ದಿನಗಳ ಹಿಂದೆಯೂ ಹೀಗೆ ಆತ ಬಂದಿದ್ದವನು, ಅವನಿಗೂ ಚಿಕ್ಕಮ್ಮನಿಗೂ ಏನೋ ಮಾತು ಬೆಳೆದು ಸಿಟ್ಟಿನಿಂದ ಹೊರನಡೆದಿದ್ದ.

ಅವೊತ್ತಿನಿಂದಲೇ ಚಿಕ್ಕಮ್ಮನಿಗೆ ಪೂರಾ ಸೊಂಟ ಹಿಡಿದುಬಿಟ್ಟಿದೆ. ಮೇಲೆ ಏಳುವುದಕ್ಕೆ ಆಗುತ್ತಾ ಇಲ್ಲ. ನಿನ್ನೆ ಗಂಜಿಗೂ ಗತಿ ಇಲ್ಲದೆ ಅಕ್ಕಪಕ್ಕದ ಗುಡಿಸಲಿನವರು ಅಷ್ಟು ರಾಗಿ ಹಿಟ್ಟು ಕೊಟ್ಟಿದ್ದರು. ಮಾದಯ್ಯನೂ ಊರಿನಲ್ಲಿ ಇಲ್ಲ. ಹಳ್ಳಿಗೆ ಹೋಗಿದ್ದಾನೆ. ಅವನು ಇದ್ದಿದ್ದರೆ ಪರಿಸ್ಥಿತಿಯನ್ನು ನಿಭಾಯಿಸಬಹುದಿತ್ತು. ಮಂಗಳಿಯನ್ನು ಕಂಡರೆ ಅವನಿಗೂ ಪ್ರಾಣ. ಹಾಗೆಂದೇ ಚಿಕ್ಕಮ್ಮ ಈಗ ಮಗಳನ್ನು ಪೊರಕೆ ಮಾರಾಟ ಮಾಡಿಬರಲು ಕಳಿಸಿದ್ದು.

ಸಂಜೆ ನಾಲ್ಕು, ಐದು, ಆರಾಯಿತು. ಪೊರಕೆಗಳನ್ನು ಮಾರಲು ಹೋದ ಮಂಗಳಿ ಹಿಂದಿರುಗಲಿಲ್ಲ. 'ಕೂಸು ಎಲ್ಲಿ ಒಂಟೋಯ್ತು ? ಹತ್ರ ಹ್ವಾಗಾದು ಬಿಟ್ಟು ದೂರ ಓಗೈತೇನೋ ? ಪೊರಕೆ ಮಾರ್ಲಿಲ್ವೋ ಏನೋ ?' ಎಂದು ಗೊಣಗಿಕೊಂಡು ಚಿಕ್ಕಮ್ಮ ಹೊರಳಾಡಿದಳು.

ಈಗ ಗಂಟೆ ಏಳು, ಎಂಟೂ ಆಗಿಹೋಯಿತು. ಮಂಗಳಿ ಬರಲಿಲ್ಲ. ದೇವಸಂದ್ರದ ಬಸ್‌ಸ್ಟಾಪಿನ ಹೆಂಡದಂಗಡಿಯ ಹಿಂದೆ ಒಂದು ಕೊಳಕು ಚರಂಡಿಯ ಗಬ್ಬುನಾತದ ಬಳಿ ಆರೆಂಟು ಗುಡಿಸಲುಗಳು. ಅವುಗಳ ಒಂದರಲ್ಲಿ ಚಿಕ್ಕಮ್ಮನ ವಾಸ

ಈ ಕಡೆ ಪ್ರತಿಷ್ಠಿತ ಡಾಲರ್ ಕಾಲೋನಿ, ಇಸ್ರೋ ಕಾರ್ಯಾಲಯ, ಸಿಪಿಆರ್‌ಐ, ಎಂ. ಎಸ್. ರಾಮಯ್ಯ ಇಂಜಿನಿಯರಿಂಗ್, ಮೆಡಿಕಲ್ ಕಾಲೇಜುಗಳು, ಆಸ್ಪತ್ರೆಗಳು. ಇನ್ನೂ ಈ ಕಡೆ ಭಾರತೀಯ ವಿಜ್ಞಾನ ಸಂಸ್ಥೆ- ಹೀಗೆಲ್ಲಾಕಡೆ ಬೆಳಕು ಥಳಾಗಿದ್ದರೂ ಈ ಗುಡಿಸಲುಗಳಿಗೆ ವಿದ್ಯುತ್ತು ಇಲ್ಲ. ಹಳೆಯ ಕಾಲದ ಬುಡ್ಡೀ ದೀಪಗಳೇ ದಿಕ್ಕು. ರಸ್ತೆಯ ದೀಪಗಳಿಂದ ಮುಂದಿನ ಸಾಲಿನ ಗುಡಿಸಲುಗಳಿಗೆ ಮಾತ್ರ ಬೆಳಕಿನ ಅವಕಾಶ.

ರಾತ್ರಿ ಗಂಟೆ ಎಂಟಾದರೂ ಮಂಗಳಿ ಬಾರದಿರಲು ಚಿಕ್ಕಮ್ಮ ನಡುಗಿಹೋದಳು. ಎಷ್ಟೇ ದೂರ ಮಾರಾಟಕ್ಕೆ ಎಂದು ಹೋಗಿದ್ದರೂ ಈ ವೇಳೆಗೆ ಮಗಳು ಹಿಂದಿರುಗಬೇಕಿತ್ತಲ್ಲ. ಎಲ್ಲಿ ಹೋಯಿತು ನನ್ನ ಕೂಸು ? ಕೂಸು ಎಲ್ಲಿ ಓಗೈತವ್ವಾ ?

ಆಕೆ ಭಯದಿಂದ ಬೊಬ್ಬೆ ಹಾಕಿದಳು. ಅಕ್ಕಪಕ್ಕದ ಗುಡಿಸಲಿನವರು ಬಂದು ಗುಂಪು ಗೂಡಿದರು. ತಲೆಗೆ ಒಂದೊಂದು ಮಾತು. ಒಂದು ಗುಡಿಸಲಿನ ಒಬ್ಬ ಹುಡುಗ, ಒಂದು ದಿನ, ಚಿಕ್ಕಮ್ಮನೊಂದಿಗೆ ಮಾದಯ್ಯನ ಗುಡಿಸಲಿಗೆ ಹೋಗಿದ್ದಾನೆ. ಈಗ ಇವಳು ಚೀರಿಕೊಂಡದ್ದರಿಂದ, ಯಾರದೋ ಸೈಕಲ್ ತೆಗೆದುಕೊಂಡು, ಮಾದಯ್ಯ ಇದ್ದಾನೇನೋ ನೋಡಿ ಬರುತ್ತೇನೆ ಎಂದು ಹೊರಟ.

ಮಾದಯ್ಯನ ಗುಡಿಸಲು ಯಶವಂತಪುರದ ರೈಲ್ವೆ ಹಳಿಗಳ ಬಳಿ ಇದೆ. ಇಲ್ಲ ಅವನು ಹಳ್ಳಿಯಿಂದ ಇನ್ನೂ ಹಿಂದಿರುಗಿ ಬಂದಿಲ್ಲ. ಈಗ ಏನು ಮಾಡುವುದು ? ಇನ್ನು ಪೋಲೀಸರಿಗೆ

ದೂರು ಕೊಡಬೇಕು. ಯಾರು ಕೊಡುವವರು ? ಗಂಟೆ ಈಗ ಹನ್ನೊಂದು ಆಗಿಹೋಗಿದೆ.

ಚಿಕ್ಕಮ್ಮ ಹೊರಳಲಾರದೆ ಹೊರಳಿದಳು. ನರಳಲಾರದೆ ನರಳಿದಳು. ''ಕೂಸೂ... ಕೂಸೂ...'' ಎಂದು ಒಂದೇ ಸಮನೆ ಬಿಕ್ಕತೊಡಗಿದಳು.

-2-

''ಪೊರಕೆ ಬೇಕೇನ್ರವ್ವಾ... ಪೊರಕೇ....'' ಎಂದು ತನ್ನದೇ ಸಣ್ಣ ದನಿಯಲ್ಲಿ ಕೂಗಿಕೊಂಡು ಒಂದು ಬೀದಿಗೆ ಮಂಗಳಿ ಪ್ರವೇಶಿಸಿದಳು. ಆಗ ಗಂಟೆ ಎರಡು.

ಆ ಬೀದಿ ಸಣ್ಣದೇ. ಆದರೆ ಎಲ್ಲವೂ ಮಹಡಿ ಮನೆಗಳು. ಎರಡು ಮೂರು ಅಂತಸ್ತಿನವು. ಎದುರು ಬದಿರು ಸಾಲಿನಲ್ಲಿ ಹತ್ತು ಹದಿನೈದು ಮನೆಗಳು. ಪಶ್ಚಿಮಕ್ಕೆ ಒಂದು ಅಡ್ಡ ಹಾದಿ. ಅದು ದಕ್ಷಿಣಕ್ಕೆ ಹಾದು ಮುಖ್ಯ ರಸ್ತೆಯೊಂದಿಗೆ ಸೇರಿಕೊಳ್ಳುತ್ತದೆ. ಅಲ್ಲಿ ಉದ್ದಕ್ಕೆ ಚರಂಡಿ. ಚರಂಡಿಯ ಆ ಬದಿ ಈ ಬದಿ ಗುಡಿಸಲುಗಳು. ಗಂಟೆ ಎರಡು ಆದ್ದರಿಂದ ಕೆಲಸಕ್ಕೆ ಹೋಗುವವರು, ಶಾಲೆಗೆ ಹೋಗುವ ಮಕ್ಕಳು – ಹೀಗೆ ಎಲ್ಲ ಮನೆಗಳೂ ಸರಿ ಸುಮಾರು ಖಾಲಿಯಾಗಿ ಆ ಬೀದಿ ಮೌನವನ್ನು ಹೊತ್ತು ನಿಂತಿದೆ.

ಒಂದು ಮನೆ. ಎಂ. ಬಸವರಾಜು, ಬಿ. ಎ. ಎಂದು ಒಂದು ಬೋರ್ಡು ಇದೆ. ಎರಡಂತಸ್ತಿನ ಮನೆ.

ಬಸವರಾಜು ಒಂದು ಗಾರ್ಮೆಂಟ್ ಫ್ಯಾಕ್ಟರಿ ನಡೆಸುತ್ತ ಇದ್ದಾನೆ. ನಾಲ್ವತ್ತು ಜನ ಕೆಲಸಗಾರರು ಇದ್ದಾರೆ. ಕೆಳಗಿನ ಮನೆ ಬಾಡಿಗೆಗೆ ಕೊಟ್ಟಿದ್ದಾನೆ. ಮೇಲೆ ಆತನ ಸಂಸಾರ ಇದೆ. ಸಂಸಾರ ಎಂದರೆ ಎಂಟು ವರ್ಷದ ಮಗಳು, ಆರು ವರ್ಷದ ಮಗ. ಅವೂ ಈಗ ಶಾಲೆಗೆ ಹೋಗಿವೆ.

ಈಗ ಒಂದು ಸಂಭವ. ಮಂಗಳಿ ''ಪೊರಕೇ... ಪೊರಕೇ....'' ಎಂದು ಕೂಗಿಕೊಂಡು ಈ ಮನೆಯ ಮುಂದೆ ಬಂದಾಗ, ಮನೆಯೊಡತಿ ಸರ್ವಮಂಗಳಾ ಮೇಲೆ ಕಾರಿಡಾರಿನಲ್ಲಿ ನಿಂತು, ಈ ಹುಡುಗಿಯನ್ನೇ ದಿಟ್ಟಿಸಿದಳು. ಅವಳ ಹುಬ್ಬುಗಳು ವಕ್ರವಾದವು. ಕಣ್ಣುಗಳು ಹಾಗೆ ಹೀಗೆ ಚಲಿಸಿದವು. ಸಿಟ್ಟಿನಿಂದಲೇ ಆಕೆ ''ಬಾರೇ ಇಲ್ಲಿ... ಲೇ... ಬಾರೇ...'' ಎಂದು ಕೂಗಿಕೊಂಡಳು. ಪೊರಕೆಯನ್ನು ಕೊಳ್ಳಲೆಂದೇ ಈ ಮನೆಯೊಡತಿ ಕೂಗುತ್ತ ಇದ್ದಾಳೆಂದು ಭಾವಿಸಿದ ಮಂಗಳಿ ಗೇಟನ್ನು ತೆರೆದು, ಮುಚ್ಚಿ ಮೇಲೆ ಹೋದಳು.

''ಕಳ್ಳೀ, ನನ್ನ ಬ್ಲೌಸ್ ಎಲ್ಲಿ, ನೀನೇ ತಾನೆ ಕದ್ದುಕೊಂಡು ಹೋಗಿರೋದು ?'' ಎಂದು ಆಕೆ ಗದರಿಸಿ ಕೇಳಿದಳು.

ಏನೂ ಅರ್ಥವಾಗದೆ ಮಂಗಳಿ ಪಿಳಿಪಿಳಿ ಕಣ್ಣು ಹೊರಳಿಸಿದಳು.

''ನಿಜ ಹೇಳು. ಇಲ್ಲದಿದ್ರೆ ನಿನ್ನನ್ನ ಪೋಲೀಸಿಗೆ ಹಿಡಿದು ಕೊಡ್ತೀನಿ.''

ಪೋಲೀಸು ಎಂದೊಡನೆ ಬೆಚ್ಚಿದ ಮಂಗಳಿ ''ಏನವ್ವಾ, ನೀವು ಹೇಳಾದು ?'' ಎಂದು ತೊದಲಿ ತೊದಲಿ ಕೇಳಿದಳು.

''ಆಹಾ, ಆಹಾ ಮಳ್ಳೀ... ನನ್ನ ಬ್ಲೌಸ್ ಎಲ್ಲಿ? ನೀನೇ ತಾನೆ ಕದ್ದುಕೊಂಡು ಹೋಗಿರೋದು... ಏನೂ ಗೊತ್ತಿಲ್ಲದ ಹಾಗೆ ನನ್ನನ್ನೇ ಕೇಳ್ತೀಯಲ್ಲೇ ?''

ಮೂರು ದಿನಗಳ ಹಿಂದೆ ಸರ್ವಮಂಗಳಾ ಆರು ಬ್ಲೌಸ್‌ಗಳನ್ನು ಒಗೆದು, ಕ್ಲಿಪ್ ಸಿಕ್ಕಿಸಿ, ಮೇಲು ಮಹಡಿಯಲ್ಲಿ ತಂತಿಯ ಮೇಲೆ ಆರಹಾಕಿದ್ದಳು. ಅದರಲ್ಲಿ ಎರಡು ರೇಷ್ಮೆ ಬ್ಲೌಸ್‌ಗಳೂ ಇದ್ದವು. ಎಲ್ಲ ಸೇರಿ ಬೆಲೆ ಐನೂರು ರೂಪಾಯಿಗಳ ಮೇಲೆಯೇ ಆಗುತ್ತದೆ.

ಸಂಜೆ ನಾಲ್ಕು ಗಂಟೆಗೆ ಹೋಗಿ ನೋಡಿದರೆ ಒಂದೂ ಬ್ಲೌಸ್ ಇಲ್ಲ. ತಂತಿಯ ಮೇಲೆ ಬರೀ ಕ್ಲಿಪ್ಪುಗಳು ನೇತಾಡಿಕೊಂಡಿವೆ.

ಮೂರನೆಯ ಮನೆಯ ಮೀನಾಕ್ಷಿ ''ಒಂದು ಹುಡುಗಿ ಏನೋ ಕಂಕುಳಲ್ಲಿ ತುರುಕಿಕೊಂಡು ಈ ಕಡೆ ಓಡಿ ಹೋಯ್ತೂರಿ...'' ಎಂದಳು. ಇನ್ನೊಬ್ಬಳು ''ನಮ್ಮ ಮನೆಯಲ್ಲಿ ಚಪ್ಪಲಿಗಳೂ ಕಳುವಾಗಿವೆ'' ಎಂದಳು. ಒಬ್ಬರು ಮುದುಕರು ''ಇಲ್ಲಿ ಹಾಳು ಗುಡಿಸಲುಗಳಿವೆ ನೋಡಿ, ಎಲ್ಲಾ ಅವರದ್ದೇ ಕೆಲಸ'' ಎಂದು ತೀರ್ಮಾನವಾಗಿ ಹೇಳಿದರು.

ಈಗ ಈ ಹುಡುಗಿಯದೇ ಕೆಲಸ, ಇವಳೇ ಕದ್ದಿರುವವಳು ಎಂದು ತೀರ್ಮಾನಿಸಿದ ಸರ್ವಮಂಗಳಾ ''ನಿಜ ಹೇಳೇ...'' ಎಂದು ಗದರಿಸಿಕೊಳ್ಳುತ್ತಲಿದ್ದಾಗ, ಮಧ್ಯಾಹ್ನದ ಊಟಕ್ಕೆ ಎಂದು ಕಾರನ್ನು ಮನೆಯ ಮುಂದೆ ನಿಲ್ಲಿಸಿ ಢಗ್ ಎಂದು ಬಾಗಿಲು ಹಾಕಿ ಬಸವರಾಜು ಧಡಧಡನೆ ಮೇಲೆ ಬಂದ.

ಮಹಡಿಯ ಮೆಟ್ಟಲುಗಳನ್ನು ಹತ್ತುತ್ತ ಇದ್ದಾಗಲೇ ಪತ್ನಿಯ ಮಾತುಗಳನ್ನೂ, ಕೂಗನ್ನೂ ಕೇಳಿಸಿಕೊಂಡ ಬಸವರಾಜು ''ಲೇಯ್ ದರಿದ್ರವೇ... ಜಾಡಿಸಿ ಒದ್ದುಬಿಡ್ತೀನಿ ನೋಡು. ಬ್ಲೌಸ್ ಎಲ್ಲಾ ಮನೇಲಿ ಇಟ್ಟಿದ್ದೀಯೋ, ಮಾರವಾಡಿ ಅಂಗಡೀಗೆ ತೆಗೆದುಕೊಂಡು ಹೋಗಿ ಕೊಟ್ಟಿದ್ದೀರೋ ? ನಿಜ ಬೊಗಳು...'' ಎಂದು ಕೆಂಗಣ್ಣು ಬಿಟ್ಟು ಅರ್ಭಟಿಸಿದ.



ಏನೂ ತಿಳಿಯದ ಮಂಗಳಿ ತೊದಲುತ್ತ ಬೆಬ್ಬೆಬ್ಬೆ ಎಂದಳು.

ಮರುಕ್ಷಣದಲ್ಲಿ ''ನಿಜ ಹೇಳ್ತೀಯೋ ಇಲ್ವೋ ?'' ಎನ್ನುತ್ತ ಬಸವರಾಜು ಒಂದೇಟು ಅವಳ ಕೆನ್ನೆಗೆ ಫಳಾರನೆ ಚಾಚಿದ.

ಮೆಟ್ಟಿಲ ತುದಿಯಲ್ಲಿ ನಿಂತಿದ್ದ ಮಂಗಳಿ ಧಡಧಡನೆ ಕೆಳಗುರುಳಿದಳು. ಐದು ಆರು ಹಂತಗಳು ಉರುಳಿ ಉರುಳಿ ಸುರುಟಿ ಬಿದ್ದಳು. ತಲೆ ಒಡೆದು ರಕ್ತ ಚಿಮ್ಮಿತು. ಮೂಗಿನಿಂದಲೂ ಬಾಯಿಂದಲೂ ರಕ್ತ, ಬಲವಾಗಿ ಬಿದ್ದ ಏಟಿನಿಂದ ಕೆನ್ನೆ ಇಷ್ಟು ದಪ್ಪ ಬಾಸುಂಡೆ. ಕೆನ್ನೆಯ ಮೇಲೂ ಬಾಸುಂಡೆಯ ಮೇಲೂ ರಕ್ತ ಹರಿದಿದೆ. ಗದರಿಸಿಕೊಂಡಾಗಲೇ ಹೆದರಿಕೊಂಡ ಮಂಗಳಿ ಲಂಗದಲ್ಲೇ ಮೂತ್ರ ವಿಸರ್ಜನೆ ಮಾಡಿಕೊಂಡಿದ್ದಾಳೆ. ಈಗ ಕತ್ತು ಮುರಿದ ಕೋಳಿಯಂತೆ ಸುರುಟಿಕೊಂಡ ಅವಳಿಗೆ ನೆನಪೂ ತಪ್ಪಿಹೋಗಿದೆ.

ಅವಳು ಯಾವಾಗ ನೆನಪು ತಪ್ಪಿ ಒರಗಿದಳೋ ಸರ್ವಮಂಗಳ ನಡುಗಿಹೋದಳು. ಬಸವರಾಜುವಿಗೂ ಹೆದರಿಕೆ. ಸದ್ಯ ಇವಳಿಗೆ ಹೊಡೆದದ್ದು, ಅವಳು ಕೆಳಗೆ ಉರುಳಿದ್ದು ಯಾರೂ ನೋಡಿಲ್ಲ. ಮಹಡಿಯ ಮೇಲೆ ಈ ಸಂಭವ ನಡೆದಿದೆ.

ಒಡನೆ ಸರ್ವಮಂಗಳಾ ಒಂದು ಚೆಂಬು ನೀರನ್ನು ತಂದು ಹುಡುಗಿಯ ತಲೆಯ ಮೇಲೆ ಚಿಮುಕಿಸಿ ತಟ್ಟಿದಳು. ರಕ್ತ ಈ ಹಂತ ಆ ಹಂತ ಹೀಗೆ ಉದ್ದಕ್ಕೂ ತೊಟ್ಟಿಕ್ಕಿದೆ. ಆ ಜಾಗ ನೋಡಲು ಭಯಂಕರವಾಗಿದೆ.

ಉಹೂಂ, ತಲೆಗೆ ನೀರು ಚಿಮುಕಿಸಿದರೂ ಹುಡುಗಿಗೆ ಜ್ಞಾನ ಬರಲಿಲ್ಲ. ಸತ್ತೇ ಹೋಯಿತೋ ? ಮುಂಡೇದೇ, ಗ್ರಹಚಾರವೇ.

ತಕ್ಷಣ ಬಸವರಾಜು ಅವಳನ್ನು ಎತ್ತಿಕೊಂಡು ಮನೆಯೊಳಗೆ ಹಾಲಿನಲ್ಲಿ ತಂದು ಹಾಕಿದ. ಈಗಲೂ ರಕ್ತ ತೊಟ್ಟಿಕ್ಕುತ್ತಲೇ ಇದೆ. ಹುಡುಗಿ ಕಣ್ತೆರೆಯಲಿಲ್ಲ.

ಸರ್ವಮಂಗಳ ನಡುಗುತ್ತಾ ''ಏನ್ರೀ... ಏನ್ರೀ ಮಾಡೋದು ? ಕಾರಲ್ಲಿ ಎತ್ತಿಹಾಕಿ ಯಾವುದಾದರೂ ಷಾಪಿಗೆ ಕರಕೊಂಡು ಹೋಗೋಣವೇ ?'' ಎಂದು ಪಿಸಪಿಸನೆ ನುಡಿದಳು.

''ಏಯ್ ಪೆದ್ದೇ, ನಾವೇ ರಂಪ ಮಾಡೋದೇನೇ ? ಈಗಾಗ್ಲೇ ಏನಾದ್ರೂ ಹೆಚ್ಚು ಕಡಿಮೆ ಆಗಿದ್ರೆ, ನಮ್ಮ ತಲೆಗೇ

ಬರುತ್ತೆ. ಸದ್ಯ ಹೀಗಾಗಿದ್ದನ್ನ ಯಾರೂ ನೋಡಲಿಲ್ಲವಲ್ಲ...'' ಎಂದು ಆತ ಹಾಗೆ ಹೀಗೆ ಕಣ್ಣಾಡಿಸಿದ.

ಮರುಕ್ಷಣದಲ್ಲಿ ಅವನ ತಲೆಯೊಳಗೆ ಅದು ಯಾವ ಭೂತ ಹೊಕ್ಕಿತೋ ? ಇಂಥ ಕ್ರೂರ ಬುದ್ಧಿ ಬಂತೋ ? ಮಾನವತ್ವ ಹೋಗಿ ಮೃಗತ್ವ ಹೆಡೆಯಾಡಿತೋ ? ಅವಡುಗಚ್ಚಿತೋ ? ಒಡನೆ ಹಾರಿದವನೇ ಆತ ಹುಡುಗಿಯ ಕೊರಳಿಗೆ ಕೈಹಾಕಿ ತನ್ನ ಅಷ್ಟೂ ಬಲದಿಂದ ಹತ್ತು ಬೆರಳುಗಳಿಂದಲೂ ಬಲವಾಗಿ ಅಮುಕಿದ. ಸರ್ವಮಂಗಳಾ ಹಾಹಾಹಾ ಎನ್ನುವಷ್ಟರಲ್ಲಿ ಒಂದು ಸಲ ಆ ಹುಡುಗಿ ಕಿಂಯ್ ಎಂದ ಹಾಗಾಯಿತು. ಮರುಕ್ಷಣ ತಲೆ ಅತ್ತ ವಾಲಿತು.

ಈಗಷ್ಟೇ ಬಸವರಾಜುವೂ ನಡುಗಿಹೋದ. ಅವನೊಳಗೆ ಹುದುಗಿದ್ದ ಭೂತವೂ ಅವನನ್ನು ಬಿಟ್ಟು ಹೊರಟುಹೋಗಿತ್ತು. ಸ್ನಾನ ಮಾಡಿದಂತೆ ಅವನ ಮೈಕೈಯೆಲ್ಲ ಒದ್ದೆ. ಹಣೆಯ ಮೇಲಿಂದಲೂ ಬೆವರ ಬಿಂದುಗಳು. ಕೈಗಳಿಗೂ ನಡುಕ. ಕೈಗಳು ಏನು ? ದೇಹ ಪೂರಾ ನಡುಕ.

ಇನ್ನು ವಿಳಂಬ ಮಾಡುವ ಹಾಗಿಲ್ಲ. ಒಡೆದಿದ್ದ, ರಕ್ತ ಸುರಿಯುತ್ತಿದ್ದ ಅವಳ ಹಣೆಗೆ ಆತ ಸರಸರನೆ ಮೂರು ಮೂರು ಸುತ್ತು ಬಟ್ಟೆ ಸುತ್ತಿದ. ಅನಾಮತ್ತಾಗಿ ಅವಳನ್ನು ಎತ್ತಿಕೊಂಡು ಬಚ್ಚಲುಮನೆಯ ಪಕ್ಕದಲ್ಲಿ ಸಾಮಗ್ರಿಗಳನ್ನು ಪೇರಿಸಿರುವ ಚಿಕ್ಕ ಕೊಠಡಿಗೆ ಎತ್ತಿಹಾಕಿದ. ಆ ಕೊಠಡಿಗೆ ಬೀಗ ಹಾಕಿಬಿಟ್ಟ. ಗಂಡ ಹೆಂಡತಿ ಇಬ್ಬರೂ ಸೇರಿ ಹಾಲಿನಲ್ಲಿ ಇವಳನ್ನು ಮಲಗಿಸಿದ್ದ ಜಾಗ, ಮೆಟ್ಟಿಲಲ್ಲಿ ಬಿದ್ದ ಜಾಗ– ಹೀಗೆ ಎಲ್ಲ ಕಡೆ ಎರಡು ಎರಡು ಸಲ ಶುದ್ಧವಾಗಿ ಒರೆಸಿದರು. ಕೆಂಪು ನೀರನ್ನು ಬಚ್ಚಲು ಮನೆಗೆ ಒಯ್ದು ಚೆಲ್ಲಿದರು. ಎಲ್ಲ ಕಡೆ ಫೆನಾಯಿಲ್ ಚಿಮುಕಿಸಿ ಮತ್ತೊಮ್ಮೆ ಒರೆಸಿದರು. ಊದುಬತ್ತಿ ಹಚ್ಚಿದರು. ಅರ್ಧಗಂಟೆಯೊಳಗಾಗಿ ಈ ಕೆಲಸವೆಲ್ಲವೂ ಚೊಕ್ಕಟವಾಗಿ ಮುಗಿದುಹೋಯಿತು.

ಇವೊತ್ತು ಬಸವರಾಜು ಫ್ಯಾಕ್ಟರಿಗೆ ಹೋಗಲಿಲ್ಲ. ''ಸಂಜೆ ಬೀಗ ಹಾಕಿಕೊಂಡು ಬಾ. ನನಗೆ ಮನೆಯಲ್ಲಿ ಏನೋ ಕೆಲಸ ಇದೆ.'' ಎಂದು ಮ್ಯಾನೇಜರನಿಗೆ ಫೋನ್ ಮಾಡಿದ. ಅವನಿಗೆ ಮಲಗಲು ಆಗುತ್ತ ಇಲ್ಲ. ಕುಳಿತುಕೊಳ್ಳಲು ಆಗುತ್ತಿಲ್ಲ. ಊಟ ಮಾಡಲೂ ಆಗಲಿಲ್ಲ. ಸರ್ವಮಂಗಳೆಗೂ ಅದೇ ಸ್ಥಿತಿ.

ಸಂಜೆಯಾಗುತ್ತಾ ಆಗುತ್ತಾ ಬೀದಿಯಲ್ಲಿ ಎಂದಿನಂತೆ ಸ್ವಲ್ಪ ಸ್ವಲ್ಪವಾಗಿ ಗದ್ದಲ ಜಾಸ್ತಿಯಾಯಿತು. ಶಾಲೆಗೆ ಹೋಗಿದ್ದ ಮಕ್ಕಳು ಮನೆಗೆ ಹಿಂದಿರುಗತೊಡಗಿದರು. ಬಸವರಾಜುವಿನ ಮಕ್ಕಳೂ ಬಂದರು. ಕೆಳಗಿನ ಮನೆಯವರು ಗಂಡ ಹೆಂಡತಿ ಇಬ್ಬರೂ ಕೆಲಸಕ್ಕೆ ಹೋಗಿದ್ದವರು ಬಂದರು. ಇವರಿಗೆ ಮಕ್ಕಳು ಇಲ್ಲ. ತರಕಾರಿ ಗಾಡಿ ಬಂದಿತು. ''ಹೂವೋ... ಹೂವು...'' ಎಂದು ಕೂಗಿಕೊಂಡು ಹೂವಿನವಳೂ ಬಂದಳು.

ಸಂಜೆ ಆರು ಗಂಟೆಯಾಯಿತು. ಮನೆಯ ಬೀದಿಯ ಎಲ್ಲ ದೀಪಗಳೂ ಹೊತ್ತಿಕೊಂಡವು. ಹುಡುಗರು ಟಿ.ವಿ. ಆನ್ ಮಾಡಿದರು. ಸ್ವಲ್ಪ ಹೊತ್ತು ನೋಡಿ, ಪಾಠದ ಪುಸ್ತಕಗಳ ಕಡೆಗೆ ಗಮನ ಹರಿಸಿದರು.

ಬಸವರಾಜು ಇಂದು ಮಧ್ಯಾಹ್ನದ ಮೇಲೆ ಆ ಕಡೆ ಈ ಕಡೆ ಕದಲಲಿಲ್ಲ. ಇನ್ನೂ ಅವನಿಗೆ ಸಣ್ಣ ನಡುಕ. ಸರ್ವಮಂಗಳಾ ಇಂದು ಸರಿಯಾಗಿ ಅಡಿಗೆಯನ್ನೂ ಮಾಡಲಿಲ್ಲ. ಮಾಡಬೇಕು, ಮಾಡಿದಳು.

ರಾತ್ರಿ ಹನ್ನೊಂದು ಗಂಟೆ. ಹುಡುಗರು ಮಲಗಿಬಿಟ್ಟರು. ಬಸವರಾಜುವಿನ ಮನೆಯ ಮುಂದಿನ ರಸ್ತೆ ಶಾಂತವಾಗಿ ಬಿಟ್ಟಿತು. ರಸ್ತೆಯ ದೀಪಗಳು ಬಿಟ್ಟರೆ ಬೇರೆ ಏನೂ ಶಬ್ದ ಇಲ್ಲ. ಯಾರ ಮನೆಯದೋ ಒಂದೆರಡು ನಾಯಿಗಳು ಬೊಗಳಿವೆ ಅಷ್ಟೇ.

ಬಸವರಾಜು ಈಗ ಮೆಲ್ಲಗೆ ಮಹಡಿಯಿಂದ ಇಳಿದು ಕೆಳಗೆ ಬಂದ. ಕೆಳಗಿನ ಮನೆಯವರೂ ಮಲಗಿಬಿಟ್ಟಿದ್ದಾರೆ. ರಸ್ತೆಯಲ್ಲಿ ಆ ಕಡೆ ಈ ಕಡೆ ಆತ ಉದ್ದಕ್ಕೆ ಕಣ್ಣಾಯಿಸಿದ. ಉಹೂಂ, ರಸ್ತೆ ಮಡುಗಟ್ಟಿದ ಮೌನ. ಕಾರನ್ನು ಮಾಮೂಲು ಒಳಗೆ ನಿಲ್ಲಿಸುವವನು, ಇಂದು ಬಾಗಿಲಿನಲ್ಲಿಯೇ ಬಿಟ್ಟಿದ್ದಾನೆ.

ಈಗ ಆತ ಮತ್ತೆ ಮೇಲೆ ಹೋದ. ಈ ಕಡೆ ನೋಡಿದ. ಮಕ್ಕಳು ಹಾಲಿನಲ್ಲಿ ಮಲಗಿಬಿಟ್ಟಿವೆ. ಆ ಕೊಠಡಿಯ ಬೀಗವನ್ನು ಈಗ ಆತ ತೆರೆದ. ಸರ್ವಮಂಗಳೆಯೂ ಅವನ ಬೆನ್ನ ಹಿಂದೆ ಬಂದು ನಿಂತಳು. ಮೊದಲೇ ಮಂಗಳಿಯ ಮೇಲೆ ಆತ ಒಂದು ಗೋಣಿಚೀಲವನ್ನು ಹೊದಿಸಿದ್ದ.

ಈಗ ಅವಸರ ಅವಸರವಾಗಿ ಅವಳನ್ನು ಆ ಗೋಣಿಚೀಲದೊಳಗೆ ಬಸವರಾಜು ತುರುಕಿದ. ಅದರ ಬಾಯಿಗೆ ಒಂದು ದಾರ ಬಿಗಿದ. ಆ ಮೂಟೆಯನ್ನು ಎತ್ತಿಕೊಂಡು ಮೆಟ್ಟಿಲ ಬಳಿ ಬಂದ. ಸರ್ವಮಂಗಳಾ ಕಾರಿಡಾರಿನಲ್ಲಿ ನಿಂತು, ರಸ್ತೆಯಲ್ಲಿ ಯಾರೂ ಇಲ್ಲ ಎನ್ನುವ ಹಾಗೆ ಕೈಯಲ್ಲಾಡಿಸಿ ಸಂಜ್ಞೆ ಮಾಡತೊಡಗಿದಳು. ಅವಳು ಸಂಜ್ಞೆ ಮಾಡುತ್ತಾ ಮಾಡುತ್ತಾ ಇದ್ದಂತೆ ಇವನು ಕೆಳಗೆ ಕೆಳಗೆ ಇಳಿದ. ಮೊದಲು ಕೆಳಗೆ ಇಳಿದಿದ್ದಾಗಲೇ ಡಿಕ್ಕಿಯ ಬಾಗಿಲನ್ನು ತೆರೆದು ನಿಲ್ಲಿಸಿದ. ಈಗ ಆ ಮೂಟೆಯನ್ನು ಡಿಕ್ಕಿಗೆ ಹಾಕಿ ಮುಚ್ಚಿದ. ಸರಸರನೆ ಮುಂದೆ ಬಂದು ಕಾರನ್ನು ಸ್ಟಾರ್ಟ್ ಮಾಡಿದ. ಸರ್ವಮಂಗಳಾ ನಡುಗುತ್ತಲೇ ಮೇಲೆ ನಿಂತಿದ್ದಳು.

ಕಾರು ಮುಂದೆ ಮುಂದೆ ಹೋದಂತೆ ಎಲ್ಲಿಯೋ ಇದ್ದ ನಾಲ್ಕಾರು ನಾಯಿಗಳು ಓಡಿಬಂದವು. ರಸ್ತೆ ಬಿರಿಯುವ ಹಾಗೆ ಏಕಪ್ರಕಾರವಾಗಿ ಅವು ಬೊಗಳತೊಡಗಿದವು. ಒಂದೆರಡು ನಾಯಿಗಳು ಕಾರಿನೊಂದಿಗೆ ಕಾರಿನುದ್ದಕ್ಕೂ ಓಡಿಬಂದವು. ಅವುಗಳಿಗೆ ವಾಸನೆ ತಿಳಿದುಹೋಯಿತೋ ಹೇಗೆ ?

ಬಸವರಾಜು ಕಾರನ್ನು ವೇಗವಾಗಿ ಚಾಲನೆ ಮಾಡಿ ದೇವಸಂದ್ರ ಬಸ್‌ಸ್ಟಾಪಿನ ಬಳಿ ಬಿಇಎಲ್ ಹೊಸರಸ್ತೆಗೆ ಬಂದ. ಡಾಲರ್ ಕಾಲೋನಿಯ ಬಳಿಯ ಸೇತುವೆಯನ್ನು ಹಾಯ್ದು ಉತ್ತರಕ್ಕೆ ಕಾರು ಹಾರಿತು. ಪಶ್ಚಿಮಕ್ಕೆ ತಿರುಗುವ ಆ ತಿರುವಿನಲ್ಲಿ ಕುವೆಂಪು ವೃತ್ತ. ಇನ್ನೂ ಸ್ವಲ್ಪ ದೂರ ಮುಂದೆ ಹೋದರೆ ಬಿಇಎಲ್ ಕಾರ್ಖಾನೆ.

ಆ ತಿರುವಿನಲ್ಲಿ ರಸ್ತೆ ಬದಿಯಲ್ಲಿ ಬಸವರಾಜು ಕಾರನ್ನು ನಿಲ್ಲಿಸಿದ. ರಸ್ತೆ ನಿರ್ಜನ. ಮೇಲೆ ನಕ್ಷತ್ರಗಳೂ ಕಾಣದ ಹಾಗೆ ಇಲ್ಲಿಂದ ಅಲ್ಲಿಯವರೆಗೂ ಬಾನಿನಲ್ಲಿ ಕರಿಮುಗಿಲು. ದಟ್ಟಹೆ.

ಬಸವರಾಜು ಈಗ ಡಿಕ್ಕಿಯನ್ನು ತೆರೆದ. ಹಾಗೆ ಹೀಗೆ ನೋಡಿದ. ಉಹೂಂ, ಒಂದು ನೊಣವೂ ಹಾರಾಡುತ್ತ ಇಲ್ಲ.

ಮಿಂಚುವೇಗದಲ್ಲಿ ಆತ ಆ ಮೂಟೆಯನ್ನು ಎತ್ತಿಕೊಂಡು ಈ ಕಡೆ ತಗ್ಗು ಪ್ರದೇಶಕ್ಕೆ ಉರುಳಿಸಿದ. ಧಡಧಡಧಡ. ಮುಂಭಾಗ ಬಂದು ಕಾರನ್ನು ಸ್ಟಾರ್ಟ್ ಮಾಡುವಾಗ, ಎರಡು ದೀಪಗಳು ಅತ್ತ ಕಾಣಿಸಿದವು. ಲಾರಿಯೋ ಕಾರೋ ಆ ಕಡೆಯಿಂದ ಬರುತ್ತಾ ಇದೆ.

ಒಂದು ಸುತ್ತು ಸರಕ್ಕನೆ ಕಾರನ್ನು ಹಿಂದಕ್ಕೆ ತೆಗೆದುಕೊಂಡ ಬಸವರಾಜು, ದೇವಸಂದ್ರದ ರಸ್ತೆಯಲ್ಲಿ ದೌಡಾಯಿಸಿದ.

-3-

ರಾತ್ರಿ ಹತ್ತು ಗಂಟೆ. ಮಾಮೂಲಿನಂತೆ ವೀರಯ್ಯ ಹೆಂಡದಂಗಡಿಗೆ ಹೋಗಿ ಗಡದ್ದಾಗಿ ಹಾಕಿದ. ಅವನ ತಲೆಯೊಳಗೆ ಈಗ ನಾನಾ ಬಣ್ಣಗಳು. ಮಿಂಚುಗಳು. ತಲೆ ತಲೆ ಅಲ್ಲ. ಅದರೊಳಗೆ ಏನೋ ಬ್ರಹ್ಮಾಂಡವೇ ಅಡಗಿರುವ ಹಾಗಿದೆ. ಆ ಸುಖವೇ ಬೇರೆ. ಆ ಮಜವೇ ಬೇರೆ. ತೂರಾಡುತ್ತ ಆತ ಈಗ ಬಸ್ ಹತ್ತಿ ದೊಡ್ಡ ಬೊಮ್ಮಸಂದ್ರದ ಬಸ್‌ಸ್ಟಾಪಿನಲ್ಲಿ ಇಳಿದ. ರರ್ರರ್ರಾಳ್ಳಳ್ಳಾಳ್ಳಾ ಎಂದು ಗುಣುಗಿಕೊಂಡು ಸರೋಜಳ ಗುಡಿಸಲತ್ತ ಹೆಜ್ಜೆ ಹಾಕಿದ.

ಹೂವಿನ ಸರೋಜಳ ಗುಡಿಸಲು ಪ್ರತ್ಯೇಕವಾಗಿರುವಂತೆ ಈ ಕಡೆ ಒಂಟಿಯಾಗಿದೆ. ಈಗ ಅದು ಬಾಗಿಲು ಹಾಕಿದೆ.

ತೂರಾಡಿಕೊಂಡು ಗುಡಿಸಲ ಮುಂದೆ ಬಂದ ವೀರಯ್ಯ ''ಲೇಯ್.... ಸ್ರರ್ರೀಜಾಜ... ಸ್ರರ್ರೀಜ್ಜಾ.... ಸ್ರರ್ರೋಜ್ಜಾ... ನನ್ನ ಚಿನ್ನಾ... ಬಾಕ್ಲು ತೆಗಿಯೇ...'' ಎಂದು ಕೂಗನ್ನು ಹಾಕಿದ. ಉತ್ತರವಿಲ್ಲ. ''ಲೇ....ಲೇಯ್... ಬೋಸುಡೀ... ಬಾಕ್ಲು ತೆಗಿಯೇ....'' ಮತ್ತೆ ಮತ್ತೆ ಕೂಗು ಹಾಕಿದ. ಬಾಗಿಲನ್ನು ಬಡಿದ. ಉಹೂಂ. ಒಳಗೆ ಏನೋ ಶಬ್ದ. ಮಾತಾಡುವ ಶಬ್ದ.

''ಲೇಯ್ ಬಾಕ್ಲು ತೆಗಿಯೇ ಅಂದ್ರೆ ಅದ್ಯಾವೋನು ಮಿಂಡನ ಹತ್ರ ಮನಗಿದ್ದೀಯೇ... ಬೋಸುಡೀ ರಂಡೇ...'' ಎಂದು ಆತ ಬಲವಾಗಿ ಬಾಗಿಲನ್ನು ಒದ್ದ. ತಡಿಕೆಯ ಬಾಗಿಲು. ಈತ ಒದೆದ ಒದೆತಕ್ಕೆ ಅದು ತೆರೆದುಕೊಂಡಿತು. ಮರುಕ್ಷಣದಲ್ಲಿ ಒಬ್ಬ ಧಡಿಯ ಹೊರಗೆ ಹಾರಿಬಂದ. ಆತ ಬಲಿಷ್ಠ; ಸೈಂಧವ. ಆತನ ಕಾಲುಗಳೂ, ಕೈಗಳೂ ಕಬ್ಬಿಣದ ತುಂಡುಗಳೇ. ಈಗ ಆತ ಮುಖ ಮೂತಿ ಎಂದು ನೋಡದೆ ಹತ್ತಾರು ಏಟುಗಳನ್ನು ಇವನಿಗೆ ಚಾಚಿದ; ಮತ್ತೆ ಮತ್ತೆ ಕೈ ಬೀಸಿದ.

ಇನ್ನು ಅಲ್ಲಿದ್ದರೆ ಏನೂ ಪ್ರಯೋಜನವಿಲ್ಲ. ಮೇಲೂ ಏಟು ತಿನ್ನಬೇಕಾಗುತ್ತದೆ. ಈಗಾಗಲೇ ಆತ ಸರಿಯಾಗಿ ಬಡಿಸಿಕೊಂಡಿದ್ದಾನೆ. ''ಲೇಯ್... ನಿನ್ನ ಮಾಡ್ತೇನಿ ಕಣೋ... ಲೇಯ್ ಕತ್ತೆರಂಡೇ.... ನಿನ್ನ ಹುಗಿದು ಹಾಕ್ತೀನಿ ನೋಡೇ...'' ಎಂದು ಕೂಗು ಹಾಕಿಕೊಂಡು ವೀರಯ್ಯ ಇತ್ತ ಜಿಗಿದ. ಮುಖ್ಯರಸ್ತೆಗೆ ಬಂದು ಸೇರಿಬಿಟ್ಟ.

ಆಗ ವಿದ್ಯಾರಣ್ಯಪುರದಿಂದ ಮೆಜೆಸ್ಟಿಕ್ಕಿಗೆ ಹೋಗುವ ಕೊನೆಯ ಬಸ್‌ಸ್ಟಾಪಿನಲ್ಲಿ ಬಸ್ ಬಂದು ನಿಂತುಕೊಂಡಿತು. ಗಂಟೆ ರಾತ್ರಿ ಹತ್ತೂ ಮುಕ್ಕಾಲು. ಇದೇ ರಾತ್ರಿ ಕೊನೆಯ ಬಸ್ ಆದುದರಿಂದ ರಾತ್ರಿ ರೈಲಿಗೆ ಹೋಗುವವರು ರಾತ್ರಿ ಬಸ್ಸುಗಳಿಗೆ ಹೋಗುವವರು ಹೀಗೆ ಬಸ್ಸು ಭರ್ತಿ. ಸ್ಟಾಂಡಿಂಗೂ ಇದೆ.

ತೂರಾಡುತ್ತಾ ವೀರಯ್ಯನೂ ಬಂದು ಬಸ್ ಹತ್ತಿಕೊಂಡ. ಅವನ ಹಿಂದೆ ಮುಂದೆ ನಿಂತಿದ್ದವರು ಸೀಟುಗಳಲ್ಲಿ ಕುಳಿತಿದ್ದವರು ಮೂಗು ಮುಚ್ಚಿಕೊಂಡರು. ಹೌದು ವೀರಯ್ಯ ಧಂಡಿಯಾಗಿ ಹಾಕಿದ್ದಾನಷ್ಟೆ. ಆ ವಾಸನೆ. ಹುಳಿ ಹುಳಿ ವಾಸನೆ. ಬಸ್ಸಿನಲ್ಲಿ ಇದ್ದವರು ಎಲ್ಲರೂ ಮೂಗು ಮುಚ್ಚಿಕೊಳ್ಳುವಷ್ಟು ವಾಸನೆ

**ಮೂರ್ಖತನ**

ಹಿಂದೆಂದೋ ಹೊಸ್ಗಾಗಿತ್ತೆಂದು
ಇಂದು ರಾಶಿ ಬಿದ್ದಿರುವ
ಮಣ್ಣನ್ನು ತಲೆಯ ಮೇಲಿಟ್ಟುಕೊಂಡು
ಮೆರೆಯುವುದು ತರವೆ ? - ಹಾಲಾಡಿ ಮಾರುತಿರಾವ್

ಈಗ ಕಂಡೆಕ್ಟರ್ ''ಟಿಕೆಟ್..ಟಿಕೆಟ್..'' ಎಂದು ಕೂಗುಹಾಕಿಕೊಂಡು ಬಂದ. ವೀರಯ್ಯನ ಬಳಿ ಬಂದು ''ಟಿಕೆಟ್...ಟಿಕೆಟ್'' ಎಂದ

ಹೂವಿನ ಸರೋಜಳ ಗುಡಿಸಲ ಧಡಿಯನಿಂದ ಬಡಿಸಿಕೊಂಡ ಸಿಟ್ಟು ವೀರಯ್ಯನಿಗೆ ಇನ್ನೂ ಇಳಿದಿರಲಿಲ್ಲ. ಕಂಡೆಕ್ಟರ್ 'ಟಿಕೆಟ್' ಎಂದೊಡನೆ ಇವನಿಗೆ ಕೋಪ ಉಕ್ಕಿ ''ಲೇಯ್... ಯಾವ್ನೋನೋ ನೀನು ? ತಿಕೀಟಂತೆ ತಿಕೀಟು.. ಇವನವ್ವನ..'' ಎಂದ

''ಲೇಯ್, ಟಿಕೆಟ್ ತಗೋತೀಯೋ ? ನಿನ್ನನ್ನ ಇಳಿಸಲೋ ?''

''ಇಳಿಸ್ತಿಯೇನೋ... ನಿಮ್ಮಪ್ಪಂದೇನೋ ಬಸ್ಸೂ...''

ಒಂದಿಬ್ಬರು ಪ್ರಯಾಣಿಕರು ಕೂಗುಹಾಕಿದರು.

''ಮುಂಡೇಗಂಡನ್ನ ಇಳಿಸ್ರಿ... ಸರಿಯಾಗಿ ಹಾಕಿಬಿಟ್ಟಿದ್ದಾನೆ... ಕೆಟ್ಟಾಸನೆ... ಟಿಕೆಟೂ ತಗೋಳ್ಳೊಲ್ಲ ಅಂತ ರಂಪ ಮಾಡ್ತಾ ಇದಾನೆ..''

ಮುಂದಿನ ಆಸ್ಪತ್ರೆ ಸ್ಟಾಪಿಗೆ ಬಸ್ ಬಂದು ನಿಂತಿತು. ಕಂಡೆಕ್ಟರ್ ವೀರಯ್ಯನ ಭುಜವನ್ನು ಹಿಡಿದು ಕೆಳಗೆ ನೂಕಿದ. ''ಲೇ... ಲೇ... ಲೇ... ಲೇಯ್...'' ಎಂದು ಇವನು ಕೂಗಿಕೊಂಡು ಮುಗ್ಗರಿಸಿ ಕೆಳಗೆ ಬಿದ್ದ. ಬಸ್ ಮುಂದೆ ಮುಂದೆ ಹೊರಟುಹೋಯಿತು. ಕೆಳಗೆ ಬಿದ್ದವನ ಕಿವಿಗಳಲ್ಲಿ ಕಂಡೆಕ್ಟರನ ರೈಟ್ ರೈಟ್ ಕೂಗು ಕೇಳಿಸುತ್ತ ಇದೆ

ಸರೋಜಳ ಗುಡಿಸಲ ಧಡಿಯ ಇವನಿಗೆ ಚನ್ನಾಗಿ ಬಡಿದಿದ್ದು, ಈಗ ಕಂಡಕ್ಟರ್ ಬಸ್ಸಿನಿಂದ ದಬ್ಬುತ್ತಲೇ ಕೆಳಗೆ ಬಿದ್ದು ಹಣೆಗೆ ತಗುಲಿದ ಪೆಟ್ಟು - ಇವುಗಳಿಂದಾಗಿ ವೀರಯ್ಯ ಪೂರ್ವಸ್ಥಿತಿಗೆ ಮರಳತೊಡಗಿದ್ದಾನೆ. ಅವನ ತಲೆಯೊಳಗಿದ್ದ ಬಣ್ಣ ಬಣ್ಣದ ಕಾರಂಜಿಗಳೂ, ಮೈಸೂರು ಕನ್ನಂಬಾಡಿಯೂ ಬತ್ತತೊಡಗಿದೆ. ರರ್‍ರರ್‍ರಳೆಳ್ಳೆಳ್ಳೆ ಹಾಡು ಶಿಳ್ಳೆ ನಿಂತುಹೋಗಿದೆ.

ತೂರಾಡುತ್ತಾ ಆತ ಕುವೆಂಪು ವೃತ್ತದ ತಿರುವಿಗೆ ಬಂದ. ಆತ ಈಗ ತನ್ನ ಪೂರ್ವಸ್ಥಿತಿಗೆ ಮರಳುತ್ತ ಇದ್ದಂತೆ ದೇಹಬಾಧೆ ಅಧಿಕವಾಗತೊಡಗಿದೆ. ಬೆನ್ನು ಭುಜ ಹೊಟ್ಟೆ ಕೈಕಾಲು- ಎಲ್ಲವೂ ಸ್ವಾಧೀನ ಕಳೆದುಕೊಂಡ ಹಾಗೆ ಆಗಿಹೋಗಿವೆ. ಎಲ್ಲವೂ ಬಗೆಬಗೆಯಿಂದ ನೋವನ್ನು ಹೊರಚೆಲ್ಲಿವೆ. ತಾಳ ಹಾಕುತ್ತ ಇವೆ. ಈಗ ಆತ ಅಲ್ಲಿಗೆ ಬಂದವನು ತೂರಾಡಿ ಎಡವಿ ಎಡಭಾಗದ ತಗ್ಗು ಪ್ರದೇಶಕ್ಕೆ ಉರುಳಿಕೊಂಡ.

ದಡ ದಡ ದಡ ಉರುಳಿ ಉರುಳಿ ಉರುಳಿ ಉರುಳಿ ಆತ ಕೆಳಭಾಗಕ್ಕೆ ಬಂದಾಗ ಒಂದು ಮೂಟೆ ಅಡ್ಡ ಬಂದಿತು. ಈತನ ಬೆನ್ನು ಈಗ ಆ ಮೂಟೆಯೊಂದಿಗೆ ಸೇರಿಹೋಗಿದೆ

ಅರೆ, ಇದು ಏನು ? ಒಂದು ಕಾಲು. ಹೌದು, ಅದು ಕಾಲೇ. ಸಂದೇಹವೇ ಇಲ್ಲ. ಮೂಟೆಯಿಂದ ಹೊರಬಂದು ಉದ್ದಕ್ಕೆ ಅದು ಚಾಚಿಕೊಂಡಿದೆ.

ವೀರಯ್ಯ ಕಣ್ಣುಗಳನ್ನು ಹೊಸಕಿಕೊಂಡ. ಅವನು ಈಗ ತನ್ನ ಸ್ಥಿತಿಗೆ ಹೆಚ್ಚು ಕಡಿಮೆ ಬಂದೇಬಿಟ್ಟಿದ್ದಾನೆ. ತಾನು ವೀರಯ್ಯ, ಕುಡಿದು ಬಂದು, ಹಾಳು ರಂಡೆ ಸರೋಜಳ ಇನ್ನೊಬ್ಬ ಗೆಣೆಕಾರ ಅವನ ಕೈಸೇದು ಹೋಗ, ಹಾವು ಕಡಿಯ, ದರಿದ್ರದ ಮೂದೇವಿ ಆ ದಡಿಯನಿಂದ ಬಡಿಸಿಕೊಂಡು, ಎಡವಿ, ಇಲ್ಲಿ ಉರುಳಿ ಬಿದ್ದಿದ್ದೇನೆ- ಎನ್ನುವುದು ಅವನಿಗೆ ಈಗ ತಿಳಿಯಾಗತೊಡಗಿದೆ. ಹಾಗೆಯೇ ಭಯದಿಂದ ಅವನ ದೇಹವೂ ನಡುಗತೊಡಗಿದೆ.

ಹೌದು. ಯಾರೋ ಯಾರನ್ನೋ ಕೊಲೆ ಮಾಡಿ, ಶವವನ್ನು ಮೂಟೆಯೊಳಗೆ ತುರುಕಿದ್ದಾರೆ. ಈ ತಗ್ಗು ಪ್ರದೇಶಕ್ಕೆ ಮೂಟೆಯನ್ನು ಉರುಳಿಸಿದ್ದಾರೆ. ಸರಿಯಾಗಿ ಅದಕ್ಕೆ ದಾರ ಬಿಗಿದಿರಲಿಲ್ಲವೋ ಏನೋ ? ಉರುಳಿಸಿದಾಗ ಮೂಟೆಯ ಬಾಯಿ ಬಿಚ್ಚಿಕೊಂಡಿದೆ. ಹಾಗಾಗಿ ಒಂದು ಕಾಲು ಹೊರ ಚಾಚಿದೆ

ಬರೆ ಕಾಲು ಮಾತ್ರ ಏನು ? ಆ ಕಾಲಿನಲ್ಲಿ ಒಂದು ಬೆಳ್ಳಿಯ ಚೈನೂ ಇದೆ. ಮೇಲಿನ ರಸ್ತೆಯ ದೀಪದ ಬೆಳಕು ಈ ಚೈನಿನ ಮೇಲೆ ಬಿದ್ದು ಅದು ಲಕಲಕನೆ ಬೆಳಗತೊಡಗಿದೆ.

ಒಡನೆಯೇ ವೀರಯ್ಯ ಆ ಕಾಲಿನಿಂದ ಆ ಚೈನನ್ನು ಕಳಚಿಕೊಂಡ. ಒಂದು ಕಾಲಲ್ಲಿ ಚೈನು ಇದ್ದಮೇಲೆ, ಮತ್ತೊಂದು ಕಾಲಿನಲ್ಲಿಯೂ ಇರಲೇಬೇಕಲ್ಲವೆ ? ಮೂಟೆಯನ್ನು ಅಗಲಿಸಿ, ಬಿಚ್ಚಿ, ಮತ್ತೊಂದು ಕಾಲನ್ನು ಎಳೆದು, ಆ ಕಾಲಿನಿಂದಲೂ ಇನ್ನೊಂದು ಚೈನನ್ನು ಕಳಚೋಣವೇ ಎಂದು ಆ ಸಮಯದಲ್ಲಿಯೂ ಅವನಿಗೆ ಅಂಥ ಯೋಚನೆ. ಆದರೆ ಭಯ.

ಈಗ ಅವನು ನಡುಗಿಹೋದ. ಏನೋ ಸಂಕಟ. ಕಣ್ಣುಗಳಲ್ಲಿ ನೀರು ತುಂಬಿಕೊಳ್ಳುತ್ತ ಇದೆ. ಹೊಟ್ಟೆಯೊಳಗೆ ಭಯಂಕರ ಉರಿ. ಏನೇನೋ ಹಿಂಸೆ. ವಿವರಿಸಲಾಗದ ತಳಮಳ.

ತೆವಳಿಕೊಂಡು ತೆವಳಿಕೊಂಡು ಈಗ ಆತ ಮೇಲೆ ಬಂದ. ಚೈನನ್ನು ಸೊಂಟಕ್ಕೆ ಸಿಕ್ಕಿಸಿದ. ಕಣ್ಣುಮಂಜು. ರಸ್ತೆಯ ದೀಪದ ಬೆಳಕು ಗಂಜಿಯ ಹಾಗೆ ಆಗಿಹೋಗಿದೆ. ಬಾನಿನಲ್ಲಿದ್ದ ಮುಗಿಲು ಕೆಮ್ಮಿದ ಹಾಗಿದೆ. ಬಿಕ್ಕುತ್ತ ಇರುವ ಹಾಗಿದೆ. ಗಾಳಿ ನಿಟ್ಟುಸಿರು ಬಿಡುವ ಹಾಗಿದೆ

ಸರಸರನೆ ಹೆಜ್ಜೆ ಹಾಕಿ ವೀರಯ್ಯ ಈಗ ದೇವಸಂದ್ರದ ಹಾದಿ ಹಿಡಿದ. ತನ್ನ ಗುಡಿಸಲ ಬಳಿ ಬಂದ. ಆಗ ಗಂಟೆ ಬೆಳಗಿನ ಎರಡೂವರೆ.

ಆ ಸಮಯದಲ್ಲಿಯೂ ಅವನ ಗುಡಿಸಲ ಮುಂದೆ ಒಬ್ಬಳು ಮುದುಕಿ, ಇಬ್ಬರು ಮುದುಕರು, ಒಂದಿಬ್ಬರು ಹೆಂಗಸರು ಹೀಗೆ ಕುಳಿತಿದ್ದಾರೆ. ಒಬ್ಬ ಮುದುಕ ಬೀಡಿ ಕಚ್ಚಿಕೊಂಡಿದ್ದಾನೆ. ಎಣ್ಣೆಬುಡ್ಡಿಯ ದೀಪ ಉರಿಯುತ್ತಲೇ ಇದೆ. ದೀಪದ ಬಳಿ ಚಿಕ್ಕಮ್ಮ ಸುರುಟಿಕೊಂಡು ''ಕೂಸೂ... ಕೂಸೂ...'' ಎಂದು ಬಿಕ್ಕುತ್ತ ಇದ್ದಾಳೆ.

ದೂರದಿಂದಲೇ ವೀರಯ್ಯ ಬರುತ್ತ ಇರುವುದನ್ನು ಗಮನಿಸಿದ ಒಬ್ಬಳು ಮುದುಕಿ ಈಗ ''ಓ ಯೀರಪ್ಪ ಬಂದ್ಬುಟ್ಟ ಕಣೇ...'' ಎಂದು ಕೂಗನ್ನು ಹಾಕಿದಳು.

ಇದು ಏನು ಎಂದು ಗಾಬರಿಯಿಂದ ಗುಡಿಸಲ ಒಳಹೊಕ್ಕ ವೀರಯ್ಯನಿಗೆ ಈಗ ಪಂಚೆ ಸಡಿಲವಾದ ಹಾಗಾಯಿತು. ಅದನ್ನು ಸರಿಯಾಗಿ ಕಟ್ಟಿಕೊಳ್ಳಲು ಆತ ಮುಂದಾದಾಗ, ಸೊಂಟದಲ್ಲಿ ಸಿಕ್ಕಿಸಿಕೊಂಡಿದ್ದ ಚೈನು, ಥಟ್ಟನೆ ಕೆಳಗೆ ಬಿದ್ದಿತು. ಅದೂ ಚಿಕ್ಕಮ್ಮನ ಮುಂದೆಯೇ ಬಿದ್ದುಕೊಂಡಿತು.

ಒಡನೆ ಅದನ್ನು ಎತ್ತಿಕೊಂಡ ಚಿಕ್ಕಮ್ಮ ತಿರುಗಿಸಿ ತಿರುಗಿಸಿ ನೋಡಿ ''ಓ, ಇದು ನನ್ನ ಕೂಸಿನ ಕಾಲು ಚೈನೇ. ತಿರುಪು ಮುರಿದು ಹೊಸದಾಗಿ ಮಾಡಿಸಿದ್ದು. ಇದು ನಿನಗೆ ಎಲ್ಲಿತ್ತು ?'' ಎಂದು ಕೂಗು ಹಾಕಿದಳು.

ಹೌದು. ಆ ಚೈನಿನ ವಿಚಾರದಲ್ಲಿಯೂ ಗಂಡ-ಹೆಂಡತಿಯರೊಳಗೆ ಎಷ್ಟೋ ದಿನಗಳು ಜಗಳ ಆಗಿದೆ. ಕೂಲಿ ಮಾಡಿಕೊಂಡು, ಪೊರಕೆ ಮಾರಾಟ ಮಾಡಿಕೊಂಡೇ ಚಿಕ್ಕಮ್ಮ ಮಗಳಿಗೆ ಬೆಳ್ಳಿಯ ಕಾಲು ಚೈನುಗಳನ್ನು ಮಾಡಿಸಿ ಹಾಕಿದ್ದಳು. ಕುಡಿಯುವುದಕ್ಕೆ ಹಣ ಇಲ್ಲದಿದ್ದ ದಿನಗಳು. ವೀರಯ್ಯ ''ಆ ಚೈನು ಕೊಡು. ಮಾರವಾಡಿ ಹತ್ತರ ಅಡು ಮಡಗ್ತೀನಿ'' ಎಂದು ಕೂಗುಹಾಕುತ್ತ ಇದ್ದ. ಆಗ ಚಿಕ್ಕಮ್ಮ ಮಗಳನ್ನು ಬಲವಾಗಿ ತಬ್ಬಿಕೊಂಡು ''ನೀ ನಾಸ್‌ವಾಗಿ ಹೋಗ. ಏನಾದ್ರೂ, ನನ್ನ ಕೂಸಿಂದು ಕಾಲು ಚೈನು ಕೊಡಕಿಲ್ಲ....'' ಎಂದು ರಂಪಮಾಡಿ ಬೊಬ್ಬೆ ಹಾಕುತ್ತ ಇದ್ದಳು. ಈ ವಿಚಾರವಾಗಿ ಒಂದೆರಡು ದಿನಗಳು ಅವನು ಅವಳನ್ನು ಸಿಕ್ಕಾಬಟ್ಟೆ ಹೊಡೆದೂ ಇದ್ದಾನೆ. ಆದರೂ ಅವಳು ಚೈನನ್ನು ಕಳಚಿಕೊಟ್ಟಿರಲಿಲ್ಲ.

ಈಗ ಚಿಕ್ಕಮ್ಮ, ''ಇದು ನನ್ನ ಕೂಸಿನ ಕಾಲು ಚೈನು- ಇದು ನಿನಗೆ ಎಲ್ಲಿತ್ತು ?'' ಎಂದು ಬೊಬ್ಬೆ ಹಾಕುತ್ತಲೇ ವೀರಯ್ಯ ಉಡುಗಿ ಹೋದ. ''ಹಾಂ..'' ಎಂದು ಕೂಗಿಕೊಂಡು ಮತ್ತೆ ಆತ ಹೊರಗೇ ಜಿಗಿದ. ಆಗ ಮಾದಯ್ಯ ಅವನಿಗೆ ಎದುರಾದ.

ಹೌದು. ಹಳ್ಳಿಗೆ ಹೋಗಿದ್ದ ಮಾದಯ್ಯ ಅರ್ಧ ರಾತ್ರಿಯ ಮೇಲೆ ಬೆಂಗಳೂರಿಗೆ ಬಂದು ತನ್ನ ಗುಡಿಸಲಿಗೆ ಹಿಂದಿರುಗಿದ್ದ. ಆಗ ಅವನ ಪಕ್ಕದ ಗುಡಿಸಲಿನವರು ''ಈಗೆ ಚಿಕ್ಕವ್ವೋರು ಏಳಿ ಕಳಿಸಿದ್ರು. ಮಂಗಳಿ ಎಲ್ಲೋ ಇಲ್ಲವಂತೆ...'' ಎಂದು ಸುದ್ದಿ ಮುಟ್ಟಿಸಿದ್ದರು.

ಮಂಗಳಿಯನ್ನು ತುಂಬಾ ಪ್ರೀತಿಸುತ್ತಿದ್ದ ಮಾದಯ್ಯ ''ಹಾಂಗಾ ?'' ಎನ್ನುತ್ತಾ ಧಾವಿಸಿ ಬಂದ. ಅವನು ಬಂದಾಗ ವೀರಯ್ಯ ತನ್ನ ಗುಡಿಸಲಿಂದ ಹೊರಗೆ ಜಿಗಿದಿದ್ದ. ಈಗ ಇವನನ್ನು ನೋಡಿ ಆತ ಕೂಗಿಕೊಂಡ.

''ಯಾನ್ಲಾ... ಯಾನ್ಲಾ... ಯಾನ್ಲಾ...''

ವೀರಯ್ಯ ಅವನ ಕಿವಿಯಲ್ಲಿ ಏನೋ ಉಸುರಿ, ಮುಂದೆ ಮುಂದೆ ಓಡಿದ. ''ಹ್ಲಾ...'' ಎಂದು ಕೂಗನ್ನು ಹಾಕಿ ಮಾದಯ್ಯನೂ ಅವನ ಹಿಂದೆ ಓಡತೊಡಗಿದ.

ಆಗ-

ಡಾಲರ್ ಕಾಲೋನಿಯ ಮೇಲೆ ಇಸ್ರೋ ಕಾರ್ಯಾಲಯದ ಮೇಲೆ ರಾಮಯ್ಯ ಇಂಜಿನಿಯರಿಂಗ್ ಮೆಡಿಕಲ್ ಕಾಲೇಜು ಆಸ್ಪತ್ರೆಗಳ ಮೇಲೆ ಸಿಪಿಆರ್‌ಐ ಮೇಲೆ ಭಾರತೀಯ ವಿಜ್ಞಾನ ಸಂಸ್ಥೆಯ ಮೇಲೆ ಮೇಲೆ ತೇಲಿಕೊಂಡಿದ್ದ ಮುಗಿಲಿಗೆ ದುಃಖ ತಡೆಯಲು ಸಾಧ್ಯವಾಗಲಿಲ್ಲ. ಆಗಿನಿಂದಲೂ ಬಿಕ್ಕಳಿಸುತ್ತಿದ್ದ ಈ ಮುಗಿಲ ಹಿಂಡು ಈಗ ಓಓಓ ಎಂದು ಜೋರಾಗಿ ಕಣ್ಣೀರು ಸುರಿಸತೊಡಗಿತು.

ಅದು ಯಾವಾಗ ಧೋ ಧೋ ಧೋ ಕಣ್ಣೀರು ಸುರಿಸತೊಡಗಿತೋ ನೀರು ಎಲ್ಲೆಲ್ಲೋ ಉರುಳುರುಳಿ ಪ್ರವಾಹ. ನೋಡಲಾರೆ ನೋಡಲಾರೆ ಎನ್ನುವಂತೆ ಮರುಕ್ಷಣದಲ್ಲಿ ವಿದ್ಯುತ್ತಿನ ಕಣ್ಣುಮುಚ್ಚು. ಎಲ್ಲೆಲ್ಲೂ ಅಂಧಕಾರ. ಬಾನು ಭೂಮಿ ದಿಕ್ಕುದಿಕ್ಕುಗಳು ಎಲ್ಲವೂ ಗಾಢಾಂಧಕಾರ.

ಈ ಕಡುಕತ್ತಲೆಯ ಪರದೆಯನ್ನು ಕಿತ್ತು ಒಗೆಯುತ್ತೇನೆ ಎನ್ನುವ ಹಾಗೆ ಮಿಂಚು ಫಕ್ಕನೆ ಕಣ್ತೆರೆದಾಗ, ಬಿಕ್ಕುತ್ತಿರುವ ಮಳೆ ನೀರಿಗೆ ಚಿನ್ನದ ಎಳೆಯನ್ನು ಸೇರಿಸಿ ನುಲಿದ ಹಾಗೆ ಫಳಾರ್. ಒಂದೇ ಕ್ಷಣ. ಮತ್ತೆ ಕತ್ತಲೆಯೋ ಕತ್ತಲೆ. ಎದೆ ನಡುಗಿಸುವ ಕತ್ತಲೆ.

ಅಂಥ ಕತ್ತಲೆಯ ರಾಶಿಯಲ್ಲಿ, ಸದಾಶಿವನಗರ ಪೋಲಿಸ್ ಠಾಣೆಯ ಬಳಿಯಿಂದ ಹೊಸ ಬಿಇಎಲ್ ರಸ್ತೆಯಲ್ಲಿ ಉರುಳಿರುವ ಮಂಡಿಯುದ್ದ ನೀರನ್ನು ತುಳಿದು ಚಿಮ್ಮಿ ಡಾಲರ್ ಕಾಲೋನಿಯ ಬಳಿಯ ಸೇತುವೆಯ ಮೇಲೆ ಮಾದಯ್ಯನೂ ವೀರಯ್ಯನೂ ಕುವೆಂಪು ವೃತ್ತದ ಕಡೆಗೆ ಹುಚ್ಚರಂತೆ ಓಡುತ್ತ ಇದ್ದರು.

---

ಶೇಷನಾರಾಯಣ
759, 15ನೇ 'ಬಿ' ಮೇಯ್ನ್, ಗೋಕುಲ 1ನೇ ಫೇಜ್,
1ನೇ ಹಂತ, ಮತ್ತೀಕೆರೆ, ಬೆಂಗಳೂರು - 560 054

# ಕರ್ನಾಟಕದಲ್ಲಿ ಉನ್ನತ ಶಿಕ್ಷಣ

ಭಾರತದಲ್ಲಿ ಉನ್ನತ ಶಿಕ್ಷಣಕ್ಕೆ ಸಿಗಬೇಕಾದ ಪ್ರಾಶಸ್ತ್ಯ – ಬಹು ಮುಖ್ಯವಾಗಿ ಸರ್ಕಾರಿ ವಲಯಗಳಿಂದ– ಸಿಕ್ಕುತ್ತಿಲ್ಲವೆನ್ನುವುದು ಹೊಸ ವಿಷಯವೇನಲ್ಲ. ಅದರಲ್ಲೂ ರಾಜೀವ ಗಾಂಧಿಯವರ ಸರ್ಕಾರ 1986ರಲ್ಲಿ ದೇಶದ ಮೇಲೆ ಹೇರಿದ ನೂತನ ಶಿಕ್ಷಣ ನೀತಿ ದೇಶದ ಉನ್ನತ ಶಿಕ್ಷಣದ ಮೇಲೆ ಗದಾ ಪ್ರಹಾರ ಮಾಡಿತೆನ್ನುವುದೂ ಹಳೆಯ ವಿಷಯವೇ. ದುರದೃಷ್ಟಕರ ಸಂಗತಿ ಎಂದರೆ ನಮ್ಮ ಕೇಂದ್ರ ಸರ್ಕಾರಗಳು ಬದಲಾದರೂ ತಾತ್ವಿಕವಾಗಿ ಅವೆಲ್ಲವುಗಳ ಶಿಕ್ಷಣ ನೀತಿ ಒಂದೇ ಆಗಿರುವುದು. (ಕೇಂದ್ರದಲ್ಲಿ ಭಾಜಪ ಸಮ್ಮಿಶ್ರ ಸರ್ಕಾರ ಬಂದಾಗಿನಿಂದ ಇಡೀ ಶಿಕ್ಷಣ ಕ್ಷೇತ್ರವನ್ನು ಕಪಿಮುಷ್ಟಿಯಲ್ಲಿ ಹಿಡಿದಿರುವುದು ಆರ್.ಎಸ್.ಎಸ್. ತಾತ್ವಿಕತೆ ಎನ್ನುವುದನ್ನು ಗಮನದಲ್ಲಿಟ್ಟುಕೊಂಡೇ ಈ ಮಾತನ್ನು ಹೇಳಬೇಕಾಗಿದೆ). ಹಾಗಾಗಿಯೇ ದೇಶದ ಉನ್ನತ ಶಿಕ್ಷಣಕ್ಕೆ ಕೊಡಲಿ ಪೆಟ್ಟನ್ನು ನಿಡಿದ್ದು ಹಾರ್ವರ್ಡ್ ಹಿನ್ನೆಲೆಯ ಹಿಂದಿನ ಕೇಂದ್ರ ಆರ್ಥಿಕ ಸಚಿವ ಚಿದಂಬರಂ ಅವರು. ಉನ್ನತ ಶಿಕ್ಷಣಕ್ಕೆ ಪ್ರಾಶಸ್ತ್ಯವಲ್ಲದ ಕ್ಷೇತ್ರ ಎಂಬ ಹಣೆಪಟ್ಟಿ ಹಚ್ಚಿ ಅದಕ್ಕೆ ನೀಡಲಾಗುತ್ತಿದ್ದ ಆರ್ಥಿಕ ಬೆಂಬಲಕ್ಕೆ ತೀವ್ರ ಕತ್ತರಿ ಪ್ರಯೋಗ ಮಾಡಿದ (ಅಪ)ಕೀರ್ತಿ ಚಿದಂಬರಂ ಅವರಿಗೇ ಸಲ್ಲಬೇಕು. ಚಿದಂಬರಂ ಅವರ ಈ ನಿಲುವಿನಿಂದ ಪ್ರಾಥಮಿಕ, ಮಾಧ್ಯಮಿಕ, ಪ್ರೌಢ ಶಿಕ್ಷಣ ಕ್ಷೇತ್ರಗಳಿಗೆ ಯಾವುದೇ ರೀತಿಯ ಲಾಭವಾಗಿಲ್ಲವೆನ್ನುವುದೂ ಚಿದಂಬರ ರಹಸ್ಯವೇ; ಈ ನೀತಿಯಿಂದಾಗಿ ದೇಶದ ಎಲ್ಲೆಡೆ, ಮುಖ್ಯವಾಗಿ ಕರ್ನಾಟಕದಲ್ಲಿ , ಉನ್ನತ ಶಿಕ್ಷಣ ಹಿಂದೆಂದಿಗಿಂತಲೂ ಈಗ ವ್ಯಾಪಾರೀಕರಣದ ಜಾಡು ಹಿಡಿದು ಉನ್ನತ ಶಿಕ್ಷಣ ಕ್ಷೇತ್ರದ ಅರ್ಥವನ್ನೇ ಬದಲಿಸಿಬಿಡುವ ಮಾರ್ಗ ಹಿಡಿದಿದೆ.

ಪ್ರೌಢಶಾಲಾ ಶಿಕ್ಷಣದ ನಂತರ ನೀಡಲಾಗುವ ಪದವಿ ಪೂರ್ವ, ಪದವಿ ಹಾಗೂ ಸ್ನಾತಕೋತ್ತರ ಶಿಕ್ಷಣವನ್ನು ಸಾಮಾನ್ಯವಾಗಿ ಉನ್ನತ ಶಿಕ್ಷಣವೆಂದು ಗುರುತಿಸಲಾಗುತ್ತದೆ. ಆದರೆ, ಕರ್ನಾಟಕ ಸರ್ಕಾರದ ದೃಷ್ಟಿಯಲ್ಲಿ ಮಾತ್ರ ಕೆಲವು ವರ್ಷಗಳಿಂದೀಚೆಗೆ ಉನ್ನತ ಶಿಕ್ಷಣವೆಂದರೆ ಪದವಿ ಪೂರ್ವ ಶಿಕ್ಷಣ (ಅದರಲ್ಲೂ ವಿಜ್ಞಾನ ವಿಷಯಗಳು), ಎಂಜಿನಿಯರಿಂಗ್ ಮತ್ತು ವೈದ್ಯಕೀಯ ಶಿಕ್ಷಣ (ಎಂಬಿಬಿಎಸ್, ಡೆಂಟಲ್, ನರ್ಸಿಂಗ್, ಫಾರ್ಮಸಿ)ಗಳು ಮಾತ್ರ ಉನ್ನತ ಶಿಕ್ಷಣವೆನ್ನುವಂಥ ''ಸತ್ಯ''ವನ್ನು ಸಮಾಜದ ಮಧ್ಯಮ ಹಾಗೂ ಮೇಲ್ವರ್ಗದ ಜನಗಳಲ್ಲಿ ಪೂರ್ವಯೋಜಿತ ರೀತಿಯಲ್ಲಿ ಬಿತ್ತಲಾಗುತ್ತಿದೆ. ಲಕ್ಷಗಟ್ಟಲೆ ಹಣವನ್ನು ತರಲು ಸಾಧ್ಯವಿದ್ದರೆ ಸಾಧಾರಣ ಗುಣಮಟ್ಟದ ವಿದ್ಯಾರ್ಥಿಯೂ ಎಂಜಿನಿಯರಿಂಗ್ ಅಥವಾ ವೈದ್ಯಕೀಯ ಶಿಕ್ಷಣಕ್ಕೆ ಅರ್ಹನಾಗುತ್ತಾನೆ. ನಮ್ಮ ಸಮಾಜಕ್ಕೆ ಅಗತ್ಯವಿದೆಯೇ ಇಲ್ಲವೇ ಎನ್ನುವುದನ್ನೂ ಯೋಚಿಸದೆ ಮೇಲಿಂದ ಮೇಲೆ ಮೆಡಿಕಲ್ ಹಾಗು ಎಂಜಿನಿಯರಿಂಗ್ ಕಾಲೇಜುಗಳನ್ನು ಪ್ರಾರಂಭಿಸಲು ಸರ್ಕಾರ ಅನುಮತಿ ನೀಡುತ್ತಿದೆ. ಕೆಲವು ಸಚಿವರು ಅಥವಾ ಅವರ ಸಂಬಂಧಿಗಳು, ಶಾಸಕರುಗಳು ಈ ಹಂಚಿಕೆಯಲ್ಲಿ ಪಾಲುದಾರರು ಎನ್ನುವುದು ಸಾರ್ವಜನಿಕ ಸತ್ಯ. ಇದಕ್ಕೆ ಸಂಬಂಧಿಸಿದ ಕಾನೂನು ಸಹ ಸರ್ಕಾರದ ಕಪಿಮುಷ್ಟಿಯಲ್ಲಿದ್ದು ವಿಶ್ವವಿದ್ಯಾಲಯಗಳು ಹಾಗೂ ಶಿಕ್ಷಣವೇತ್ತರು ಉನ್ನತ ಶಿಕ್ಷಣ ಕ್ಷೇತ್ರದ ಮೇಲಾಗುತ್ತಿರುವ ಈ ಅತ್ಯಾಚಾರವನ್ನು ನೋಡಿಯೂ ನೋಡದಂತಿದ್ದಾರೆ.

ನಮ್ಮ ವಿಶ್ವವಿದ್ಯಾಲಯಗಳು ಸ್ವಾಯತ್ತ ಸಂಸ್ಥೆಗಳೆಂದು ಮತ್ತೆ ಮತ್ತೆ ಹೇಳಲಾಗುತ್ತಿದೆ. ಆದರೆ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಕಾಯ್ದೆ 1976ರ ಪ್ರಕಾರ ಯಾವುದೇ ಕಾಲೇಜನ್ನು ಪ್ರಾರಂಭಿಸುವ ಅಥವಾ ಅದಕ್ಕೆ ಮಾನ್ಯತೆ ನೀಡುವ ಹಕ್ಕು ಅಂತಿಮವಾಗಿ ಸರ್ಕಾರಕ್ಕೆ ಸೇರಿದೆ. ವಿಶ್ವವಿದ್ಯಾಲಯಗಳನ್ನು ಕೇಳದೆಯೂ ಸರ್ಕಾರ ಕಾಲೇಜುಗಳಿಗೆ ಅನುಮತಿ ನೀಡಿರುವುದು ಅಸಂಖ್ಯ ಬಾರಿ. ನಮ್ಮ ವಿಶ್ವವಿದ್ಯಾಲಯಗಳೂ ಇದರ ವಿರುದ್ಧ ಸೊಲ್ಲೆತ್ತುವ ಗೋಜಿಗೆ ಹೋಗಿಲ್ಲ.

**ಪರಿಣಾಮಗಳು** : ಮೇಲ್ಕಂಡ ಬೆಳವಣಿಗೆಗಳ ನೇರ ಹಾಗೂ ಆತಂಕಕಾರಿ ಪರಿಣಾಮ ರಾಜ್ಯದ ಸಾಂಪ್ರದಾಯಿಕ ಪದವಿ ಶಿಕ್ಷಣದ ಮೇಲೆ ಆಗಿದೆ. ಕಳೆದ ಮೂರು ನಾಲ್ಕು ವರ್ಷಗಳಿಂದ ರಾಜ್ಯದ ಪದವಿ ಕಾಲೇಜುಗಳಲ್ಲಿ, ಮುಖ್ಯವಾಗಿ ಭೌತಶಾಸ್ತ್ರ, ರಸಾಯನಶಾಸ್ತ್ರ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ ಮತ್ತು ವಾಣಿಜ್ಯ ವಿಭಾಗಗಳಲ್ಲಿ, ವಿದ್ಯಾರ್ಥಿಗಳ ಸಂಖ್ಯೆ ಗಣನೀಯವಾಗಿ ಇಳಿದಿದೆ. ಬೆಂಗಳೂರು; ಮೈಸೂರಿನಂಥ ದೊಡ್ಡ ನಗರಗಳಲ್ಲೂ ವಿಜ್ಞಾನದ ವಿಷಯಗಳಿಗೆ ವಿದ್ಯಾರ್ಥಿಗಳು ಸೇರುತ್ತಿಲ್ಲ. ಪದವಿ ಪೂರ್ವ ತರಗತಿಗಳಿಗೆ ಪ್ರವೇಶ ನೀಡುವಾಗ ಶೇ. 85-90 ಮತ್ತು ಅದಕ್ಕೂ ಹೆಚ್ಚು

**ಪ್ರೊ॥ ಟಿ. ವೆಂಕಟೇಶ ಮೂರ್ತಿ**

ಅಂಕಗಳನ್ನು ನಿಗದಿಗೊಳಿಸುವ ಗಣ್ಯ ವಿದ್ಯಾಸಂಸ್ಥೆಗಳು ಕೂಡ ಪದವಿ ತರಗತಿಗಳಿಗೆ ಪ್ರವೇಶ ನೀಡುವಾಗ ವಿಜ್ಞಾನ ವಿಷಯಗಳಲ್ಲಿ ಪದವಿ ಪೂರ್ವ ತರಗತಿಗಳಲ್ಲಿ ಮೂರನೇ ದರ್ಜೆಯಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೇ ಹೆಚ್ಚಿನ ಆದ್ಯತೆಯನ್ನು ನೀಡಲಾರಂಭಿಸಿವೆ. ಕಾರಣ ಹುಡುಕುವುದು ಕಷ್ಟವೇನಲ್ಲ. ಎಂಜಿನಿಯರಿಂಗ್ ಹಾಗೂ ವೈದ್ಯಕೀಯ ಕಾಲೇಜುಗಳ ಸಂಖ್ಯೆ ರಾಜ್ಯದಲ್ಲಿ ಗಣನೀಯವಾಗಿ ಹೆಚ್ಚಿರುವುದರಿಂದ ಕನಿಷ್ಠ ಎರಡನೇ ದರ್ಜೆಯಲ್ಲಿ ಪಿಯುಸಿ ಪಾಸಾದ ವಿದ್ಯಾರ್ಥಿಗೂ (ಅಪ್ಪನ ಜೇಬಿನಲ್ಲಿ ದುಡ್ಡಿದ್ದರೆ) ಒಂದಲ್ಲ ಒಂದು ಎಂಜಿನಿಯರಿಂಗ್ ಅಥವಾ ವೈದ್ಯಕೀಯ ಕಾಲೇಜಿನಲ್ಲಿ ಪ್ರವೇಶ ಸಿಗುತ್ತದೆ. ಪರಿಸ್ಥಿತಿ ಹೀಗಿರುವಾಗ ಪದವಿ ಕಾಲೇಜುಗಳಿಗೆ ವಿಜ್ಞಾನ ವಿಷಯಗಳಿಗೆ ಸೇರುವ ವಿದ್ಯಾರ್ಥಿಗಳು ಯಾರು ? ಇವರ ಗುಣಮಟ್ಟವೇನು ? ಮೂರನೇ ದರ್ಜೆಯಲ್ಲಿ ಪಾಸಾದ ವಿದ್ಯಾರ್ಥಿಗಳು ಹೆಸರಾಂತ ಕಾಲೇಜುಗಳಲ್ಲಿ ಪ್ರವೇಶ ಪಡೆದ ಮೇಲೆ ಉಳಿದ ಕಾಲೇಜುಗಳಿಗೆ ಎಷ್ಟು ವಿದ್ಯಾರ್ಥಿಗಳು ಸೇರುತ್ತಾರೆ? ಈಗಾಗಲೇ ಆ ಕಾಲೇಜುಗಳಲ್ಲಿ ಲಕ್ಷಾಂತರ ರೂಪಾಯಿಗಳ ವೆಚ್ಚದಲ್ಲಿ ಹುಟ್ಟಿಕೊಂಡಿರುವ ಪ್ರಯೋಗಶಾಲೆಗಳು, ಗ್ರಂಥಭಂಡಾರಗಳ ಗತಿ ಏನಾಗಬೇಕು ? ವಿಶ್ವವಿದ್ಯಾಲಯಗಳ ಸ್ನಾತಕೋತ್ತರ ವಿಭಾಗಗಳಿಗೆ ವಿದ್ಯಾರ್ಥಿ ಪೂರೈಕೆಯನ್ನು ಪದವಿ ಕಾಲೇಜುಗಳೇ ಮಾಡಬೇಕು. ಪದವಿ ಕಾಲೇಜುಗಳಿಗೇ ವಿದ್ಯಾರ್ಥಿಗಳು ಸಾಕಷ್ಟು ಸಂಖ್ಯೆಯಲ್ಲಿ ಇಲ್ಲದಿರುವಾಗ ಸ್ನಾತಕೋತ್ತರ ವಿಭಾಗಗಳಿಗೆ ವಿದ್ಯಾರ್ಥಿಗಳು ಎಲ್ಲಿಂದ ಸಿಗುತ್ತಾರೆ ? ವಿಶ್ವವಿದ್ಯಾಲಯಗಳ ವಿವಿಧ ವಿಭಾಗಗಳಲ್ಲಿ ಸಂಶೋಧನೆಗೆ ಭವಿಷ್ಯದಲ್ಲಿ ಎಷ್ಟು ವಿದ್ಯಾರ್ಥಿಗಳು ಲಭ್ಯವಾಗುತ್ತಾರೆ? ಅವರ ಗುಣಮಟ್ಟ ಹೇಗಿರುತ್ತದೆ ? ಈ ಎಲ್ಲ ಜ್ವಲಂತ ಸಮಸ್ಯೆಗಳನ್ನು ಸರ್ಕಾರವಾಗಲಿ ಅಥವಾ ವಿಶ್ವವಿದ್ಯಾಲಯಗಳಾಗಲಿ ಯೋಚಿಸಿದಂತೆಯೇ ಇಲ್ಲ. ಯಾವ ರೀತಿಯ ಕಾಳಜಿಯನ್ನೂ ತೋರಿಲ್ಲ. ಈ ವಿಷಯದ ಬಗ್ಗೆ ಭಾರತೀಯ ವಿಜ್ಞಾನ ಸಂಸ್ಥೆ ಸ್ವಲ್ಪ ಕಾಳಜಿ ವಹಿಸಿದೆ. ಪಿಯುಸಿಯಲ್ಲಿ ಮೊದಲ ಇಪ್ಪತ್ತು ಸ್ಥಾನಗಳನ್ನು ವಿಜ್ಞಾನ ವಿಷಯಗಳಲ್ಲಿ ಪಡೆದ ವಿದ್ಯಾರ್ಥಿಗಳಿಗೆ ಅವರು ಸಂಶೋಧನಾ ಪದವಿಯನ್ನು ಪಡೆಯುವವರೆಗೂ ವಿಶೇಷ ವಿದ್ಯಾರ್ಥಿ ವೇತನಗಳನ್ನು ನೀಡುವುದಾಗಿ ಈ ಸಂಸ್ಥೆ ಸಾಕಷ್ಟು ಪ್ರಚಾರವನ್ನು ನೀಡಿದೆ. ನಮ್ಮ ರಾಜ್ಯ ಸರ್ಕಾರ ಮತ್ತು ವಿಶ್ವವಿದ್ಯಾಲಯಗಳು ಕೂಡ ಈ ಮಾದರಿಯನ್ನು ಅನುಕರಿಸುವುದಕ್ಕೆ ಇನ್ನೆಷ್ಟು ಕಾಲ ಬೇಕೋ ಗೊತ್ತಿಲ್ಲ.

**ವಾಣಿಜ್ಯ ಶಾಸ್ತ್ರ** : ಪದವಿ ಪೂರ್ವ ಮತ್ತು ಪದವಿ ಹಂತಗಳಲ್ಲಿ ವಿಜ್ಞಾನ ವಿಷಯಗಳ ನಂತರ ಬೇಡಿಕೆಯಲ್ಲಿರುವುದು ವಾಣಿಜ್ಯ ಶಾಸ್ತ್ರ. ಕಳೆದ ಮೂರು-ನಾಲ್ಕು ವರ್ಷಗಳಿಂದ ಪದವಿ ಹಂತದಲ್ಲಿ ಈ ವಿಷಯಕ್ಕೆ ಬೇಡಿಕೆ ತಗ್ಗಿದ್ದರೂ ಸಂಪೂರ್ಣ ಅಳಿಸಿ ಹೋಗುವ ಸ್ಥಿತಿಯಲ್ಲಿಲ್ಲ. ಆದರೆ ಗ್ರಾಮೀಣ ವಲಯದಲ್ಲಿ ಮಾತ್ರ ಬಹುತೇಕ ಕಾಲೇಜುಗಳಲ್ಲಿ ಬೇಡಿಕೆ ಎಷ್ಟು ತಗ್ಗಿದೆ ಎಂದರೆ ಅನೇಕ ಕಾಲೇಜುಗಳಲ್ಲಿ ಈಗಾಗಲೇ ಬೆರಳೆಣಿಕೆಯಷ್ಟು ವಿದ್ಯಾರ್ಥಿಗಳು ಮಾತ್ರ ವಾಣಿಜ್ಯ ಶಾಸ್ತ್ರವನ್ನು ಕಲಿಯಲು ಮುಂದೆ ಬರುತ್ತಿದ್ದಾರೆ.

*(೫೦ನೇ ಪುಟಕ್ಕೆ ಮುಂದುವರಿದಿದೆ)*

### ಪ್ರೌಢಶಾಲೆಗಳಲ್ಲಿ ವಿಜ್ಞಾನದ ಭವಿಷ್ಯ

*ಪದವಿ ಹಂತದಲ್ಲಿ ವಿಜ್ಞಾನ ಕಲಿಕೆಗೆ ಸಾಕಷ್ಟು ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಮುಂದೆ ಬರದಿದ್ದಲ್ಲಿ ಉಂಟಾಗುವ ತೊಂದರೆಯ ಇನ್ನೊಂದು ಮಜಲನ್ನೂ ನೋಡಬಹುದು. ರಾಜ್ಯದ ಸಾವಿರಾರು ಪ್ರೌಢಶಾಲೆಗಳಲ್ಲಿ ಸಾಮಾನ್ಯ ವಿಜ್ಞಾನ ಕಲಿಕೆ ಕಡ್ಡಾಯವಾಗಿದೆ. ಇದು ಸಮಂಜಸವೂ ಹೌದು. ಶಾಲೆಗಳಲ್ಲಿ ವಿಜ್ಞಾನ ಬೋಧಕರು ಸಾವಿರಾರು ಸಂಖ್ಯೆಯಲ್ಲಿ ಬೇಕಿದ್ದು ಇವರೆಲ್ಲರೂ ಕಡ್ಡಾಯವಾಗಿ ಪದವಿ ಹಂತದಲ್ಲಿ ವಿಜ್ಞಾನದ ವ್ಯಾಸಂಗ ಮುಗಿಸಿ ಬಿ.ಎಡ್. ಪದವಿ ಪಡೆದವರಾಗಿರಬೇಕು. ಆದರೆ ಪದವಿ ಹಂತದಲ್ಲಿ ವಿಜ್ಞಾನದ ವಿದ್ಯಾರ್ಥಿಗಳು ಸಿಗುವುದೇ ದುರ್ಲಭವಾದರೆ ಪ್ರೌಢಶಾಲೆಗಳಲ್ಲಿ ವಿಜ್ಞಾನವನ್ನು ಕಲಿಸುವವರು ಇನ್ನು ಮುಂದೆ ಎಲ್ಲಿ ಸಿಗುತ್ತಾರೆ? ಕೆಲವೇ ವರ್ಷಗಳಲ್ಲಿ ನಮ್ಮ ಶಾಲೆಗಳಲ್ಲಿ ವಿಜ್ಞಾನವನ್ನು ಕಲಿಸುವವರೇ ಇರುವುದಿಲ್ಲ. ಸಿಗುವ ಕೆಲವರ ಗುಣಮಟ್ಟ, ವಿಜ್ಞಾನ ಕಲಿಕೆಯ ಗುಣಮಟ್ಟ ಏನಾಗಿರಬಹುದೆನ್ನುವುದು ಊಹಿಸಲಸಾಧ್ಯವೇನಲ್ಲ.*

## ಮೂರು ಆಟಂ ಬಾಂಬ್ ಕವಿತೆಗಳು



# ಎಲ್ಲಿ ಬೀಳಬಹುದು ಈ ಅಣುಬಾಂಬ್‌ಗಳು ?

ಎಲ್ಲಿ ಬೀಳಬಹುದು ಈ ಅಣುಬಾಂಬ್
ಅಥವಾ ಹೈಡ್ರೋಜನ್ ಬಾಂಬ್‌ಗಳು ?
ಸೈನ್ಯ ಅಥವಾ ಪೊಲೀಸರ ಮೇಲೆ
ಅಥವಾ ಯುದ್ಧ ಭೂಮಿಯ ಮೇಲೆ ?
ಇಲ್ಲ
ಈ ಬಾಂಬ್‌ಗಳು :
ದಟ್ಟ ಜನವಸತಿಯ ಮೇಲೆ ಬೀಳಲಿವೆ
ನಿರಪರಾಧಿ, ನಿರ್ದೋಷಿ ಮುಗ್ಧ
ಬಾಲಕರು ವೃದ್ಧರು ಹಾಗೂ ಹೆಂಗಸರುಗಳ
ಜೀವ ಇದರಿಂದ ಹೋಗಲಿದೆ

ಈ ಬಾಂಬ್‌ಗಳಿಂದ
ಬಿಸಿ ಬಿಸಿ ರಕ್ತದ ಕಾಲುವೆಗಳು ಹರಿಯಲಿವೆ
ಆ ಕಾಲುವೆಯಲಿ ನೆನೆದು ಸ್ನಾನಿಸಿ
ತನ್ನ ಆಕಾಂಕ್ಷೆಗಳು ಪೂರ್ತಿಯಾಗುತ್ತಿರುವುದನ್ನು
ಯುದ್ಧಬೇಕೆನ್ನುವವ ನೋಡುತ್ತ
ಸಂತೋಷಿಸುತ್ತಿದ್ದಾನೆ.

ಹತ್ತು ಇಪ್ಪತ್ತು ಇಪ್ಪತ್ತೈದು ಐವತ್ತು
ಮನಸ್ಸಿಗೆ ಕುಷ್ಠ ಹತ್ತಿದ ಇಂತಹ
ಜನರಿಗಾಗಿ ಮಾನವತೆಯ ಶ್ವಾಸ ತಣ್ಣಗಾಗುತ್ತಿದೆ

ಎಲ್ಲಿ ಬೀಳಬಹುದು ಈ ಅಣುಬಾಂಬ್
ಅಥವಾ ಹೈಡ್ರೋಜನ್ ಬಾಂಬ್‌ಗಳು ?

ಶೃಂಗರಿಸಿದ ನಗರಗಳ ಮೇಲೆ, ಶಾಂತ ರಮ್ಯ
ವಾಗಿರುವ ಹಳ್ಳಿಗಳ ಮೇಲೆ
ಹೊಲ, ಗದ್ದೆ, ಹಸಿರು ಹಸಿರು ಕಾಡುಗಳ ಮೇಲೆ
ಸುಂದರ ಕಲಾತ್ಮಕ ಜಗತ್ತನ್ನು ನಿರ್ಮಾಣ
ಮಾಡುತ್ತ ತನ್ನನ್ನು ತಾನು ಕಳೆದುಕೊಂಡ
ಸಾವಿರಾರು ಕಾರ್ಮಿಕರ ದಂಡಿನ ಮೇಲೆ

ಸಾವಿರಾರು ವರ್ಷಗಳಿಂದ ಜೋಪಾನವಾಗಿರಿಸಿದ
ಜಗತ್ಪ್ರಸಿದ್ಧ ಶಿಲ್ಪಕೃತಿಗಳ ಚಮತ್ಕಾರಗಳ ಮೇಲೆ

ಸೋಮನಾಥನ ಮೇಲೆ
ವಿಶ್ವನಾಥನ ಮೇಲೆ
ಉಜ್ಜಯನಿಯ ಮಹಾಕಾಲೇಶ್ವರನ ಮೇಲೆ
ಕರ್ನಾಟಕದ ಆ ಪ್ರಚಂಡ ಗೊಮ್ಮಟನ ಮೇಲೆ
ಸಾರನಾಥದ ಹೊಸದಾಗಿ ಕಟ್ಟಿಸಿದ ಆ ಸುಂದರ
ವಿಹಾರಗಳ ಮೇಲೆ

ನೃತ್ಯದಲ್ಲಿ ಜಗತ್ತನ್ನೇ ಮರೆತ
ಝಾರಖಂಡದ ಸಂತಾಲರ ಮೇಲೆ
ರವೀಂದ್ರರ ವಿಶ್ವಭಾರತಿ ಕಲಾ ಕೇಂದ್ರದ ಮೇಲೆ
ನಿಸರ್ಗ ರಮ್ಯ ನರ್ಮದೆಯ ತೀರದ ಮೇಲೆ
ಭೂಸ್ವರ್ಗವಾಗಿರುವ ಕಾಶ್ಮೀರದ ಮೇಲೆ

ಕೇರಳ ಕೊಂಕಣ ಕಚ್ಛ ಕೊಡಗು
ಕಾಮರೂಪಿ ಕಾಠೇವಾಡಿಗಳ ಮೇಲೆ

ಭಾರತದ ಸಣ್ಣ ಪುಟ್ಟ ಎಲ್ಲ ಸ್ಥಳಗಳ ಮೇಲೆ
ವರ್ಕ್‌ಶಾಪ್ ಪ್ರಕೃತಿಗಳ ಮೇಲೆ
ಮಠ ಮಸೀದಿ ಗುರುದ್ವಾರಗಳ ಮೇಲೆ

ಸಿಟ್ಟಿನಿಂದ ದ್ವೇಷದಿಂದ ಹಲ್ಲು ಮಸೆಯುತ್ತ
ನಮ್ಮದೇ ಕೈಗಳಿಂದ ನಮ್ಮ ಅಣ್ಣ ತಮ್ಮಂದಿರ ಮೇಲೆ

ಅಣುಬಾಂಬ್ ಹೈಡ್ರೋಜನ್ ಬಾಂಬ್‌ಗಳ
ಮಳೆಯನ್ನು ನಾವು ಸುರಿಸುವವರಿದ್ದೇವೆ

ಕೇಳಿಸುತ್ತಿದೆಯೇ ಯಾರಿಗಾದರೂ
ಯಾರಿಗಾದರೂ ಕೇಳಿಸುತ್ತಿದೆಯೇ
ನನ್ನ ಧ್ವನಿಯಲ್ಲಿಯ

ಸರ್ವನಾಶದ ಸ್ವರ ?

- ಮೂಲ ಹಿಂದಿ : ನಾಗಾರ್ಜುನ
ಕನ್ನಡಕ್ಕೆ : ಸರಜೂ ಕಾಟ್ಕರ್

# ಹಿರೋಶಿಮಾದ ನೋವು

ಒಂದೊಂದು ರಾತ್ರಿ ನಿದ್ರೆಯಲ್ಲಿಂದ
ದಿಗಿಲಾಗಿ ನಾನು ಎಚ್ಚರಗೊಳ್ಳುತ್ತೇನೆ;

ಮನಸ್ಸು ವಿಷಾದಗೊಳ್ಳುತ್ತದೆ
ನನ್ನಲ್ಲಿಯೇ ನಾನು ವಿಚಾರ ಮಾಡಹತ್ತುವೆ:

ಅಣುಬಾಂಬ್‌ಗಳನ್ನು ಶೋಧಿಸಿದ
ವಿಜ್ಞಾನಿಗಳು ಹಿರೋಶಿಮಾ ನಾಗಸಾಕಿಗಳ
ನರ ಸಂಹಾರದ ಸುದ್ದಿ ಕೇಳಿ
ರಾತ್ರಿ ಹೇಗೆ ನಿದ್ದೆ ಮಾಡಿರಬಹುದು ?

ಹಲ್ಲಿನ ನೋವು
ಕಣ್ಣಿನ ಕಿರಿಕಿರಿ
ಕಾಲಿಗೆ ಚುಚ್ಚಿದ ಮುಳ್ಳು
ಗಳೇ ಹತ್ತಿದ ನಿದ್ರೆ
ಕೆಡಿಸುತ್ತಿರುವಾಗ

ಸಂಬಂಧಿಕರ ಸಾವು
ಪ್ರಿಯರ ಅಗಲಿಕೆ
ಪರಿಚಿತರು ಒಮ್ಮಿಂದೊಮ್ಮೆಲೆ ಇಲ್ಲವಾಗುವುದು
ಅಷ್ಟೇ ಏಕೆ, ಸಾಕಿದ ಪ್ರಾಣಿಗಳ
ಮರಣಾಂತಿಕ ಆರ್ತನಾದ
ಹೃದಯವನ್ನು ಹಿಂಡಿ ಹಿಪ್ಪಿ ಮಾಡುತ್ತಿರುವಾಗ
ನಿದ್ರಿಸಬೇಕೆಂದರೂ ಹತ್ತಿರ ನಿದ್ರೆ ಸುಳಿಯುವುದಿಲ್ಲ

ಕೇವಲ ಮಗ್ಗಲುಗಳನ್ನು
ಬದಲಿಸುತ್ತ ರಾತ್ರಿ ಸರಿದು ಹೋಗುತ್ತದೆ

ಯಾರ ಶೋಧನೆಯಿಂದ ಈ ಅಂತಿಮ
ಅಸ್ತ್ರ ಹುಟ್ಟಿತೋ

ಆಗಸ್ಟ್ 6, 1945ರ ಕಾಳರಾತ್ರಿಯಲಿ
ಎರಡು ಲಕ್ಷಕ್ಕೂ ಮಿಕ್ಕಿ ಜನರ
ಮೃತ್ಯುವಾಗಿ ತಾಂಡವವಾಡಿತೋ

ಸಾವಿರಾರು ಜನರನ್ನು
ಅಂಗವಿಕಲರನ್ನಾಗಿಸಿತೋ

ಆ ವಿಜ್ಞಾನಿಗಳಿಗೆ
ಕ್ಷಣವಾದರೂ ತಮ್ಮಿಂದ
ಘೋರ ಅಪರಾಧವಾಯಿತೆಂದು
ಅನ್ನಿಸಿರಬಹುದೇ ?

ತಾವು ಮಾಡಿದ್ದು ಮನುಕುಲಕ್ಕೆ
ಬಗೆದ ದ್ರೋಹವೆಂದು ಅವರೂ
ಮಿಡುಕಾಡಿರಬಹುದೇ ?

ಒಂದು ವೇಳೆ ಹೀಗೆ ಅನ್ನಿಸಿದ್ದರೆ ಅವರಿಗೆ
ಕಾಲ ಅವರನ್ನು ನ್ಯಾಯದ
ಕಟಕಟೆಯಲ್ಲಿ ನಿಲ್ಲಿಸುವುದು

ಒಂದು ವೇಳೆ ಹೀಗೆ ಅನ್ನಿಸದಿದ್ದರೆ
ಇತಿಹಾಸ ಎಂದೂ ಅವರನ್ನು
ಕ್ಷಮಿಸಲಾರದು

ಮೂಲ ಹಿಂದಿ : ಅಟಲ್ ಬಿಹಾರಿ ವಾಜಪೇಯಿ
ಕನ್ನಡಕ್ಕೆ : ಸರಜೂ ಕಾಟ್ಕರ್

## ಅಂತಿಮ ಸ್ಫೋಟ

ಆ ಅಂತಿಮ ಸ್ಫೋಟದ ನಂತರ
ಕೇವಲ ಮನುಷ್ಯರಷ್ಟೇ ಸಾಯುವುದಿಲ್ಲ
ಸಾಯಲಿವೆ:

ತಾಜಮಹಾಲ್ ಮತ್ತು ಕೈಲಾಸ್
ಶೇಕ್ಸ್‌ಪಿಯರ್ ಮತ್ತು ಕಾಲಿದಾಸ್

ಸಾವಿರಾರು ವರ್ಷಗಳಿಂದ ಕಟ್ಟಿ
ನಿಲ್ಲಿಸಿದ ಚಂದ್ರನವರೆಗೆ ಹೋಗಿಬಂದ
ಜ್ಞಾನ ವಿಜ್ಞಾನದ ಗಗನಗಾಮಿ ಸ್ತಂಭಗಳು

ಬುದ್ಧ ಕ್ರಿಸ್ತ ಮಹಾತ್ಮರುಗಳು
ಕೋಟ್ಯಾಂತರ ಮನಸ್ಸುಗಳಲ್ಲಿ ಕಟ್ಟಿದ
ಕರುಣೆಯ ಮಂದಿರಗಳು

ನಂತರ

ಪೃಥ್ವಿಯ ಮೇಲೆ ಕೇವಲ
ವಿರಾಟ ಬ್ರಹ್ಮಾಂಡದ ಬೂದಿಯಷ್ಟೇ ಉಳಿಯುವುದು
ಖಂಡಿತ



ಕೋಟ್ಯಾಂತರ ಶತಕಗಳ ಮೊದಲು ಇದ್ದ ಸ್ಮಶಾನ ಮೌನದ
ಎರಡನೆಯ ಆಯಾಮ ಮತ್ತೆ ಆರಂಭಗೊಳ್ಳಬಹುದು

ಲಕ್ಷ ಲಕ್ಷ ವರ್ಷಗಳ ನಂತರ ಹೀಗೂ
ಆಗಬಹುದು: ಆ ಬೂದಿಯಿಂದಲೇ
ಅಜಿಂಕ್ಯ ಜೀವದ ಆಸೆಯನ್ನಿಟ್ಟುಕೊಂಡ
ಒಂದು ಹಸಿರು ಕೊಂಬೆ ಹೊರ ಕಾಣಸಬಹುದು

ಯಾವುದೋ ದಾವಾಗ್ನಿಯಿಂದ ಎದ್ದು
ಹೊರಬಂದ ಒಂದು ಅಮೀಬಾ
ಮತ್ತೆ ಉತ್ಕ್ರಾಂತಿಯ ಮೊದಲ
ಘಟ್ಟ ಆರಂಭಿಸಬಹುದು.

ಮೂಲ ಮರಾಠಿ : **ಕುಸುಮಾಗ್ರಜ**
ಕನ್ನಡಕ್ಕೆ : **ಸರಜೂ ಕಾಟ್ಕರ್**

ಡಾ॥ ಸರಜೂ ಕಾಟ್ಕರ್
'ಕಾವ್ಯ', ಬೆಳಗಾವಿ - 590 016

## ಬೆಳಕ ಕಳಚಿದ ಸಂಜೆಗಳು

ಎರಡೆರಡು ಸಾರಿ ಜನಿಸಿ
ಹೊಸೆದುಕೊಟ್ಟರಿ ಮಥಿಸಿ :
ನಿಮ್ಮ ಸ್ಮೃತಿ - ನಮ್ಮ ವಿಧಿ
ಓ ಮನುಮತೀಯರೇ! ನಿಮ್ಮ ಹಳ್ಳಿ
–ನಮ್ಮ ಝುಗ್ಗಿ ಅದರ ಅಂಚಿನಲ್ಲಿ
ಬೆಳಕ ಕಳಚಿದ ನಮ್ಮೀ ಬಾಳಿನ ಸಂಜೆಗಳ
ನಾವೇ ನೋಡುತ್ತ ಅಲ್ಲಿ
ಕಳೆದಿರುವೆವು ಸಹಸ್ರ ಸಹಸ್ರ ವರುಷಗಳ
ಸುಟ್ಟುಹೋಗಿವೆ ನಮ್ಮ ಕಾಯಗಳು
ಸತ್ವವಿರದಾ ನಿಮ್ಮ ತತ್ವಪುರಾಣಗಳೂ
ಇಕ್ಕಿದಾ ಉರಿಯಲ್ಲಿ
ಲೆಕ್ಕವಿದೆಯೇ ಅದಕೆ ? ಎಲ್ಲಿ?

**- ಬಿ. ಜೋಷಿ** (1986)
(ಅನು : **ಎಸ್. ಗುರುದತ್**)

# ಕಸೋವೊ ಪ್ರಕರಣ - ಒಂದು ಎಚ್ಚರಿಕೆಯ ಗಂಟೆ

ಸಿ. ಆರ್. ಕೃಷ್ಣರಾವ್

ಪೂರ್ವ ಯೂರೋಪಿನ ರಾಷ್ಟ್ರ ಯುಗೋಸ್ಲಾವಿಯ ಶೀತಲ ಯುದ್ಧದ ಕಾಲದಲ್ಲಿ ಅಲಿಪ್ತ ಚಳವಳಿಯಲ್ಲಿ ಪ್ರಮುಖ ಪಾತ್ರವಹಿಸಿದ್ದ ದೇಶ. ಇಂದು ಏಕಶಕ್ತಿ ಕೇಂದ್ರೀಯ ಜಗತ್ತಿನಲ್ಲಿ ಒಂದು ಬಗೆಯಲ್ಲಿ ಏಕಾಂಗಿ. ಇತ್ತೀಚೆಗಷ್ಟೇ ಸುಮಾರು ಅರವತ್ತು ದಿನಗಳು ಸತತವಾಗಿ ಅಮೆರಿಕದ ಬಾಂಬು ದಾಳಿಗೀಡಾಗಿ ಮಣಿದಿರುವ ದೇಶ. ಅದು ಎಸಗಿದ ಅಪರಾಧ ಅಮೆರಿಕದ ಆಣತಿಯಂತೆ ನಡೆದುಕೊಳ್ಳದೇ ಹೋದದ್ದು. ತಮ್ಮ ದೇಶದ ಗಡಿ ಪ್ರಾಂತ ಕಸೋವೊದ ಅಲ್ಪಸಂಖ್ಯಾತ ಜನಾಂಗೀಯರ ಪ್ರಶ್ನೆಯನ್ನು ಅದು ತನ್ನದೇ ಆದ ರೀತಿಯಲ್ಲಿ ಬಗೆಹರಿಸಲು ಪ್ರಯತ್ನಿಸಿದ್ದು. ಅಮೆರಿಕ ಯುಗೋಸ್ಲಾವಿಯಾದ ಮೇಲೆ ಕೈಗೊಂಡ ಉಗ್ರಕ್ರಮಕ್ಕೆ ಯಾವುದೇ ಅಂತರರಾಷ್ಟ್ರೀಯ ಒತ್ತಡವಾಗಲಿ, ವಿಶ್ವಸಂಸ್ಥೆಯ ಅನುಮೋದನೆಯಾಗಲಿ ಇರಲಿಲ್ಲ. ಮಾಮೂಲಿನಂತೆ ಮಾನವ ಹಕ್ಕುಗಳ ಉಲ್ಲಂಘನೆ, ಬರ್ಬರತೆಯ ಆಪಾದನೆ ಹೊರೆಸಿ, ಅಮಾಯಕ ಅಲ್ಪಸಂಖ್ಯಾತರನ್ನು ಕಾಪಾಡುವ ಹೆಸರಿನಲ್ಲಿ ನಡೆಸಿದ ದಾಳಿ ಅದು. ತನ್ನ ಮಿಲಿಟರಿ ಕೂಟ 'ನ್ಯಾಟೋ' ಬಳಸಿಕೊಂಡು ಅಮೆರಿಕ ನಡೆಸಿದ ವೈಮಾನಿಕ ದಾಳಿ ಎಂಟು ವರ್ಷಗಳ ಹಿಂದೆ ಇರಾಕಿನ ಮೇಲಿನ ದಾಳಿಯನ್ನು ನೆನಪಿಗೆ ತರುತ್ತಿತ್ತು. ಮಿಲಿಟರಿ ಠಾಣೆಗಳ ಮೇಲೆ ಮಾತ್ರವೇ ಕ್ರಮ ಎಂದು ಹೇಳಿಕೊಂಡರೂ, ಯುಗೋಸ್ಲಾವಿಯಾದ ನಗರಗಳು, ನಾಗರಿಕ ಬಡಾವಣೆಗಳು, ಆಸ್ಪತ್ರೆಗಳು, ಶಾಲೆಗಳು, ಸಾರ್ವಜನಿಕ ಕಟ್ಟಡಗಳು ಅಮೆರಿಕದ ಬಾಂಬುದಾಳಿಗೆ ಗ್ರಾಸವಾದುವು. ಅಮೆರಿಕದ ಈ ದೌರ್ಜನ್ಯ ವಿರೋಧಿಸಿ ಪ್ರತಿಭಟನೆ ವ್ಯಕ್ತಪಡಿಸಿದ್ದು ರಷ್ಯ, ಚೀಣ ಮತ್ತು ಭಾರತ ಮಾತ್ರ. ಅಲಿಪ್ತರಾಷ್ಟ್ರಗಳೂ ಚಕಾರವೆತ್ತಲಿಲ್ಲ. ಈ ದಶಕದ ಪ್ರಾರಂಭದಲ್ಲಿ ಸೋವಿಯೆತ್ ಒಕ್ಕೂಟದ ವಿಸರ್ಜನೆಯ ನಂತರ ಜಗತ್ತಿನಲ್ಲಿ ಅತ್ಯಂತ ಪ್ರಬಲ ಶಕ್ತಿಕೇಂದ್ರವಾಗಿ ಅಮೆರಿಕ ಉದಯಿಸಿರುವುದರ ಪರಿಣಾಮ ಇದು.

ನ್ಯಾಟೋ ಧಾಳಿಯಿಂದ ತೈಲ ಶುದ್ಧೀಕರಣ ಸ್ಥಾವರಕ್ಕೆ ಬೆಂಕಿ.
ಜನ ಡಾನ್ಯೂಬ್ ನದಿಯನ್ನು ದಾಟಲು ಧಾವಿಸುತ್ತಿದ್ದಾರೆ.



ತನ್ನ ಹಿತಾಸಕ್ತಿಯನ್ನು ಕಾಪಾಡಿಕೊಳ್ಳುವ ಹೆಸರಿನಲ್ಲಿ ಅಮೆರಿಕ ಏನುಬೇಕಾದರೂ ಮಾಡಿ ಪಾರಾಗಬಲ್ಲುದು ಎನ್ನುವುದಕ್ಕೆ ಯುಗೋಸ್ಲಾವಿಯದ ಪ್ರಕರಣ ಇನ್ನೊಂದು ಸಾಕ್ಷಿ. ಆಧುನಿಕ ತಂತ್ರಜ್ಞಾನದಿಂದ ಸಜ್ಜಿತವಾಗಿರುವ ವಿಮಾನಗಳಿಂದ ಪ್ರಪಂಚದ ಯಾವುದೇ ದೇಶದ ಮೇಲೂ ಹೆಚ್ಚು ನಷ್ಟ ಅನುಭವಿಸದೆ ದಾಳಿ ನಡೆಸುವ ಸಾಮರ್ಥ್ಯವನ್ನು ತಾನು ಹೊಂದಿರುವುದನ್ನು ಅಮೆರಿಕ ಮತ್ತೊಮ್ಮೆ ಸಾಬೀತು ಮಾಡಿದೆ. ವಿಶ್ವಶಾಂತಿ ಮತ್ತು ಭದ್ರತೆಯನ್ನು ಕಾಪಾಡಲು ಬದ್ಧವಾಗಿರುವ ವಿಶ್ವಸಂಸ್ಥೆ ಇಂದು ನಿರ್ವೀರ್ಯಗೊಂಡಿದೆ. ಅಮೆರಿಕದ ಪ್ರಭಾವಕ್ಕೀಡಾಗಿರುವ ಕೈಗೊಂಬೆಯ ಸ್ಥಿತಿಗೆ ಇಳಿದಿದೆ. ಅಂತರರಾಷ್ಟ್ರೀಯ ಪೋಲೀಸನಂತೆ ವರ್ತಿಸುವ ಅಮೆರಿಕಾಗೆ ಕಡಿವಾಣವೇ ಇಲ್ಲದಂತಾಗಿದೆ. ತಮ್ಮ ಸ್ವಾತಂತ್ರ್ಯ ಸಾರ್ವಭೌಮತ್ವಗಳನ್ನು ಎತ್ತಿ ಹಿಡಿಯಬಯಸುವ ತಮ್ಮ ಭವಿಷ್ಯವನ್ನು ತಾವೇ ರೂಪಿಸಿಕೊಳ್ಳ ಬಯಸುವ ದೇಶಗಳು ಈ ಪರಿಸ್ಥಿತಿಯನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆ. ಯುಗೋಸ್ಲಾವಿಯದ ಮೇಲೆ ದಾಳಿ ನಡೆಸುತ್ತಿದ್ದ ಸಂದರ್ಭದಲ್ಲಿ ಜರುಗಿದ 'ನ್ಯಾಟೋ' ಕೂಟದ ಸಭೆ ಅಂಗೀಕರಿಸಿದ ನಿರ್ಣಯವೊಂದರ ಪ್ರಕಾರ ಮಾನವ ಹಕ್ಕುಗಳ ರಕ್ಷಣೆಗಾಗಿ, ಅಲ್ಪಸಂಖ್ಯಾತ ಜನಾಂಗೀಯರ ರಕ್ಷಣೆಗಾಗಿ 'ನ್ಯಾಟೋ' ಅಗತ್ಯವಾದ ಕ್ರಮಗಳನ್ನು ಕೈಗೊಳ್ಳುವ ಅಧಿಕಾರ ಹೊಂದಿರುತ್ತದೆ. ಭಾರತ ಇದರ ಗೂಡಾರ್ಥವನ್ನು ಗಮನಿಸುವುದು ಅತ್ಯವಶ್ಯ. ಅಮೆರಿಕ ನಿರ್ಧರಿಸಿದಲ್ಲಿ ನಾಳೆ ಕಾಶ್ಮೀರದ ಪ್ರಶ್ನೆಯಲ್ಲೂ ನೇರವಾಗಿ ಪ್ರವೇಶಿಸಬಹುದು. ತನ್ನ ಆರ್ಥಿಕ ಹಾಗೂ ಮಿಲಿಟರಿ ಪ್ರಾಬಲ್ಯವನ್ನು ಸ್ವೇಚ್ಛೆಯಾಗಿ ಉಪಯೋಗಿಸುವ ಉದ್ಧಟತನವನ್ನು ಅಮೆರಿಕ ಬೆಳೆಸಿಕೊಂಡಿರುವುದು ನಿಜಕ್ಕೂ ಅಪಾಯಕಾರಿ.

ಇರಾಕಿನ ಮೇಲೆ ಅಮೆರಿಕ ದಾಳಿ ನಡೆಸಿದಾಗ ಅಮೆರಿಕಾಗೆ ವಿಶ್ವಸಂಸ್ಥೆಯ ಅಂಗೀಕಾರವಿತ್ತು. ಕುವೇತನ್ನು ಆಕ್ರಮಿಸಿಕೊಂಡಿದ್ದ ಇರಾಕ್ ತಪ್ಪಿತಸ್ಥ ರಾಷ್ಟ್ರವಾಗಿತ್ತು. ಆದರೆ ಕುವೇತಿನ ವಿಮೋಚನೆಯ ನಂತರವೂ ಪಾಠ ಕಲಿಸಲು ಅಮೆರಿಕ ಇರಾಕಿನ ಮೇಲೆ ನಡೆಸಿದ ಭೀಕರ ಬಾಂಬುದಾಳಿ ಅಕ್ಷಮ್ಯ. ಹಾಗೆಯೇ ಯುಗೋಸ್ಲಾವಿಯಾದ ಮೇಲೆ ನಡೆಸಿದ ದಾಳಿಯೂ ಅಕ್ಷಮ್ಯ. ಇರಾಕಿನ ಅಧ್ಯಕ್ಷ ಸದ್ದಾಮ್ ಹುಸೇನ್‌ನಂತೆಯೇ ಯುಗೋಸ್ಲಾವಿಯಾದ ಸ್ಲೋವೊದಾನ್ ಮಿಲೋಸೆವಿಕ್ ಅಮೆರಿಕಾಗೆ ಅಪಥ್ಯ. ಆಲ್ಬೇನಿಯ ಮೂಲದವರೇ ಅಧಿಕ ಸಂಖ್ಯೆಯಲ್ಲಿರುವ ಪ್ರಾಂತ ಕಸೋವೊ ಆಲ್ಬೇನಿಯದ ಗಡಿಯಲ್ಲಿದೆ. ಈ ಗಡಿ ಪ್ರಾಂತದಲ್ಲಿ ಪ್ರತ್ಯೇಕವಾದಿಗಳಿಂದ ಸಶಸ್ತ್ರ ಬಂಡಾಯ. ಇದಕ್ಕೆ 'ನ್ಯಾಟೋ' ಕುಮ್ಮಕ್ಕು ಇದೆಯೆಂದು ಯುಗೋಸ್ಲಾವಿಯಾದ ಶಂಕೆ. ಎರಡನೆಯ ಮಹಾಯುದ್ಧದ ನಂತರ ಸ್ವತಂತ್ರ ರಾಷ್ಟ್ರವಾಗಿ ಉದಯಿಸಿದ ಯುಗೋಸ್ಲಾವಿಯಾದ ಅಧ್ಯಕ್ಷ ಟೀಟೋ ನಾಯಕತ್ವದಲ್ಲಿ ಸೋವಿಯೆತ್ ಒಕ್ಕೂಟದಿಂದ ದೂರವಿದ್ದು ಅಲಿಪ್ತ ನೀತಿ ಅನುಸರಿಸಿದ ದೇಶ. ವಿಭಿನ್ನ ಜನಾಂಗಗಳನ್ನೊಳಗೊಂಡ ಈ ದೇಶ ಟೀಟೋ ನಿಧನಾನಂತರ ಈಚಿನ ವರ್ಷಗಳಲ್ಲಿ ಛಿದ್ರಗೊಂಡಿತು. ಬೋಸ್ನಿಯ ಮತ್ತು ಕ್ರೊಯೇಷಿಯ ಪ್ರತ್ಯೇಕಗೊಂಡುವು. ಕಸೋವೊ ಅದೇ ಹಾದಿಯಲ್ಲಿರುವುದನ್ನು ತಡೆಯಲು ಸರಕಾರದ ದಬ್ಬಾಳಿಕೆ. ಈ ಸಂಘರ್ಷದ ಪರಿಣಾಮ ನಿರಾಶ್ರಿತರ ವಲಸೆ. ಯುಗೋಸ್ಲಾವಿಯ ಕಸೋವೊಗೆ ಸ್ವಾಯತ್ತತೆ ನೀಡಲು

(ಮುಂದಿನ ಪುಟಕ್ಕೆ ಮುಂದುವರಿದಿದೆ)

**ಕೇಂದ್ರ ಸರ್ಕಾರದ ಇತ್ತೀಚಿನ ಕೆಲವು ನಡವಳಿಕೆಗಳು ಕಾಶ್ಮೀರದ ಪ್ರಶ್ನೆ ಅಂತರರಾಷ್ಟ್ರೀಯ ಮಧ್ಯವರ್ತಿಗಳ ಕೈಗೆ ಹೋಗುವಂತೆ ಮಾಡುತ್ತಿವೆ. ಈ ಹಿನ್ನೆಲೆಯಲ್ಲಿ ಕಸೋವೊ ಘಟನೆಗಳನ್ನು ತಿಳಿದು ಮುಂಜಾಗ್ರತೆ ವಹಿಸುವುದು ಅವಶ್ಯಕ.**

ಇನ್ನೊಂದು ತೈಲ ಶುದ್ಧೀಕರಣ ಸ್ಥಾವರಕ್ಕೆ ನ್ಯಾಟೋ ಬೆಂಕಿ.
ಇದು ನೋವೀ ಸಾದ್‌ನಲ್ಲಿರುವುದು.



# ನ್ಯಾಟೋ ಮತ್ತು ನರಕ

ಟಿ. ಆರ್. ಅನಂತರಾಮು

ಕಸೋವೊ ಮೇಲೆ ಮಾಡಿದ ಎರಡು ತಿಂಗಳ ನ್ಯಾಟೊ ಧಾಳಿ ಮೇಲುನೋಟಕ್ಕೆ ಸ್ಥಗಿತವಾಗಿರುವಂತೆ ಕಂಡರೂ ಅದು ಯುಗೋಸ್ಲಾವಿಯ ಸೇರಿದಂತೆ ನೆರೆಹೊರೆಯ ಸಣ್ಣಪುಟ್ಟ ಪ್ರಾಂತ್ಯಗಳ ಮೇಲೆ ಬೀರಿರುವ ಭವಿಷ್ಯದ ಪರಿಣಾಮ ಅನೂಹ್ಯ.

ನ್ಯಾಟೋ ಪಡೆ ಹಾಗೂ ಬ್ರಿಟಿಷ್ ಪಡೆಗಳು ಸರ್ಬಿಯನ್ನರನ್ನು ಸದೆಬಡಿಯುವ ಅವಸರದಲ್ಲಿ ಕಸೋವೊದಲ್ಲಿ ಎಸಗಿರುವ ಇತ್ತೀಚಿನ ಅಪಚಾರ ತತ್‌ಕ್ಷಣ ಎದ್ದುಕಾಣದು; ಅದರ ಪರಿಣಾಮ ಪ್ರಕಟಗೊಳ್ಳಲು ಮುಂದಿನ ಕೆಲವು ವರ್ಷಗಳು ಬೇಕು. ಈ ಪಡೆಗಳು ಯುಗೋಸ್ಲಾವಿಯದ ಮೇಲೆ ಸತತ ಷೆಲ್ಲಿನ ಮಳೆಗರೆದಿವೆ. ಅವು ಪರಮಾಣು ಬಾಂಬುಗಳಲ್ಲ, ನಿಜ, ಆದರೆ ಅವುಗಳಷ್ಟೇ



*ಯುರೇನಿಯಂ ಬಳಸಿ ತಯಾರಿಸಿದ ಷೆಲ್*

ಅಪಾಯಕಾರಿ. ಈ ಸಲ ಧಾಳಿಗೆ ಬಳಸಿರುವ ಷೆಲ್‌ಗಳಲ್ಲಿ ವಿಕಿರಣ ಸೂಸುವ ಯುರೇನಿಯಂ ಧಾತುವಿದೆ. ನ್ಯೂಕ್ಲಿಯರ್ ಬಾಂಬ್ ತಯಾರಿಕೆಯಲ್ಲಿ, ನ್ಯೂಕ್ಲಿಯರ್ ಶಕ್ತಿಯ ಸ್ಥಾವರದಲ್ಲಿ ಯುರೇನಿಯಮ್ (ಯು-235) ಬಳಸಿದ ನಂತರ ಉಳಿದ ಪದಾರ್ಥವನ್ನು ಡಿಪ್ಲೀಟೆಡ್ ಯುರೇನಿಯಮ್ (ಡಿಯು) ಎನ್ನುತ್ತಾರೆ (ಯು-238). ಉಪ ಉತ್ಪನ್ನವಾಗಿ ಪಡೆಯುವ ಈ ಪದಾರ್ಥವನ್ನು ಅನೇಕ ದೇಶಗಳು ಧಾರಾಳವಾಗಿ ಹೊಂದಿವೆ; ಅಷ್ಟು ದುಬಾರಿಯೂ ಅಲ್ಲ. ಇದರಿಂದ ಮಾಡಿದ ಷೆಲ್‌ಗಳು ಅಧಿಕ ಸಾಂದ್ರತೆ ಹೊಂದಿರುತ್ತವೆ. ಅಷ್ಟೇ ಗಡುಸಾಗಿಯೂ ಇರುತ್ತವೆ. ಧಾಳಿ ಮಾಡಿದಾಗ ಉಕ್ಕಿನ ಟ್ಯಾಂಕ್‌ಗಳನ್ನೂ ಭೇದಿಸಿ ಹೊರಬರುವ ಸಾಮರ್ಥ್ಯ ಹೊಂದಿವೆ. ಸಾಮಾನ್ಯವಾಗಿ ಟಂಗ್‌ಸ್ಟನನ್ನು ಕಾಠಿಣ್ಯ ಕೊಡಲು ಬಳಸುವುದುಂಟು. ಷೆಲ್‌ಗಳ ಸಾಮರ್ಥ್ಯಕ್ಕಿಂತ ಹೆಚ್ಚು ಆತಂಕ ಒಡ್ಡಿರುವುದು ಅವುಗಳಲ್ಲಿರುವ ವಿಕಿರಣ ಪಟುತ್ವದ ಯುರೇನಿಯಮ್. ವಿಕಿರಣ ಒಂದು ದಿನ ಅಥವಾ ಒಂದು ವರ್ಷಕ್ಕೆ ಕೊನೆಗೊಳ್ಳುವಂತಹುದಲ್ಲ. ಮಿಲಿಯನ್ ವರ್ಷಗಟ್ಟಲೆ ಅವು ವಿಕಿರಣ ಸೂಸುತ್ತಲೇ ಇರುತ್ತವೆ. ಪರಿಣಾಮ ಬಲು ಘೋರ. ಹಂತ ಹಂತದ ಸಾವು, ಬದುಕಿನುದ್ದಕ್ಕೂ ನರಳಾಟ. ಮನುಕುಲಕ್ಕೇ ಶಾಪ.

ಇಂಥ ಷೆಲ್‌ಗಳನ್ನು ಅಮೆರಿಕ 1991ರ ಕೊಲ್ಲಿ ಯುದ್ಧದಲ್ಲಿ ಬಳಸಿತ್ತೆಂದು ಅಲ್ಲಿನ ರಕ್ಷಣಾ ಇಲಾಖೆಯೇ ಒಪ್ಪಿಕೊಂಡಿದೆ. ಆಗ ಇರಾಕ್ ಮೇಲೆ ಅಮೆರಿಕ 8,60,000 ಸುತ್ತು ಷೆಲ್ ಧಾಳಿ ಮಾಡಿದೆ; ಇದರಲ್ಲಿ 290 ಟನ್ ಡಿಯು ಬಳಸಿದೆ. ಒಂದು ಅಂದಾಜಿನ ಪ್ರಕಾರ ಆರು ಲಕ್ಷ ಸೈನಿಕರೂ, ಸಾರ್ವಜನಿಕರೂ ಈ ವಿಕಿರಣದ ಅಪಾಯಕ್ಕೆ ಒಡ್ಡಿಕೊಳ್ಳುವ ಸಾಧ್ಯತೆ ಇದೆ. ಈಗಾಗಲೇ ಇರಾಕ್ ಸೈನಿಕರಲ್ಲಿ, ವಿಶೇಷವಾಗಿ ದಕ್ಷಿಣ ಭಾಗದಲ್ಲಿ, ಕ್ಯಾನ್ಸರ್ ಪ್ರಕರಣ ಹೆಚ್ಚಾಗಿರುವುದನ್ನು ವರದಿಗಳು ತಿಳಿಸಿವೆ.

ನ್ಯಾಟೋ ಮತ್ತು ಬ್ರಿಟಿಷ್ ಪಡೆಗಳು ಯುಗೋಸ್ಲಾವಿಯದ ಮೇಲೆ ಯುರೇನಿಯಮ್ ಬಳಸಿದ ಷೆಲ್ ಧಾಳಿ ಮಾಡಿವೆ ಎಂದು ಒಪ್ಪಿಕೊಂಡಿವೆ. 'ಇದು ಪಾದರಸಕ್ಕಿಂತ ಹೆಚ್ಚು ಅಪಾಯಕಾರಿಯೇ ಎಂದು ಯಾರಾದರೂ ಖಚಿತವಾಗಿ ಹೇಳಿದ್ದಾರೆಯೇ', ಎಂಬ ಹೊಣೆಗೇಡಿ ಹೇಳಿಕೆಯನ್ನು ನ್ಯಾಟೋ ಪ್ರತಿನಿಧಿಗಳು ನೀಡಿದ್ದಾರೆ. ರಾಸಾಯನಿಕವಾಗಿ 'ಡಿಯು' ಎಂಬುದು ಮೂತ್ರಪಿಂಡವನ್ನು ಬಹುತೇಕ ಹಾನಿಮಾಡಬಲ್ಲದು. ಅಲ್ಪ ಪ್ರಮಾಣದ ವಿಕಿರಣ ಶರೀರವನ್ನು ಹೊಕ್ಕರೂ ಕ್ಯಾನ್ಸರ್ ತಪ್ಪಿದ್ದಲ್ಲವೆಂದು ಬ್ರಿಟನ್ನಿನ ಪರಮಾಣು ಶಕ್ತಿ ಇಲಾಖೆ ಎಚ್ಚರಿಸಿದೆ. ಕುವೈತ್‌ನಲ್ಲಿ ಬ್ರಿಟನ್ ಎಸಗಿದ ಅಧ್ವಾನವನ್ನು ಸರಿಮಾಡಲು ಅಲ್ಲಿಗೆ ಒಂದು ತಂಡವನ್ನು ಕಳಿಸಿ ವಿಕಿರಣಪಟು ಯುರೇನಿಯಮ್ ಬಳಸಿದ ಷೆಲ್‌ಗಳಿಂದ ಸೃಷ್ಟಿಯಾದ ಕಸವನ್ನು ಗುಡಿಸಿಹಾಕುವುದಾಗಿ ಆಶ್ವಾಸನೆಯನ್ನೇನೋ ಅದು ನೀಡಿತು. ಅದನ್ನು ಎಂದೂ ಕಾರ್ಯರೂಪಕ್ಕೆ ತರಲೇ ಇಲ್ಲ. ಕೊಲ್ಲಿ ಯುದ್ಧದಲ್ಲಿ 23 ಟನ್ನು ಡಿಯು ಬಳಸಲಾಗಿದೆ ಎಂಬುದನ್ನು ಬ್ರಿಟನ್ನಿನ ಸಮೀಕ್ಷೆಯೊಂದು ದೃಢಪಡಿಸಿದೆ. ಇದರ ಅರ್ಥ ಸುಸ್ಪಷ್ಟ. ಮುಂದೆ ಐದು ಲಕ್ಷ ಮಂದಿಯನ್ನು ಇದು ಬಲಿ ತೆಗೆದುಕೊಳ್ಳುವ ಸಾಧ್ಯತೆ ಇದೆ.

*(ಆಧಾರ: ನ್ಯೂ ಸೈಂಟಿಸ್ಟ್‌ನ ವರದಿ)*

ಶ್ರೀ ಟಿ. ಆರ್. ಅನಂತರಾಮು
ನಂ. 3871, 2ನೇ ಹಂತ, 13ನೇ ಮೇನ್, ಕುಮಾರಸ್ವಾಮಿ ಲೇ ಔಟ್, ಬೆಂಗಳೂರು - 560 078

---

*(ಹಿಂದಿನ ಪುಟದಿಂದ ಮುಂದುವರಿದಿದೆ)*

ಸಿದ್ಧವಾಗಿತ್ತು, ವಿಶ್ವಸಂಸ್ಥೆಯ ಮಧ್ಯಸ್ತಿಕೆಯಲ್ಲಿ. ಆದರೆ 'ನ್ಯಾಟೋ' ಪಡೆಗಳ ಮೇಲ್ವಿಚಾರಣೆಗೆ ಸಮ್ಮತಿಸಲಿಲ್ಲ. ಇದೇ ಅಮೆರಿಕದ ದಾಳಿಗೆ ಮೂಲಕಾರಣ. ಏಕಾಂಗಿಯಾಗಿ ಅಮೆರಿಕ ಹಾಗೂ 'ನ್ಯಾಟೋ' ದಾಳಿಯನ್ನು ಸಹಿಸಿದ ಯುಗೋಸ್ಲಾವಿಯ ಕೊನೆಗೆ ಅಮೆರಿಕ ವಿಧಿಸಿದ ಷರತ್ತುಗಳನ್ನು ಅಂಗೀಕರಿಸಬೇಕಾಯಿತು. ಈಗ 'ನ್ಯಾಟೋ' ಸೇನೆ ಮತ್ತು ಕಾಡಿಬೇಡಿದ ರಷ್ಯನ್ ಸೇನೆ ಕಸೋವೊದಲ್ಲಿ ಶಾಂತಿ ಸ್ಥಾಪನೆಗೆ ಪ್ರವೇಶಿಸಿವೆ. ಇದು ಇಂದಿನ ಸ್ಥಿತಿ.

ಅಮೆರಿಕದ ಆಡಳಿತೆ ಇಂಥ ಮಿಲಿಟರಿ ಕಾರ್ಯಾಚರಣೆಗಳನ್ನು ನಡೆಸುವುದರಲ್ಲಿ ಒಂದು ರೀತಿಯ ಸರ್ವಾಧಿಕಾರವನ್ನೇ ಪಡೆದಿದೆ. ಬಹುತೇಕ ಅಮೆರಿಕನ್ ಶಾಸಕರು ಬೆಂಬಲಿಸದಿದ್ದರೂ ಆಡಳಿತೆ ತಾನು ಕೈಗೊಂಡ ಕ್ರಮವನ್ನು ಮುಂದುವರಿಸುತ್ತದೆ. ವಿಯೆಟ್ನಾಮ್ ಯುದ್ಧದ ಕಾಲದಿಂದ ನಡೆದುಕೊಂಡು ಬಂದಿರುವ ರೀತಿ ಇದು. ಕಸೋವೊದ ಮೇಲೆ ನಡೆಸಿದ ದಾಳಿಯೂ ಇಂಥದೆ. ಬಾಂಬು ಧಾಳಿ ನಡೆಸಿ ಕಷ್ಟನಷ್ಟಗಳನ್ನುಂಟುಮಾಡಿದ ಅಮೆರಿಕದ ಅಧ್ಯಕ್ಷ ಕ್ಲಿಂಟನ್ ಯುದ್ಧಾಪರಾಧಿಯಲ್ಲ. ಆದರೆ ದಾಳಿಗೀಡಾದ ಯುಗೋಸ್ಲಾವಿಯದ ಅಧ್ಯಕ್ಷ ಮಿಲೋಸೆವಿಕ್ ಯುದ್ಧಾಪರಾಧಿ. ಅಂತರರಾಷ್ಟ್ರೀಯ ನ್ಯಾಯಾಲಯವು ಏಕಪಕ್ಷೀಯವಾಗಿ ಈ ತೀರ್ಪನ್ನು ನೀಡಿದೆ. ಆಪಾದನೆಯನ್ನು ಮಾಡಿದ್ದು ಅಮೆರಿಕ. ತೀರ್ಪು ನೀಡುವವರು ಕೂಡ ಅಮೆರಿಕದ ಮರ್ಜಿಗೆ ತಕ್ಕಂತೆ ವರ್ತಿಸಿರುವುದು ದುರಂತ. ಪ್ರಬಲ ರಾಷ್ಟ್ರವೊಂದು ತನಗಿಷ್ಟಬಂದಂತೆ ಅಂತರರಾಷ್ಟ್ರೀಯ ಸಂಸ್ಥೆಗಳನ್ನು ಬಳಸಿಕೊಳ್ಳುತ್ತಿರುವುದಕ್ಕೆ ಇದೂ ಒಂದು ನಿದರ್ಶನ. ಅಮೆರಿಕ ಯುಗೋಸ್ಲಾವಿಯದ ಮೇಲೆ ದಾಳಿ ನಡೆಸಿ ಯೂರೋಪಿಯನ್ ಒಕ್ಕೂಟದ ರಾಷ್ಟ್ರಗಳಿಗೂ ತನ್ನ ಪ್ರಾಬಲ್ಯದ ಬಗ್ಗೆ ಎಚ್ಚರಿಸಿದೆ. ತನ್ನ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಅಮೆರಿಕ ಏನೂ ಮಾಡಲು ಸಿದ್ಧವಿದೆ ಎಂದು ಎಚ್ಚರಿಸಿದೆ. ಇದು ಎಲ್ಲ ಸ್ವತಂತ್ರರಾಷ್ಟ್ರಗಳೂ ಗಮನಿಸಬೇಕಾದ ಅಪಾಯಕಾರಿ ಬೆಳವಣಿಗೆ.

ಸಿ. ಆರ್. ಕೃಷ್ಣರಾವ್, 849, 6ನೇ ಕ್ರಾಸ್, 1ನೇ ಮೇನ್ ಬನಶಂಕರಿ 3ನೇ ಹಂತ,
3ನೇ ಫೇಜ್, 3ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - 560 085



# ಬುದ್ಧನ ಇನ್ನೊಂದು ಕಥೆ

*ಎರಡು ಸಾವಿರದ ಐನೂರು ವರ್ಷಗಳ ಹಿಂದಿನ ಗೌತಮ ಬುದ್ಧನ ಜೀವನದಲ್ಲಿ ನಡೆದಿರಬಹುದಾದ ಎಲ್ಲ ಘಟನೆಗಳ ಸನ್ನಿವೇಶಗಳನ್ನೂ ಈಗ ಲಭ್ಯವಿರುವ ಪಾಲಿ ಸಾಹಿತ್ಯವು ಪೂರ್ಣವಾಗಿ ದಾಖಲಿಸುತ್ತದೆಂದು ಹೇಳಲಾಗದು. ಭಾರತದ ಹೊರಗೆ ಮಾತ್ರ ಬೌದ್ಧ ವಲಯಗಳಲ್ಲಿ ಪ್ರಚಲಿತವಾಗಿರುವ ಕಥೆಯನ್ನು ವಿಶ್ಲೇಷಿಸಿಕೊಳ್ಳಬೇಕಾದ ಅಗತ್ಯವಿದೆ.*

ಗೌತಮ ಬುದ್ಧನಿಗೆ ವೈರಾಗ್ಯ ಉಂಟಾದುದಕ್ಕೆ ಮೂರು ಕಾರಣಗಳನ್ನು ಸರ್ವೇ ಸಾಮಾನ್ಯವಾಗಿ ಪ್ರಪಂಚದಾದ್ಯಂತವೂ ಪ್ರಶ್ನಾತೀತವಾಗಿಯೂ ಪ್ರಚುರಪಡಿಸಿಕೊಂಡು ಬರಲಾಗಿದೆ. ಆ ಮೂರು ಕಾರಣಗಳೆಂದರೆ ಅ) ಸಾವು, ಆ) ವೃದ್ಧಾಪ್ಯ ಮತ್ತು ಇ) ರೋಗರುಜಿನ. ಮಾನವ ಜನಾಂಗದ ನಡುವೆ ಈ ಮೂರು ಸ್ಥಿತಿಗಳನ್ನು ಕಂಡು ಸಿದ್ಧಾರ್ಥ ಗೌತಮನಲ್ಲಿ ಕೇವಲ ಇಪ್ಪತ್ತೊಂದನೆಯ ವಯಸ್ಸಿಗೇ ವೈರಾಗ್ಯ ಉಂಟಾಗಿ, ತತ್ಪರಿಣಾಮವಾಗಿ ಸತಿ ಸುತರನ್ನೂ ಸಕಲ ಸಾಮ್ರಾಜ್ಯವನ್ನೂ ತೊರೆದು ತಪಸ್ಸಿಗಾಗಿ ಕಾಡಿಗೆ ಹೋದನೆಂಬ ಕಥೆಯನ್ನು ಬಹುಶಃ ಪ್ರಪಂಚದ ಎಲ್ಲ ಭಾಷೆಗಳಲ್ಲೂ ಪ್ರಚುರಪಡಿಸಲಾಗಿದೆ. ಅಲ್ಲದೆ, ಈ ಕಥೆ ಎಷ್ಟೊಂದು ಅನೂಚಾನವಾಗಿಯೂ, ಅವಿಚ್ಛಿನ್ನವಾಗಿಯೂ ಸಾವಿರಾರು ವರ್ಷಗಳಿಂದಲೂ ಜನಮನದಲ್ಲಿ ಬೆಳೆದುಕೊಂಡು ಬಂದಿದೆ ಎಂದರೆ, ಈ ಕಥೆಯನ್ನು ಹೊರತುಪಡಿಸಿ ಬುದ್ಧನ ಬಗೆಗೆ ಇನ್ನೇನನ್ನೂ ಹೇಳಲು ಸಾಧ್ಯವಿಲ್ಲವೆಂಬಂಥ ಸ್ಥಿತಿ ನಿರ್ಮಾಣವಾದಂತೆ ತೋರುತ್ತದೆ. ಆದಾಗ್ಯೂ ಅದಕ್ಕೆ ವಿರುದ್ಧವಾಗಿ 2000 ವರ್ಷಗಳಷ್ಟು ಪ್ರಾಚೀನವಾದ ಇನ್ನೊಂದು ಕಥೆ ಇದೆ ಮತ್ತು ಇನ್ನು ಬಹಳ ಕಾಲ ಆ ಅಜ್ಞಾತ ಕಥೆಯನ್ನು ಬಚ್ಚಿಡುವುದೂ ಸಾಧ್ಯವಿಲ್ಲ. ಹತ್ತಿಕ್ಕಲೂ ಸಾಧ್ಯವಿಲ್ಲ.

ಮೇಲೆ ಸೂಚಿಸಿರುವ ಮೂರು ಕಾರಣಗಳಿಗಾಗಿಯೇ ಸಿದ್ಧಾರ್ಥ ಗೌತಮನಲ್ಲಿ ವೈರಾಗ್ಯ ಉಂಟಾಗಿ ತಪಸ್ಸಿಗೆ ಹೋದನೆಂಬ ಕಥೆಯನ್ನು ಅಂಬೇಡ್ಕರರಂತೂ ಖಡಾಖಂಡಿತವಾಗಿ ತಿರಸ್ಕರಿಸುತ್ತಾರೆ. ಅವರು ಕೇವಲ ಬುದ್ಧಧರ್ಮ ಪ್ರಿಯರಾಗಿ ಮಾತ್ರ ಈ ಸಾಂಪ್ರದಾಯಿಕ ಕಥೆಯನ್ನು ತಿರಸ್ಕರಿಸುವುದಿಲ್ಲ. ಬದಲಾಗಿ, ಮೂಲತಃ ಅವರೊಬ್ಬ ಸಂಶೋಧಕರೂ ಸಾಹಿತ್ಯದ ವಿದ್ಯಾರ್ಥಿಯೂ ಆಗಿ ಮತ್ತು ಪ್ರಪಂಚದ ಮಾನವ ಸಂಸ್ಕೃತಿಯ ಜಿಜ್ಞಾಸುವಾಗಿಯೂ ಈ ಕಥೆಯನ್ನು ತಿರಸ್ಕರಿಸುತ್ತಾರೆ. ಹಾಗೆ ತಿರಸ್ಕರಿಸಿದ ಅಂಬೇಡ್ಕರರು ಆ ಬಗ್ಗೆ ಪ್ರಪಂಚದ ಮುಂದೆ ತುಂಬಾ ಕುತೂಹಲಕಾರಿಯಾದ ಒಂದು ಪ್ರಶ್ನೆಯನ್ನಿಡುತ್ತಾರೆ. "ಸಿದ್ಧಾರ್ಥನು ಒಬ್ಬ ಮೃತ ವ್ಯಕ್ತಿಯನ್ನೂ, ಒಬ್ಬ ರೋಗಿಷ್ಠನನ್ನೂ ಮತ್ತೊಬ್ಬ ಅತಿವೃದ್ಧನನ್ನೂ ನೋಡಿದ್ದರಿಂದಲೇ ಲೌಕಿಕ ಜೀವನದ ಬಗೆಗೆ ಅವನಲ್ಲಿ ವೈರಾಗ್ಯ ಉಂಟಾಯಿತೆಂದು ಸಾಂಪ್ರದಾಯಿಕ ಚರಿತ್ರೆಯು ಉದ್ದಕ್ಕೂ ಹೇಳಿಕೊಂಡು ಬರಲಾಗಿದೆ. ಆದರೆ, ಅವನು ಪರಿವ್ರಾಜಕ ದೀಕ್ಷೆ ತೆಗೆದುಕೊಂಡ ತನ್ನ ಇಪ್ಪತ್ತೊಂದನೆಯ ವಯಸ್ಸಿನವರೆಗೂ, ಸತ್ತವರನ್ನೂ, ರೋಗಿಗಳನ್ನೂ ವೃದ್ಧರನ್ನೂ, ಎಲ್ಲೂ ನೋಡಿಯೇ ಇರಲಿಲ್ಲವೆನ್ನುವ ಈ ಚರಿತ್ರೆಯನ್ನು ನಂಬುವುದಾದರೂ ಹೇಗೆ?" ಇದು ತಾರ್ಕಿಕವಾದ ಪ್ರಶ್ನೆ.

ಆದ್ದರಿಂದ ಇಲ್ಲಿ ಹೇಳಬೇಕಾಗಿರುವ ಆ ಅಜ್ಞಾತ ಕಥೆಯನ್ನು ಕೇವಲ ಕೆಲವೇ ವಾಕ್ಯಗಳಲ್ಲಿ ಹೇಳಿ, ಆ ನಂತರ ಆ ಬಗೆಗೆ ಸ್ವಲ್ಪ ಚರ್ಚೆಯಲ್ಲಿ ತೊಡಗಬಹುದಾಗಿದೆ. ಮೇಲೆ ಹೇಳಿರುವ ಮೂರು ಕಾರಣಗಳಿಗಾಗಿ ಸಿದ್ಧಾರ್ಥ ಗೌತಮನಿಗೆ ವೈರಾಗ್ಯವುಂಟಾಗಿ, ಅವನು ಕಾಡಿಗೆ ಹೋಗಲಿಲ್ಲ; ಬದಲಾಗಿ, ಅವನದೇ ದೇಶದ ಪಾರ್ಲಿಮೆಂಟ್‌ನ ಮತೀಯ ಶಕ್ತಿಗಳು ಅವನ ಮೇಲೆ ದೇಶದ್ರೋಹದ ಅಪವಾದವನ್ನು ಹೊರಿಸಿ, ಅವನಿಗೆ ಗಡೀಪಾರು ಶಿಕ್ಷೆ ವಿಧಿಸಿತು. ಯಾರೇ ಆದರೂ ಒಪ್ಪದಿರಲಿಕ್ಕೆ ಸಾಧ್ಯವೇ ಇಲ್ಲದ ಈ ಸತ್ಯ ಕಥೆಯನ್ನು ಇನ್ನಾದರೂ ಬೆಳಕಿಗೆ ತರಬೇಕಾಗಿದೆ.

ದೊರೆ ಶುದ್ಧೋದನನ ಸಾಮ್ರಾಜ್ಯವಾದ ಶಾಕ್ಯ ಸಾಮ್ರಾಜ್ಯ ಮತ್ತು ಅವನ ನೆರೆ ರಾಜ್ಯವಾದ ಕೋಲಿಯ ಸಾಮ್ರಾಜ್ಯ - ಈ ಎರಡೂ ಸಾಮ್ರಾಜ್ಯಗಳ ಗಡಿ ಪ್ರಾಂತದಲ್ಲಿ ಹರಿಯುವ ರೋಹಿಣೀ ನದಿ ನೀರಿನ ಹಂಚಿಕೆಯ ವಿಷಯದಲ್ಲಿ, ಈ ಎರಡೂ ಸಾಮ್ರಾಜ್ಯಗಳ ನಡುವೆ ಅವರೆಗೂ ನಡೆದಿದ್ದ ಹಲವಾರು ಭೀಕರ ಯುದ್ಧಗಳಿಂದಾಗಿ, ಸಹಸ್ರ ಸಹಸ್ರ ಮಾನವ ನರಮೇಧವೇ ಆಗಿರುತ್ತದೆ. ಹೀಗಿರುವಲ್ಲಿ, ಈ ಅಮಾಯಕರ ಹತ್ಯಾಕಾಂಡದ ಘೋರ ಇತಿಹಾಸವನ್ನು ಬಲ್ಲವನೂ, ಕಂಡವನೂ ಆದ ಸಿದ್ಧಾರ್ಥ ಗೌತಮನಿಗೆ ತನ್ನ ಇಪ್ಪತ್ತೊಂದನೆ ವಯಸ್ಸಿಗೆ, ಶಾಕ್ಯರ ಸಂಪ್ರದಾಯದ ಪ್ರಕಾರ ಶಾಕ್ಯ ಸಂಘದ (ಶಾಕ್ಯ ಸಂಘ ಎಂದರೆ ಶಾಕ್ಯರ ಪಾರ್ಲಿಮೆಂಟು ಎಂಬುದನ್ನು 'ಮಹಾಪರಿನಿರ್ವಾಣ' ಸೂಕ್ತವೂ ಸೇರಿದಂತೆ ಸೂಕ್ತಗಳಲ್ಲಿ ಕಾಣಬಹುದಾಗಿದೆ ಮತ್ತು ಈ ಸಂಬಂಧವಾದ ವಿವರಗಳನ್ನು ಅಂಬೇಡ್ಕರರು ಕೂಡ ಭಾರತ ಸಂವಿಧಾನ ರಚನಾ ಸಮಿತಿಯಲ್ಲಿಯೂ ವಿವರಿಸಿರುವುದನ್ನು ಕಾಣಬಹುದಾಗಿದೆ) ಸದಸ್ಯತ್ವದ ದೀಕ್ಷಾಬೋಧನೆಯಾಗುತ್ತದೆ. ಅದಾದ ಅನತಿ ಕಾಲದಲ್ಲೇ ಈ ಮಾನವ

**ಡಾ॥ ಮ. ನ. ಜವರಯ್ಯ**

ಹತ್ಯಾಕಾಂಡದ ಮೂಲವಾದ ಜಲವಿವಾದದ ಯುದ್ಧ ಇನ್ನೆಂದೂ ನಡೆಯದಂತೆ ತಡೆಯಲೇಬೇಕೆಂದು ಸಿದ್ಧಾರ್ಥನು ಧೀರ ಸಂಕಲ್ಪವನ್ನೇ ಮಾಡುತ್ತಾನೆ. ಕಾಕತಾಳೀಯವೋ ಎಂಬಂತೆ ಇದಾದ ಕೇವಲ ಸ್ವಲ್ಪ ಕಾಲದಲ್ಲೇ ಕೋಲಿಯಾ ಸಾಮ್ರಾಜ್ಯದ ಸೈನಿಕರಿಂದ ಶಾಕ್ಯ ಸಾಮ್ರಾಜ್ಯದ ಗಡಿಯಲ್ಲಿ ಯುದ್ಧ ಪ್ರಚೋದನೆಯಾಗಿಬಿಡುತ್ತದೆ.

ಯಥಾಪ್ರಕಾರ ಶಾಕ್ಯ ಸಂಘವು ಯುದ್ಧ ಘೋಷಣೆಯನ್ನು ಸ್ವೀಕರಿಸುವ ಸಲುವಾಗಿ ಸಂಘದ ತುರ್ತು ಸಭೆಯನ್ನು ಕರೆಯುತ್ತದೆ. ಈ ಸಂಘದ ನೂತನ ಪ್ರತಿನಿಧಿ ಸದಸ್ಯನಾದ ಸಿದ್ಧಾರ್ಥನು ಯುದ್ಧ ಈಗ ಅನಿವಾರ್ಯವಲ್ಲವೆಂತಲೂ, ಜಲವಿವಾದ ಈ ಯುದ್ಧದ ಮೂಲವಾಗಿದೆಯೆಂತಲೂ, ಆದ್ದರಿಂದ ತಮ್ಮೆರಡು ನಾಡುಗಳ ನಡುವೆ ಪರಸ್ಪರ ಮಾತುಕತೆಯ ಮೂಲಕ ಈ ವಿವಾದವನ್ನು ಇತ್ಯರ್ಥಪಡಿಸಿಕೊಳ್ಳುವ ಯುದ್ಧಪೂರ್ವ ಪ್ರಯತ್ನಗಳನ್ನು ಮೊದಲು ಕೈಗೊಳ್ಳಬೇಕೆಂತಲೂ, ಬಹುವಿಧದಲ್ಲಿ, ಆ ಸಭೆಯಲ್ಲಿ ವಾದಿಸುತ್ತಾನೆ. ಸಿದ್ಧಾರ್ಥನು ಮಹಾಮುನಿ ಭರತವ್ಯಾಸರ ಶಿಷ್ಯನೂ, ಯುದ್ಧವೀರನೂ ಸಕಲಶಾಸ್ತ್ರಗಳನ್ನು ಬಲ್ಲ ಜ್ಞಾನಿಯೂ ಆದುದರಿಂದ, ಅವನು ಮಾಡಿರುವ ಈ ಸಲಹೆಯ ಮಾತುಕಥೆಯ ವಿಧಾನವನ್ನು ವಿವರಿಸಲು ಸಂಘವು ಅವನಿಗೆ ಅನುಮತಿಯನ್ನು ನೀಡುತ್ತದೆ. ಆಗ ಸಿದ್ಧಾರ್ಥನು ಈ ಕುರಿತ ಮಾತುಕತೆಗಾಗಿ ಐವರು ಪರಿಣಿತರ ಒಂದು ಸಮಿತಿಯನ್ನು ರಚಿಸಬೇಕೆಂದೂ, ಆ ಸಮಿತಿಯಲ್ಲಿ ಶಾಕ್ಯರಿಂದ ಇಬ್ಬರು, ಕೋಲಿಯರಿಂದ ಇಬ್ಬರು ಮತ್ತು ಐದನೆಯ ಸದಸ್ಯನನ್ನು ಪಾಂಚಾಳ ಅಥವಾ ಮೌರ್ಯ ಸಾಮ್ರಾಜ್ಯದಿಂದ ಆಯ್ಕೆ ಮಾಡಿಕೊಳ್ಳಬಹುದೆಂತಲೂ, ರೋಹಿಣಿ ನದಿಯ ನೀರನ್ನು ಕೃಷಿಗಾಗಿ, ತಮ್ಮೆರಡು ಸಾಮ್ರಾಜ್ಯಗಳಲ್ಲಿ, ಯಾರ್‍ಯಾರು ಎಷ್ಟೆಷ್ಟು ಮತ್ತು ಯಾರು ಮೊದಲು ಬಳಸಬೇಕೆಂಬ ಬಗ್ಗೆ ಆ ಐವರು ಪರಿಣತರ ಸಮಿತಿಯ ಬಹುಮತದ ಅಭಿಪ್ರಾಯ ಹೇಗೆ ಬರುತ್ತದೆಯೋ ಹಾಗೆ ತಮ್ಮೆರಡು ಸಾಮ್ರಾಜ್ಯಗಳೂ ನಡೆದುಕೊಳ್ಳುವುದು ಉಚಿತವಾಗುತ್ತದೆ ಎಂಬುದಾಗಿ ಸಲಹೆ ಮಾಡುತ್ತಾನೆ.

ಅಂತೆಯೇ ಸಿದ್ಧಾರ್ಥನ ಈ ಸಲಹೆಯ ಬಗ್ಗೆ ಸಂಘದ ಆ ತುರ್ತುಸಭೆಯಲ್ಲಿ ಬೇಕಾದಷ್ಟು ಚರ್ಚೆಯಾಗಿ, ಅವನ ಈ ಸಲಹೆಯನ್ನು ಸಂಘ ಇನ್ನೇನು ಅಂಗೀಕರಿಸಬೇಕೆಂಬಷ್ಟರಲ್ಲಿ ಮೊದಲೇ ರಾಜಕೀಯ ಪಿತೂರಿಯ ಜಾಲವನ್ನೇ ರಚಿಸಿ ಸಮಯಕ್ಕಾಗಿ ಕಾಯುತ್ತಿದ್ದ ಅದೇ ಶಾಕ್ಯ ಸಾಮ್ರಾಜ್ಯದ ಮಹಾಮಂತ್ರಿ ಉದಯಿನ್, ಸೇನಾಪತಿ ಯೋಧನೇತ ಮತ್ತು ಕಪಿಲವಸ್ತುವಿನ ಆಡಳಿತಾಧಿಕಾರಿಯಾದ ನೀತಿಚಂದ್ರ, ಈ ಮೂವರೂ ಸೇರಿ ಸಿದ್ಧಾರ್ಥ ಗೌತಮನ ಸಲಹೆಯನ್ನು ಅತ್ಯಂತ ಯಶಸ್ವಿಯಾಗಿ ಸೋಲಿಸಿದುದೇ ಅಲ್ಲದೆ, ಅವನ ಮೇಲೆ ಎರಡು ಆರೋಪಗಳನ್ನು ಹೊರಿಸುತ್ತಾರೆ. ಮೊದಲನೆಯದಾಗಿ ದೇಶದ್ರೋಹದ ಆರೋಪ, ಎರಡನೆಯದಾಗಿ ಸ್ವಜನ ಪಕ್ಷಪಾತದ ಆರೋಪ. ಅಂತೆಯೇ ಸಿದ್ಧಾರ್ಥ ಗೌತಮನ ಮೇಲಿನ ಈ ಎರಡು

ಆರೋಪಗಳ ಪಟ್ಟಿಯನ್ನು ಸೇನಾಪತಿ ಯೋಧನೇತ ಶಾಕ್ಯರ ಆ ಪಾರ್ಲಿಮೆಂಟ್ ಮುಂದೆ ಹೀಗೆ ವಿವರಿಸುತ್ತಾನೆ:

ಮೊದಲನೆಯದಾಗಿ, ಶಾಕ್ಯರ ನೀತಿಸಂಹಿತೆಯ ಪ್ರಕಾರ, ಜೀವ, ಜಲ ಮತ್ತು ನೆಲರಕ್ಷಣೆ ಪ್ರತಿಯೊಬ್ಬ ಶಾಕ್ಯನ ಪ್ರಥಮ ಕರ್ತವ್ಯ ಎಂಬುದಾಗಿ ಶಾಕ್ಯ ಸಂಘದ ಪ್ರತಿಯೊಬ್ಬ ಸದಸ್ಯನಿಗೂ ವಸುಮಂಗಳೆಯ ಹೆಸರಿನಲ್ಲಿ ಪ್ರಮಾಣವಚನ ನೀಡಲಾಗುತ್ತದೆ. **ಅಂತೆಯೇ ದೇಶ ಈಗ ಗಂಡಾಂತರ ಸ್ಥಿತಿಯಲ್ಲಿರುವಾಗ ದೇಶ ರಕ್ಷಣೆ ಸಿದ್ಧಾರ್ಥನ ಪ್ರಥಮ ಕರ್ತವ್ಯವಾಗಬೇಕಿತ್ತು. ಆದರೆ ಯುದ್ಧ ಈಗ ಅನಿವಾರ್ಯವಲ್ಲವೆಂಬ ಸಲ್ಲದ ಕಾರಣವನ್ನು ಮುಂದೆ ಮಾಡಿ, ಸಿದ್ಧಾರ್ಥನು ಕರ್ತವ್ಯದಿಂದ ಪಲಾಯನ ಮಾಡುತ್ತಿದ್ದಾನೆ. ಹಾಗೆ ಮಾಡುವುದರಿಂದ ಅವನು ಶತ್ರುವಿಗೆ ಪರೋಕ್ಷವಾಗಿ ನೆರವಾಗುತ್ತಿದ್ದಾನೆ. ಆದಾಗಿ ಶಾಕ್ಯರ ನೀತಿ ಸಂಹಿತೆಯ ಪ್ರಕಾರ ಸಿದ್ಧಾರ್ಥನು ಎಸಗಿರುವುದು ದೇಶದ್ರೋಹದ ಒಂದು ಘೋರ ಅಪರಾಧವಾಗಿದೆ.**

ಇನ್ನು ಎರಡನೆಯದಾಗಿ ಯುದ್ಧಪೂರ್ವದ ಪ್ರಯತ್ನದ ಹೆಸರಿನಲ್ಲಿ, ಆ ಕುರಿತ ಪರಿಣತರ ಮಾತುಕತೆಯ ಸಲುವಾಗಿ, ಗೌತಮನು ಸಲಹೆ ಮಾಡಿರುವ ಐದು ಜನ ಪರಿಣತರ ಸಮಿತಿಯಲ್ಲಿ ಇಬ್ಬರನ್ನು ಕೋಲಿಯಾ ನಾಡಿನಿಂದಲೂ ಐದನೆಯ ಸದಸ್ಯನನ್ನು ಪಾಂಚಾಳ ಅಥವಾ ಮೌರ್ಯ ನಾಡಿನಿಂದಲೂ ಆಯ್ಕೆ ಮಾಡಿಕೊಳ್ಳುವುದು ಎಂಬುದಾಗಿಯೂ ಸಲಹೆ ಮಾಡಿದ್ದಾನೆ. ಆದರೆ ಗೌತಮನು ಮಾಡಿರುವ ಈ ಸಲಹೆಯ ಪ್ರಕಾರ ತಮ್ಮ ಈ ಜಲವಿವಾದವನ್ನು ಮಾತುಕತೆಯ ಮೂಲಕ ಇತ್ಯರ್ಥಪಡಿಸಿಕೊಳ್ಳಬಹುದೆಂಬ ಅವನ ಮಾತು ಪರೋಕ್ಷವಾಗಿ ಮಾತ್ರವಲ್ಲದೆ ಪ್ರತ್ಯಕ್ಷವಾಗಿಯೂ ಶತ್ರುಗಳಾದ ಕೋಲಿಯರಿಗೇ ಅನುಕೂಲವಾಗುವಂತಿದೆ. ಏಕೆಂದರೆ, ಗೌತಮನ ತಾಯಿಯಾದ ಮಹಾಮಾಯೆ ಮತ್ತು ಅವನ ಚಿಕ್ಕಮ್ಮನಾದ ಪ್ರಜಾಪತಿ ಗೌತಮಿ, ಅಂದರೆ ದೊರೆ ಶುದ್ಧೋದನನ ಇಬ್ಬರು ರಾಣಿಯರೂ ಸಹ ಕೋಲಿಯ ನಾಡಿನವರೇ ಆಗಿದ್ದಾರೆ. ಅಲ್ಲದೆ, ಗೌತಮನ ಹೆಂಡತಿ ಯಶೋಧರೆಯ ತಾಯಿಯಾದ ಪಾವನಗಂಗಾ ಮೌರ್ಯ ನಾಡಿನವಳು, ಮತ್ತು ಆಕೆಯ ತಂದೆ ದಂಡಪಾಣಿ ಪಾಂಚಾಳ ನಾಡಿನವನು. ಆದ್ದರಿಂದ ಗೌತಮನ ಈ ಸಲಹೆ ಬೇರೇನೂ ಆಗಿರದೆ, ಸ್ವಜನ ಪಕ್ಷಪಾತವಾಗಿದೆ; ಆದ್ದರಿಂದ ದೇಶದ ಶತ್ರುಗಳಿಗಿಂತಲೂ ಹೆಚ್ಚಾಗಿ ಸ್ವತಃ ಸಿದ್ಧಾರ್ಥ ಗೌತಮನಿಂದಲೇ ನಮ್ಮ ನಾಡಿಗೆ ಗಂಡಾಂತರವಿದೆ ಎಂಬುದಾಗಿ ವಿವರಿಸಿದ ಸೇನಾಪತಿ ಯೋಧನೇತನು ದೊರೆ ಶುದ್ಧೋದನನ ವಿರುದ್ಧ ಶಾಕ್ಯ ಸಂಘದ ಅವಿಶ್ವಾಸ ನಿರ್ಣಯವನ್ನು ಅಂಗೀಕರಿಸುವಂತೆ ಸಂಘವನ್ನು ಪ್ರಾರ್ಥಿಸುತ್ತಾನೆ.

ಈ ನಿರ್ಣಯವನ್ನು ಸಂಘದ ಸಭೆಯಲ್ಲಿ ಮಹಾಮಂತ್ರಿ ಉದಯಿನ್ ಮತ್ತು ಆಡಳಿತಾಧಿಕಾರಿ ನೀತಿಚಂದ್ರ ಇಬ್ಬರೂ ಅನುಕ್ರಮವಾಗಿ ಅನುಮೋದಿಸುತ್ತಾರೆ. ಆದರೆ ಪರಮ ಆಶ್ಚರ್ಯದ ಸಂಗತಿ ಎಂದರೆ ಆ ನಿರ್ಣಯವನ್ನು ಸಭೆಯಲ್ಲಿ ಯಾರೂ ವಿರೋಧಿಸುವುದೇ ಇಲ್ಲ. ಹಾಗೆ ವಿರೋಧಿಸಲು ಸಂಘದ ಯಾವ ಸದಸ್ಯನೂ ಧೈರ್ಯ ಮಾಡುವುದಿಲ್ಲ. ಅದಕ್ಕೆ ಕಾರಣವೂ ತಿಳಿಯುವುದಿಲ್ಲ. ಏಕೆಂದರೆ **ಗೌತಮನ ವಿರುದ್ಧದ ಪಿತೂರಿ ಅಷ್ಟೊಂದು ನಿಗೂಢವಾಗಿರುತ್ತದೆ. ಅಂತಿಮವಾಗಿ, ಯುವರಾಜನಾದ ಸಿದ್ಧಾರ್ಥನು ಎಸಗಿರುವ ಈ ದೇಶದ್ರೋಹ ಮತ್ತು ಸ್ವಜನ ಪಕ್ಷಪಾತದ ಅಕ್ಷಮ್ಯ ಅಪರಾಧಗಳಿಗಾಗಿ ದೊರೆ ಶುದ್ಧೋದನನನ್ನು ಸಿಂಹಾಸನದಿಂದ ಕೆಳಗಿಳಿಸಲಾಗುತ್ತದೆ ಮತ್ತು ಯುವರಾಜನಾದ ಸಿದ್ಧಾರ್ಥ ಗೌತಮನಿಗೆ ಗಡೀಪಾರು ಶಿಕ್ಷೆ ವಿಧಿಸಬೇಕೆಂದು ಶಾಕ್ಯ ಪಾರ್ಲಿಮೆಂಟು ನಿರ್ಣಯಿಸುತ್ತದೆ.** ಅಲ್ಲದೆ ಹಾಗೆ ವಿಧಿಸಲಾದ ಗಡೀಪಾರು ಶಿಕ್ಷೆಯನ್ನು ಅದೇ ಶಾಕ್ಯರ ಪಾರ್ಲಿಮೆಂಟ್ ತಕ್ಷಣವೇ ಅನುಷ್ಠಾನ ಗೊಳಿಸುವುದೂ ಇಲ್ಲ. ಏಕೆಂದರೆ ಗಡೀಪಾರು ಶಿಕ್ಷೆಯನ್ನು ಹಾಗೆ ತಕ್ಷಣವೇ ಅನುಷ್ಠಾನಗೊಳಿಸಿದ ಪಕ್ಷದಲ್ಲಿ, ಗೌತಮನ ವಂಶದವರೂ ಅವನ ದಾಯಾದಿಗಳೂ ಆಗಿರುವ ಶಾಕ್ಯರ ಶತ್ರುಗಳಾದ ಕೋಲಿಯಾ ನಾಡಿನ ದೊರೆ ಬ್ರಹ್ಮಾನಂದನಲ್ಲೂ ಅವನ ಸೇನಾಪತಿ ವಿಷ್ಣುಗುಪ್ತನಲ್ಲೂ ಸಿದ್ಧಾರ್ಥನು ರಾಜಕೀಯ ಆಶ್ರಯವನ್ನು ಪಡೆದು ಬಿಡಬಹುದೆಂಬ ಭಯ ಶಾಕ್ಯರ ಪಾರ್ಲಿಮೆಂಟನ್ನು ಕಾಡುತ್ತದೆ. ಅದೂ ಅಲ್ಲದೆ ಮಹಾಮುನಿ ಭರತವ್ಯಾಸನು ಇತ್ತೀಚೆಗೆ ಕಂಡುಹಿಡಿದಿರುವ ನೂತನ ಯುದ್ಧತಂತ್ರಗಳೆಲ್ಲ ಗೊತ್ತಿರುವುದು ಭರತವ್ಯಾಸರ ಪರಮಶಿಷ್ಯನೂ ಯುದ್ಧನೀತಿಯ ನಿಪುಣನೂ ಆದ ಸಿದ್ಧಾರ್ಥ ಗೌತಮನಿಗೆ ಮಾತ್ರ. ಆದ ಕಾರಣ, ಅವನಿಗೆ ವಿಧಿಸಲಾಗಿರುವ ಗಡೀಪಾರು ಶಿಕ್ಷೆಯ ಅನುಷ್ಠಾನವನ್ನು ದೇಶ ಯುದ್ಧದ ಗಂಡಾಂತರದಲ್ಲಿರುವ ಸದ್ಯದ ಪರಿಸ್ಥಿತಿಯಲ್ಲಿ ಮುಂದೂಡುವುದು ಎಂಬುದಾಗಿ ತೀರ್ಮಾನಿಸಲಾಗುತ್ತದೆ. ಅದಾದ ನಂತರ, ಸ್ವಯಂ ಇಚ್ಛೆಯಿಂದ ''ಭಿಕ್ಷಾಟನ ಸಂನ್ಯಾಸ''ವನ್ನು ಸ್ವೀಕರಿಸುವುದಾಗಿ ಘೋಷಿಸಿ, ಅದಕ್ಕೆ ಅನುಮತಿ ನೀಡಬೇಕೆಂದು ಸ್ವತಃ ಗೌತಮನೇ ಶಾಕ್ಯ ಸಂಘವನ್ನು ಬೇಡಿಕೊಳ್ಳುತ್ತಾನೆ; ಹಾಗೆಯೇ ಕೆಲವು ಅನಿವಾರ್ಯ ಕಾರಣಗಳಿಗಾಗಿ ಅವನ ವಂಶಕ್ಕೇ ವಿಧಿಸಲಾಗಿದ್ದ ಬಹಿಷ್ಕಾರ ಮತ್ತು ಆಸ್ತಿಯ ಮುಟ್ಟುಗೋಲು ಶಿಕ್ಷೆಯನ್ನೂ ಕಡಿಮೆ ಮಾಡಲಾಗುತ್ತದೆ. ತದನಂತರ ಘಟನೆಗಳು ಬೇರೆ ಬೇರೆ ತಿರುವುಗಳನ್ನು ಪಡೆದುಕೊಂಡು ಮುಂದುವರೆಯುತ್ತವೆ.

೨೦೦೦ ವರ್ಷಗಳಷ್ಟು ಪ್ರಾಚೀನವಾದ ಸಿದ್ಧಾರ್ಥ ಗೌತಮನನ್ನು ಕುರಿತ ಈ ಒಂದು ಅಜ್ಞಾತ ಕಥಾವಸ್ತುವನ್ನು ಆಧಾರವಾಗಿಟ್ಟು ಕೊಂಡು ರಚಿತವಾದದ್ದು 'ಜಲ' ಎಂಬ ನನ್ನ ನಾಟಕ. ಆ ವಿಷಯ ಬೇರೆ. ಆದರೆ ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ಮಾತ್ರವಲ್ಲದೆ, ಪಾಶ್ಚಾತ್ಯ ಸಾಹಿತ್ಯ ಪರಂಪರೆಯಲ್ಲೂ ಬುದ್ಧನನ್ನು ಕುರಿತ ಈ ಕಥೆ ಈವರೆಗೂ ಎಲ್ಲೂ ಬೆಳಕು ಕಾಣದಿರುವುದು ಆಶ್ಚರ್ಯದ ವಿಷಯವೆನಿಸುತ್ತದೆ. ಅದೂ ಅಲ್ಲದೆ, ಬುದ್ಧನಿಗೆ ಅತ್ಯಂತ ಸನಿಹದ ಕವಿ ಎಂದೇ ನಂಬಲಾಗಿರುವ ಮಹಾಕವಿ ಅಶ್ವಘೋಷನ 'ಬುದ್ಧಚರಿತೆ'ಯಲ್ಲೂ ಈ ಕಥೆಯ ಪ್ರಸ್ತಾಪವಾಗುವುದಿಲ್ಲ. ಧರ್ಮಾನಂದ ಕೋಸಾಂಬಿಯಂಥ ವಿದ್ವಾಂಸರಲ್ಲೂ ಈ ಕಥೆಯ ಪ್ರಸ್ತಾಪ ಬರುವುದೇ ಇಲ್ಲ. ಆದರೆ ಅಂಬೇಡ್ಕರರು ತಮ್ಮ 'ಬುದ್ಧ ಅಂಡ್ ಹಿಸ್ ಧರ್ಮ' ಎಂಬ ಗ್ರಂಥದಲ್ಲಿ ಮಾತ್ರ ಬುದ್ಧನನ್ನು ಕುರಿತ ಈ ಅಜ್ಞಾತ ಕಥೆಯ ಕೆಲವು ಎಳೆಗಳನ್ನು ಪ್ರಾಸಂಗಿಕವಾಗಿ ಪ್ರಸ್ತಾಪಿಸುತ್ತಾರೆ.

ಅಂದರೆ, ಇಲ್ಲಿನ ಕೆಲವು ಚಿಂತನಾರ್ಹ ಅಂಶಗಳು ಎಷ್ಟೊಂದು ತೀವ್ರವಾಗಿವೆ ಎಂದರೆ ಬಹುಶಃ ಬುದ್ಧನನ್ನು ಕುರಿತ ಸಂಶೋಧನೆಗಳು ಇನ್ನೂ ನಡೆಯಬೇಕಿವೆ ಎಂದೆನಿಸುತ್ತದೆ. ಏಕೆಂದರೆ ಈಗ ದೊರೆತಿರುವ ಈ ಕಥೆಯ ಒಡಲಲ್ಲಿ ಕೆಲವು ಆಸ್ಫೋಟನಕಾರಿಯಾದ ಪ್ರಶ್ನೆಗಳು



ಅಡಗಿವೆ: ಬುದ್ಧನನ್ನು ಕುರಿತ ಈ ಕಥೆಯ ಆವೃತ್ತಿಯನ್ನು ಬುದ್ಧನ ನಿರ್ವಾಣದ ನಂತರ ಸ್ವತಃ ಬುದ್ಧ ಸಂಘದಲ್ಲೇ ತುಂಬಾ ವ್ಯವಸ್ಥಿತವಾಗಿ ಮರೆಮಾಚುತ್ತ ನಡೆದು ಬಂದಿರಬಹುದೆ ? ಅಥವಾ ವಿದೇಶಿ ಆಡಳಿತಗಾರರನ್ನು ನಮ್ಮ ದೇಶದೊಳಗೆ ಬರಮಾಡಿಕೊಳ್ಳುವ ದೇಶದ ಆಂತರಿಕ ಶತ್ರುಗಳು ನಮ್ಮ ಚರಿತ್ರೆಯಲ್ಲಿ ಕಂಡುಬಂದಿರುವಂತೆ ಬುದ್ಧನ ಕಾಲದಲ್ಲೂ ಇದ್ದರು ಎಂಬುದನ್ನು ಮರೆಮಾಚುವ ಸಲುವಾಗಿಯೇನಾದರೂ ಬುದ್ಧನ ಕಥೆಯ ಆ ಆವೃತ್ತಿಯನ್ನು ಬೆಳಕಿಗೆ ಬಾರದಂತೆ ತಡೆದಿರಬಹುದೆ ? ಅದೂ ಅಲ್ಲದೆ, ಬುದ್ಧನ ದಾಯಾದಿಯಾದ ದೇವದತ್ತನ ಜೊತೆಗಿನ ಬುದ್ಧನ ಸಂಬಂಧ ಕೇವಲ ಒಂದು ಪಕ್ಷಿ ಹೊಡೆದ ವಿವಾದಕ್ಕಷ್ಟೇ ಸೀಮಿತವಾಗಿರದೆ, ರೋಹಿಣಿ ನದಿಯ ಜಲವಿವಾದದ ವಿಷಯದಲ್ಲಿ ತನ್ನ ನಾಡಿನ ಮೇಲೆ ದಂಡೆತ್ತಿ ಬರುವಂತೆ ದೇವದತ್ತನು ಕೋಲಿಯಾ ನಾಡಿನ ಸೇನಾಪತಿಯಾದ ವಿಘ್ನಗುಪ್ತನೊಡನೆ ರಾಜಕೀಯ ಪಿತೂರಿ ನಡೆಸಿದ್ದಕ್ಕೆ ಈ ಕಥೆ ಸಾಕ್ಷಿ ನುಡಿಯುತ್ತದೆ. ಜೊತೆಗೆ, ಅದೇ ಶಾಕ್ಯ ಸಾಮ್ರಾಜ್ಯದ ದೊರೆಯಾಗಿದ್ದ ದೇವದತ್ತನ ತಂದೆಯಾದ ಧನದತ್ತನನ್ನು ಸಿಂಹಾಸನದಿಂದ ಪದಚ್ಯುತಗೊಳಿಸಿದ ಅದೇ ಶಾಕ್ಯ ಸಂಘವು, ಆ ಸಿಂಹಾಸನದ ಮೇಲೆ ಶುದ್ಧೋದನನ್ನು ದೊರೆಯಾಗಿ ಪ್ರತಿಷ್ಠಾಪಿಸಿರುತ್ತದೆ. ಅಂದರೆ, ಶಾಕ್ಯ ಸಂಘದ ಮೇಲೆ ರಾಜಕೀಯ ಸೇಡು ತೀರಿಸಿಕೊಳ್ಳಲು ದೇವದತ್ತನು ಸಮಯಕ್ಕಾಗಿ ಕಾಯುತ್ತಿದ್ದನು ಎಂಬುದು ಕೂಡ ಈ ಕಥೆಯಿಂದ ತಿಳಿಯುತ್ತದೆ. ಅಥವಾ 'ಶಾಕ್ಯ' ಸಾಮ್ರಾಜ್ಯದ ಮೂಲ, ಸಪ್ತಋಷಿಯರಲ್ಲಿ ಒಬ್ಬನಾದ 'ಸಾಂಖ್ಯಾ' ಎಂಬ ಅಸ್ಪೃಶ್ಯ ಮುನಿ ಎಂಬುದನ್ನು ಈ ಕಥೆ ಬಿಟ್ಟುಕೊಡುತ್ತದೆ. ಹಾಗೆಯೇ, ಬುದ್ಧನ ಕಥೆಯಲ್ಲಿ ಸರ್ವೇಸಾಮಾನ್ಯವಾಗಿ ಬರುವ ಚೆನ್ನ ಎಂಬ ಒಬ್ಬ ಅಸ್ಪೃಶ್ಯನು ಕೇವಲ ಸಿದ್ಧಾರ್ಥನ ಸೇವಕ ಮಾತ್ರವಾಗಿರದೆ ದೊರೆಯಾದ ಶುದ್ಧೋದನನಿಗೂ ಯುವರಾಜ ಸಿದ್ಧಾರ್ಥನಿಗೂ ಕುದುರೆ ಸವಾರಿಯನ್ನು ಕಲಿಸಿದ ಒಬ್ಬ ಅಶ್ವಪರಿಣಿತನೂ, ಸಿದ್ಧಾರ್ಥನ ಅಂಗರಕ್ಷಕನೂ ಆಗಿದ್ದನೆಂಬ ಸತ್ಯವನ್ನು ಕೂಡ ಈ ಕಥೆ ಬಿಟ್ಟುಕೊಡುತ್ತದೆ. ಅಂದರೆ ಬುದ್ಧನ ಕಥೆಯಲ್ಲಿ ಬರುವ ಈ ರೀತಿಯ ಅಪರೂಪದ ಮಾಹಿತಿಗಳನ್ನು ಹತ್ತಿಕ್ಕುವ ಸಲುವಾಗಿಯೇನಾದರೂ ಅವನ ಕಥೆಯ ಈ ಆವೃತ್ತಿಯನ್ನು ಮರೆಮಾಚಲಾಯಿತೆ ? ಅಥವಾ, ಈ ಕಥೆಯ ಇನ್ನೊಂದು ಮಾಹಿತಿಯ ಪ್ರಕಾರ, ಅರಮನೆಯ ಆಂತರಿಕ ಆಡಳಿತದಲ್ಲಿ ರಾಜಕೀಯ ಪಿತೂರಿಗಳನ್ನು ನಡೆಸಿದ ಬ್ರಾಹ್ಮಣ ಮಹಾಮಂತ್ರಿ ಉದಯಿನ್ ಮತ್ತು ಕ್ಷತ್ರಿಯ ಸೇನಾಪತಿ ಯೋಧನೇತರು ಶಾಕ್ಯ ಸಾಮ್ರಾಜ್ಯದ ಪತನಕ್ಕೂ, ಯುವರಾಜ ಸಿದ್ಧಾರ್ಥನಿಗೆ ವಿಧಿಸಲಾದ ಗಡೀಪಾರು ಶಿಕ್ಷೆಗೂ ಮೂಲ ಕಾರಣವಾಗಿದ್ದಾರೆ ಎಂಬುದನ್ನು ಮರೆಮಾಚುವ ಸಲುವಾಗಿಯೇನಾದರೂ ಬುದ್ಧನ ನಿರ್ವಾಣದ ನಂತರ 'ಬುದ್ಧ ಸಂಘ'ದೊಳಗಿನ ಮತೀಯ ಶಕ್ತಿಗಳು ಈ ಕಥೆಯನ್ನು ಮರೆಮಾಚುತ್ತ ಬಂದಿರಬಹುದೆ ಎಂಬ ಇನ್ನೊಂದು ಪ್ರಶ್ನೆ ಕೂಡ ಉದ್ಭವಿಸುತ್ತದೆ.

ಒಟ್ಟಿನಲ್ಲಿ ಬುದ್ಧನನ್ನು ಕುರಿತ ಈ ಕಥೆ, ನಂಬಲರ್ಹವಲ್ಲದ ಸಾಂಪ್ರದಾಯಿಕ ಕಥೆಗಿಂತ ಸಂಪೂರ್ಣವಾಗಿ ಭಿನ್ನವಾಗಿದ್ದು, ಬುದ್ಧನ ಜೀವನವನ್ನು ಕುರಿತು ಹಲವಾರು ಗಂಭೀರ ಸವಾಲುಗಳನ್ನು ತನ್ನ ಗರ್ಭದಲ್ಲಿ ಹುದುಗಿಸಿಕೊಂಡಿರುವುದು ಗೊತ್ತಾಗುತ್ತದೆ. ಬುದ್ಧನ ಬದುಕು ಈಗ ನಾವು ತಿಳಿದಿರುವಂತೆ ತೀರಾ ಸರಳವಾಗಿರದೆ, ಹಲವು ಹತ್ತು ರೀತಿಯ ಸಾಂಸ್ಕೃತಿಕ ಸಂಘರ್ಷಗಳಿಂದ ತುಂಬಿಹೋಗಿರುವುದನ್ನು ಈ ಕಥೆಯ ಗರ್ಭದಲ್ಲಿ ಕಾಣಬಹುದಾಗಿದೆ.

ಬುದ್ಧಗಯಾ ಮತ್ತು ಹಿಮಾಚಲ ಪ್ರದೇಶಗಳಂಥ ದೇಶದ ಗಡೀ ಪ್ರಾಂತಗಳಲ್ಲಿ ನಡೆದ ಕೆಲವು ಬೌದ್ಧ ಸಮ್ಮೇಳನಗಳ ಸಂದರ್ಭದಲ್ಲಿ ಈ ಕಥೆಯನ್ನು ನಾನು ಸಂಗ್ರಹಿಸಿದೆ ಎಂಬುದು ನಿಜವಾದರೂ, ದಿವಂಗತ ಬಸವಲಿಂಗಪ್ಪನವರು ಬದುಕಿದ್ದಾಗ, ಬೆಂಗಳೂರಿನ ಅವರ 'ನಾಗಾರ್ಜುನ ಶಿಕ್ಷಣ ಸಂಸ್ಥೆ'ಯಲ್ಲಿ ೧೯೯೦ರಲ್ಲಿ ನಡೆದ ಬೌದ್ಧರ ಸಮ್ಮೇಳನದ ಸಂದರ್ಭದಲ್ಲಿ, ಭಾರತೀಯ ಮೂಲದ ಬುದ್ಧನ ಈ ಕಥೆ, ಕೇವಲ ಶ್ರೀಲಂಕಾ, ಥೈಲ್ಯಾಂಡ್, ಚೀನಾ, ಟಿಬೆಟ್ ಮತ್ತು ಜಪಾನ್‌ಗಳಲ್ಲಿ ಮಾತ್ರ ಪ್ರಚಲಿತವಿರಲು ಕಾರಣವೇನು ಎಂಬುದಾಗಿ ಆ ಸಭೆಯ ಮುಖ್ಯ ಅತಿಥಿಗಳಾಗಿದ್ದ ಟಿಬೆಟ್‌ನ ಧರ್ಮಗುರು ದಲಾಯ್‌ಲಾಮರನ್ನು ನಾನು ಪ್ರಶ್ನಿಸಿದಾಗ ಅದಕ್ಕವರು ನಿಜವಾದ ಉತ್ತರ ಅಥವಾ ಕಾರಣವನ್ನು ನೀಡಲು ಮನಸ್ಸು ಮಾಡಲಿಲ್ಲವೆಂಬುದೂ ಅಷ್ಟೇ ನಿಜ. ಕರ್ನಾಟಕಕ್ಕೆ ಆಗಮಿಸಿದ್ದುದರಿಂದ ನನ್ನ ಈ ಪ್ರಶ್ನೆಗೆ ಉತ್ತರ ನೀಡುವುದು ಅವರಿಗೆ ಇಷ್ಟವಾಗಲಿಲ್ಲವೋ ಏನೋ ತಿಳಿಯದು. ಆದರೆ ಈ ಕಥೆ ಅವರಿಗೆ ಗೊತ್ತಿಲ್ಲ ಎಂದೇನೂ ಆ ಸಂದರ್ಭದಲ್ಲಿನ ಅವರ ಮುಖಭಾವಗಳಿಂದ ನನಗನಿಸಲಿಲ್ಲ.

ಹಿಂದೆಯೇ ಪ್ರಸ್ತಾಪಿಸಿದ 'ಜಲ' ಎಂಬ ನಾಟಕವನ್ನು ನಾನು ಬರೆಯುವ ಕಾಲಕ್ಕೆ ಬುದ್ಧನನ್ನು ಕುರಿತು ಈವರೆಗೆ ರಚಿತವಾಗಿರುವ ಈ ಶತಮಾನದ ಕನ್ನಡದ ಅಗ್ರಗಣ್ಯ ನಾಟಕಕಾರರಾದ ಬಿ. ಪುಟ್ಟಸ್ವಾಮಯ್ಯನವರ 'ಗೌತಮ ಬುದ್ಧ', ಮಾಸ್ತಿಯವರ 'ಯಶೋಧರೆ' ಮತ್ತು ಕುವೆಂಪು ಅವರ 'ಮಹಾರಾತ್ರಿ' ನಾಟಕಗಳನ್ನು ವಿನಯದಿಂದ ಓದಿಕೊಂಡಿದ್ದೇನೆ ಹಾಗೂ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇನೆ.

ಡಾ|| ಮ.ನ. ಜವರಯ್ಯ
ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ
ಮಾನಸಗಂಗೋತ್ರಿ, ಮೈಸೂರು - 570 006

## ಊಸರವಳ್ಳಿ



*ಹೆಂಡತಿಯನ್ನೇ ಬೇಡವೆಂದ*
*ಗಂಡ*
*'ಹೆಂಡ ಅತಿ'ಯಾದಾಗ*
*ಮತ್ತೆ*
*'ಹೆಂಡತಿ' ಬೇಕೆಂದ.*

**- ಬೆಮಲ್ ಕಂಪಲಪ್ಪ**

ತಿಂಗಳ ಪತ್ರಿಕೆ

# ಹೊಸತು

ಪ್ರಿಯ ಓದುಗ ಮಿತ್ರರೇ,

'ನೆಮ್ಮದಿಯ ನಾಳೆ ನಮ್ಮದು' ಎಂಬ ಆಶಯ ಹೊತ್ತು ಪ್ರಕಟವಾಗುತ್ತಿರುವ 'ಹೊಸತು' ಮಾಸ ಪತ್ರಿಕೆಯನ್ನು ಗಮನಿಸಿದ್ದೀರಲ್ಲವೆ? ಪ್ರಜಾಪ್ರಭುತ್ವವಾದಿ ನಿಟ್ಟಿನಲ್ಲಿ ಪುರೋಗಾಮಿತ್ವ, ಜಾತ್ಯತೀತತೆ, ಸ್ವಾವಲಂಬನೆ, ಜನಪರ ಸಂಸ್ಕೃತಿ-ಮುಂತಾದುವನ್ನು ಎತ್ತಿಹಿಡಿದು, ಚಿಂತನೆ ಹಾಗೂ ಕ್ರಿಯೆಗಳಿಗೆ ಇಂಬುಗೊಡುವ ಪತ್ರಿಕೆ ಇದು. ಮೊದಲ ಸಂಚಿಕೆಯ ಕುರಿತು ಓದುಗರಿಂದ ನಮಗೆ ಬಂದಿರುವ ಪ್ರತಿಕ್ರಿಯೆಗಳು ಪ್ರೋತ್ಸಾಹಕರವಾಗಿವೆ.

ಇದು ಮತ್ತಷ್ಟು ಜನರಿಗೆ ತಲುಪಲು ನಿಮ್ಮ ಸಹಕಾರ ಕೋರುತ್ತೇವೆ. ಈ ಸಹಕಾರ ಹೇಗೆ ಮಾಡಬಹುದು? ನೀವು ಚಂದಾ ಕಳಿಸುವುದಲ್ಲದೆ, ನಿಮ್ಮ ಕೆಲವು ಮಿತ್ರರಿಗೂ ಚಂದಾ ಕಳಿಸಿಕೊಡುವಂತೆ ಪ್ರೇರೇಪಿಸಬಹುದು. ನಿಮ್ಮ ಊರಿನಲ್ಲಿರುವ ಪತ್ರಿಕೆ ಅಂಗಡಿಗಳವರಿಗೆ ಈ ವಿಷಯ ತಿಳಿಸಿ ಅವರ ವಿಳಾಸ ನಮಗೆ ಕಳಿಸಬಹುದು. ಪತ್ರಿಕೆಯಲ್ಲಿ ಜಾಹಿರಾತು ನೀಡಬಲ್ಲವರನ್ನು ಪರಿಚಯ ಮಾಡಿಕೊಡಬಹುದು. ಅಥವಾ ನೀವೇ ಜಾಹಿರಾತು ಸಂಗ್ರಹಿಸಿ ಕಳಿಸಿಕೊಡಬಹುದು.

## ಹೊಸತು ಚಂದಾ ಮತ್ತು ಜಾಹಿರಾತು ವಿವರಗಳು

### ಚಂದಾ ವಿವರಗಳು

| | | |
|---|---|---|
| ವಾರ್ಷಿಕ ಚಂದಾ | ..... | ರೂ. 100/- |
| ಎರಡು ವರ್ಷಗಳಿಗೆ | ..... | ರೂ. 180/- |
| ಮೂರು ವರ್ಷಗಳಿಗೆ | ..... | ರೂ. 250/- |

**ಹೊಸತು**
ಪತ್ರಿಕೆಗೆ ಮೂರು ವರ್ಷದ ಚಂದಾ ನೀಡುವವರಿಗೆ ನವಕರ್ನಾಟಕ ಪ್ರಕಾಶನದ ಎಲ್ಲ ಪುಸ್ತಕಗಳ ಮೇಲೆ ಶೇ. 20ರ ರಿಯಾಯಿತಿ ನೀಡಲಾಗುವುದು. ಈ ರಿಯಾಯಿತಿ ಚಂದಾ ಅವಧಿ ಮುಗಿಯುವವರೆಗೆ ಮಾತ್ರ

### ಜಾಹಿರಾತು ದರಗಳು

**ಡೆಮಿ 1/4 ಆಕಾರದಲ್ಲಿ 64 ಪುಟಗಳು**

| | ತಿಂಗಳಿಗೆ | ವರ್ಷಕ್ಕೆ |
|---|---|---|
| ಹಿಂಬದಿಯ ರಕ್ಷಾಪುಟ (ಬಹುವರ್ಣದಲ್ಲಿ) (175 X 240 ಎಂಎಂ) | ರೂ. 6,000/- | ರೂ. 50,000/- |
| ಎರಡನೇ ರಕ್ಷಾಪುಟ (ಬಹುವರ್ಣದಲ್ಲಿ) | ರೂ. 4,500/- | ರೂ. 40,000/- |
| ಮೂರನೇ ರಕ್ಷಾಪುಟ (ಬಹುವರ್ಣದಲ್ಲಿ) | ರೂ. 4,500/- | ರೂ. 40,000/- |
| ಒಳಗಿನ ಒಂದು ಪುಟ (ಕಪ್ಪು ಬಿಳುಪು) | ರೂ. 3,000/- | ರೂ. 25,000/- |
| ಒಳಗಿನ ಅರ್ಧ ಪುಟ (175 X 120 ಎಂಎಂ) | ರೂ. 1,600/- | ರೂ. 13,000/- |

**ಗಮನಿಸಿ :** ಕಲರ್ ಆರ್ಟ್‌ವರ್ಕ್ ಅಥವಾ ಕಲರ್ ಪಾಸಿಟಿವ್, ಡಿ.ಟಿ.ಪಿ. ಇತ್ಯಾದಿಗಳನ್ನು ಜಾಹಿರಾತುದಾರರೇ ಒದಗಿಸಬೇಕು.

---

ವ್ಯವಸ್ಥಾಪಕರು
**'ಹೊಸತು'**
ನಂ. 15, ಎಂಬೆಸಿ ಸೆಂಟರ್
ಕ್ರೆಸೆಂಟ್ ರಸ್ತೆ, ಬೆಂಗಳೂರು - 560 001

ಮಾನ್ಯರೇ,

ಇದರೊಂದಿಗೆ ಹೊಸತು ಪತ್ರಿಕೆಗಾಗಿ ............ ವರ್ಷದ ಚಂದಾ ಹಣ ರೂ................ರ ಡಿ.ಡಿ./ಎಂ.ಓ. ಮೂಲಕ **'ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್'** ಹೆಸರಿನಲ್ಲಿ ಕಳಿಸುತ್ತಿದ್ದೇನೆ. (ಸಂಖ್ಯೆ................. ತಾರೀಖು..........) ಹಣ ತಲುಪಿದ ಕೂಡಲೆ ನನ್ನ ಹೆಸರನ್ನು ನೋಂದಾಯಿಸಿಕೊಂಡು ಅಧಿಕೃತ ರಸೀದಿ ಕಳಿಸಿಕೊಡಿ. ನನ್ನ ವಿಳಾಸಕ್ಕೆ ಮುಂದಿನ ಸಂಚಿಕೆಯಿಂದ ಪತ್ರಿಕೆ ಕಳಿಸಿಕೊಡಿ.

ಹೆಸರು/ವಿಳಾಸ :

ಸಹಿ

---

ವ್ಯವಸ್ಥಾಪಕರು
**'ಹೊಸತು'**
ನಂ. 15, ಎಂಬೆಸಿ ಸೆಂಟರ್
ಕ್ರೆಸೆಂಟ್ ರಸ್ತೆ, ಬೆಂಗಳೂರು - 560 001

ಮಾನ್ಯರೇ,

ಇದರೊಂದಿಗೆ ಹೊಸತು ಪತ್ರಿಕೆಯಲ್ಲಿ ಪ್ರಕಟಿಸಲು ............................ ಪುಟದ ಜಾಹಿರಾತನ್ನು ಇರಿಸಿದ್ದೇನೆ. ಪತ್ರಿಕೆಯ ................ ತಿಂಗಳ ಸಂಚಿಕೆಯಲ್ಲಿ ಇದನ್ನು ಪ್ರಕಟಿಸಬೇಕೆಂದು ಕೋರುತ್ತೇನೆ.

ಜಾಹಿರಾತಿನ ಬಾಬ್ತು........................ರೂ. ಗೆ **'ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್'** ಹೆಸರಿನಲ್ಲಿ ಡಿ.ಡಿ.ಯನ್ನು ಪಡೆದು ಲಗತ್ತಿಸಿದ್ದೇನೆ. ಇದಕ್ಕೆ ಅಧಿಕೃತ ರಸೀದಿ ಕಳಿಸಿಕೊಡಿ.

ಹೆಸರು/ವಿಳಾಸ :

ಸಹಿ

---

ಜಾಹಿರಾತು ಸಂಗ್ರಹ, ಚಂದಾದಾರರ ನೋಂದಣಿಗೆ ನೀವು ವಹಿಸುವ ಶ್ರಮವನ್ನು ಗೌರವದೊಂದಿಗೆ ಮನ್ನಿಸುತ್ತೇವೆ. ಪ್ರತಿಫಲ ಇದೆಯೆಂಬುದನ್ನು ಗಮನಿಸಿ.

- ವ್ಯವಸ್ಥಾಪಕರು

## ನೀವು ಓದಲೇಬೇಕಾದ ನವಕರ್ನಾಟಕ ಪ್ರಕಾಶನದ ಪುಸ್ತಕಗಳು

### ವಿಚಾರ ಸಾಹಿತ್ಯ , ಸಂಶೋಧನೆ

**ವೈಜ್ಞಾನಿಕ ಮನೋಧರ್ಮ** (5ನೇ ಮುದ್ರಣ)
ಜಿ. ಟಿ. ನಾರಾಯಣ ರಾವ್ — 50.00

**ಸಂಪ್ರದಾಯ, ವಿಜ್ಞಾನ ಮತ್ತು ಸಮಾಜ** (5ನೇ ಮು.)
ಡಾ॥ ಎಸ್. ಬಾಲಚಂದ್ರರಾವ್ — 28.00

**ಸಾಮಾನ್ಯ ಘಟನೆಗಳ ವೈಜ್ಞಾನಿಕ ವಿಶ್ಲೇಷಣೆ** (3ನೇ ಮು.)
ವೆಂಕಟಯ್ಯ ಅಪ್ಪಗೆರೆ — 20.00

**ದೇವರು, ದೆವ್ವ , ವಿಜ್ಞಾನ** (7ನೇ ಮುದ್ರಣ)
ಡಾ॥ ಕೋವೂರ್
(ಸಂ: ಪುರುಷೋತ್ತಮ ಬಿಳಿಮಲೆ) — 45.00

**ನಾನೇಕೆ ನಾಸ್ತಿಕ** (4ನೇ ಮುದ್ರಣ)
ಭಗತ್‌ಸಿಂಗ್ (ಅನು : ಎನ್. ಗಾಯತ್ರಿ) — 12.00

**ಗೋರಾ** (ನಾಸ್ತಿಕನೊಬ್ಬನ ಜೀವನ ಚರಿತ್ರೆ)
ಎಚ್. ಎಸ್. ದೊರೆಸ್ವಾಮಿ,
ಸಿ. ಆರ್. ಕೃಷ್ಣರಾವ್ — 18.00

**ಭಾರತೀಯ ವಿವಾಹ ಸಂಸ್ಥೆಯ ಇತಿಹಾಸ**
ವಿ. ಕಾ. ರಾಜವಾಡೆ
(ಅನು : ಕುಸುಮಗೀತ ಮತ್ತಿತರರು) — 28.00

**ರಾಮನಿಗೆ ಸೀತೆ ಏನಾಗಬೇಕು?**
ಡಾ॥ ಆರುದ್ರ (2ನೇ ಮುದ್ರಣ)
(ಅನು : ಕೆ. ಎಲ್. ಗೋಪಾಲಕೃಷ್ಣ ರಾವ್) — 45.00

**ಮಹಿಳೆ ಬಿಡುಗಡೆಯ ಹಾದಿಯಲ್ಲಿ** (3ನೇ ಮುದ್ರಣ)
ಎನ್. ಗಾಯತ್ರಿ — 55.00

**ಮಾತೆಯರು ಮಾನ್ಯರಾಗಿದ್ದಾಗ**
ದೇವಿಪ್ರಸಾದ್ ಚಟ್ಟೋಪಾಧ್ಯಾಯ
(ಅನು : ಜಿ. ಕುಮಾರಪ್ಪ) — 15.00

**ಇದು ಮುಗಿಯದ ಕಥೆ**
ದೇವಿಪ್ರಸಾದ್ ಚಟ್ಟೋಪಾಧ್ಯಾಯ
(ಅನು : ಜಿ. ಕುಮಾರಪ್ಪ) — 50.00

**ಭಾರತಕ್ಕೆ ಆರ್ಯರ ಪ್ರವೇಶ**
ಪ್ರೊ॥ ಆರ್. ಎಸ್. ಶರ್ಮ
(ಅನು : ಡಾ॥ ಎಸ್. ಗುರುದತ್) — 35.00

**ಆರ್ಯರಿಗಾಗಿ ಹುಡುಕಾಟ**
ಪ್ರೊ॥ ಆರ್. ಎಸ್. ಶರ್ಮ
(ಅನು : ಡಾ॥ ಎಸ್. ಗುರುದತ್) — 25.00

**ಮಾರ್ಕ್ಸ್‌ವಾದ ಮತ್ತು ಭಗವದ್ಗೀತೆ** (3ನೇ ಮುದ್ರಣ)
ಎಸ್. ಜಿ. ಸರ್ದೇಸಾಯಿ,
ದಿಲೀಪ್ ಬೋಸ್ (ಅನು: ಎಸ್.ಆರ್. ಭಟ್) — 35.00

**ಭಗವದ್ಗೀತೆ. ಒಂದು ವೈಚಾರಿಕ ಒಳನೋಟ**
ಪ್ರೊ॥ ಬಿ. ವಿ. ವೀರಭದ್ರಪ್ಪ — 50.00

**ಧರ್ಮ ಮತ್ತು ವೈಚಾರಿಕತೆ**
ಪ್ರೊ॥ ಬಿ. ವಿ. ವೀರಭದ್ರಪ್ಪ — 20.00

**ವಾಸ್ತು ಎಷ್ಟು ವಾಸ್ತವ ?**
ಪ್ರೊ॥ ಬಿ. ವಿ. ವೀರಭದ್ರಪ್ಪ — 20.00

**ಗಾಂಧಿ ಮತ್ತು ಅಂಬೇಡ್ಕರ್: ಧ್ಯೇಯ ಮತ್ತು ಧೋರಣೆ**
ಡಾ॥ ಮ. ನ. ಜವರಯ್ಯ — 20.00

# ಹಣವಂತರಿಗೆ ಸಂಪತ್ತು - ಬಡವರಿಗೆ ಆಪತ್ತು

ದೇಶದ ಕೈಗಾರಿಕಾ ಪ್ರಗತಿಯ ಅರಿವಿರುವ ಯಾರಿಗೇ ಆಗಲಿ ಸೊಂಡೂರಿನ ವಿಷಯ ಹೇಳಬೇಕಾದುದಿಲ್ಲ. ಅದು ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರುಗಳ ವಿಪುಲ ಸಂಪತ್ತಿನ ಆಗರ. ಇದಕ್ಕಾಗಿ ದೇಶ ವಿದೇಶಗಳಲ್ಲಿ ಖ್ಯಾತಿ ಪಡೆದ ಹೆಗ್ಗಳಿಕೆ ಇದರದಾಗಿದೆ.

ಅದೇ ಹೊತ್ತಿನಲ್ಲಿ ಇದೊಂದು ಹಸಿರಿನಿಂದ ಕಂಗೊಳಿಸುವ ಬೆಟ್ಟಗುಡ್ಡಗಳ ಪ್ರಕೃತಿರಮ್ಯ ಮನೋಹರ

**ಗೋಪಾಲ್ - ಲಕ್ಷ್ಮಣ್**

ಪ್ರದೇಶ. ಒಂದೆಡೆ ಬಟಾಬಯಲು. ಅದರ ಮಗ್ಗುಲಲ್ಲೇ ಆಳೆತ್ತರದ ಖನಿಜ ಸಂಪತ್ತಿನ ಕಣಿವೆಗಳು.

**ಕಥೆ...ವ್ಯಥೆ** : ಇದು ಈ ಊರಿನ ಕಥೆಯ ಒಂದು ಮಗ್ಗುಲು, ಉಲ್ಲಾಸಕರವಾದ ಆನಂದದಾಯಕವಾದ ಮಗ್ಗುಲು. ಆದರೆ ಇದಕ್ಕೆ ಈಚೆಗೆ ಇನ್ನೊಂದು ಮಗ್ಗುಲು ಕೂಡಿಕೊಂಡಿದೆ. ಇದು ಧೂಳು- ಕಣ್ಣೀರಿನ ಮಗ್ಗುಲು, ವ್ಯಥೆಯಿಂದ ಕೂಡಿದ ಮಗ್ಗುಲು.

ಧೂಳು. ಏತರ ಧೂಳು ? ಸಂಜೆ ಹೊತ್ತಿನಲ್ಲಿ ಮನೆಗೆ ಹಿಂದಿರುಗುತ್ತಿರುವ ದನಕರುಗಳ ಕಾಲಿನಿಂದ ಏಳುವ ಧೂಳೆ ? ಇಲ್ಲ. ಅದು ಕ್ಷಣಕಾಲದ್ದಷ್ಟೆ. ಇಲ್ಲಿ ಉಲ್ಲೇಖಿಸುತ್ತಿರುವ ಈ ಧೂಳು ನಗರದ ಎಲ್ಲೆಡೆ ತುಂಬಿಕೊಂಡಿರುವಂಥ ಧೂಳು. ಬೆಟ್ಟಗುಡ್ಡಗಳಲ್ಲಿ, ಸಂದಿಗೊಂದುಗಳಲ್ಲಿ ತುಂಬಿಕೊಂಡು ನಗರ ನಿವಾಸಿಗಳಿಗೆ ರೋಗರುಜಿನ ತರುತ್ತಿರುವ ಕೆಂಧೂಳು. ಎಲ್ಲೆಡೆ ಪಸರಿಸಿ ಪರಿಸರದ ಜೀವಸಂಕುಲಕ್ಕೆ ಮಾರಕವಾಗಿರುವ ಧೂಳು. ಮೈಮೇಲಿನ ಬೆವರಿಗೆ ಅಂಟಿಕೊಂಡು ನೂರಾರು ಕಾಯಿಲೆಗಳಿಗೆ ಆಹ್ವಾನ ನೀಡುತ್ತಿರುವ ಕಬ್ಬಿಣದ ಅದಿರಿನ ಕೆಂಪು ಧೂಳು.

ಬಿಸಿಲಿನ ಬೇಗೆಗೆ ಬೆದರದೆ ಬೆವರು ಸುರಿಸಿ ದುಡಿಯುವ ಕೈಗಳ ಬದುಕಿಗೆ ಕುತ್ತು ತಂದಿರುವ ಈ ಧೂಳು ಅದಿರಿನ ಗಣಿಗಳ ಒಳಗಿನಿಂದ ಹೊರಹೊಮ್ಮಿ ಕಾರ್ಮಿಕ ಜನರ ಬಾಳಿಗೆ ಕಂಟಕಪ್ರಾಯವಾಗಿ ಪರಿಣಮಿಸಿದೆ. ಅಷ್ಟೇ ಅಲ್ಲ, ಇತ್ತೀಚೆಗೆ ವಿಪರೀತವಾಗಿ ಹೆಚ್ಚಿರುವ ಪರಿಸರ ಮಾಲಿನ್ಯದ ಕರಾಳ ತುಳಿತಕ್ಕೆ ಸಿಕ್ಕಿ ನಲುಗುತ್ತಿರುವ ರೈತರ ಪಾಲಿಗೂ ಇದು ಮಾರಕ ಪಿಡುಗಾಗಿದೆ.

**ತುಂಗಭದ್ರೆಯ ಜುಳುಜುಳು ನೀರಿನ ಪಕ್ಕ ಅದಿರುಗುಡ್ಡ** : ತುಂಗಭದ್ರ ನಾರೇ ಹಳ್ಳದಿಂದ ಜುಳುಜುಳು ನಿನಾದದೊಂದಿಗೆ ಹರಿಯತ್ತಿರುವ ನೀರಿಗೂ ಕೆಂಪುಧೂಳಿನ ಕಣ ಸೇರಿ ನದಿ ಹಲವಾರು ರೋಗಗಳಿಗೆ ಕಾರಣವಾಗಿದೆ. ಆಳೆತ್ತರದ ಕಬ್ಬಿಣದ ಅದಿರಿನ ಗಣಿಯಲ್ಲಿ ಬೆವರು ಸುರಿಸಿ ದುಡಿಯುವ ಕಾರ್ಮಿಕರಿಂದ ಹಿಡಿದು ಭೂಮಿ ಉಳುವ ರೈತನವರೆಗೆ ಎಲ್ಲರ ಮೈಗೂ ಇಲ್ಲಿ ಕೆಂಪುವರ್ಣದ ಲೇಪನ.

''ಮೈಮೇಲಿನ ಈ ಮಣ್ಣನ್ನು ತೊಳೆಯಲು ದಿನವೂ ಕನಿಷ್ಠ ಹತ್ತು ರೂಪಾಯಿ ಖರ್ಚಾಗುತ್ತದೆ. ಬದುಕಿನ ಅಗತ್ಯಗಳ ಪೂರೈಕೆಗೇ ಹಣ ಇಲ್ಲದಿರುವಾಗ ಈ ಧೂಳು ತರುವ ರೋಗರುಜಿನಗಳಿಗೆ ಹಣ ಎಲ್ಲಿಂದ ತರೋದು,'' ಎಂಬ ರೈತನ ಪ್ರಶ್ನೆಯಲ್ಲಿ ಬದುಕಿನ ಜೀವನ್ಮರಣ ಸಮಸ್ಯೆ ಅಡಗಿದೆ.

ಅಷ್ಟೇ ಅಲ್ಲ, ಮ್ಯಾಂಗನೀಸ್ ಮತ್ತು ಕಬ್ಬಿಣದ ಅದಿರಿನ ಗಣಿಗಳಿಂದ ಹೊರಸೂಸುವ ಈ ಕೆಂಪು ಧೂಳಿನ ವಿಷವರ್ತುಲ ತುಂಗಭದ್ರ ಜಲಾಶಯಕ್ಕೂ ವ್ಯಾಪಿಸಿದೆ. ಬಳ್ಳಾರಿಯ ಶ್ರಮಜೀವಿಗಳ ಬದುಕು ಇದರಿಂದಾಗಿ ನರಕಸದೃಶವಾಗುತ್ತಿದೆ. ಕಬ್ಬಿಣದ ಅದಿರಿನ ಕೇಂದ್ರ, ಮ್ಯಾಂಗನೀಸ್‌ನ ಕಣಜ ಎಂಬ ಖ್ಯಾತಿಗೆ ಹೆಸರಾದ ಪ್ರದೇಶದಲ್ಲಿ ದುಡಿಯುವ ಜನರ ಜೀವನ ಮಾತ್ರ ಕಷ್ಟಿಟ್ಟು ಕೂತಿದೆ.

**ಖಾಸಗಿಯವರ ಕೊರತೆ** : ಈ ಪ್ರದೇಶದಲ್ಲಿ ಕೇಂದ್ರ ಸರಕಾರದ ಎನ್‌ಎಮ್‌ಡಿಸಿ (ನ್ಯಾಷನಲ್ ಮಿನರಲ್ ಡೆವಲಪ್‌ಮೆಂಟ್ ಕಾರ್ಪೊರೇಷನ್) ಮತ್ತು 67 ಮಂದಿ ಖಾಸಗಿ ಮಾಲೀಕರು ಗಣಿಗಾರಿಕೆ ನಡೆಸುತ್ತಿದ್ದಾರೆ. ಸರಕಾರದ ಖಜಾನೆಗೆ ಹೋಗ ಬೇಕಾದ ಅಪಾರ ಹಣವನ್ನು ಖಾಸಗಿಯವರು ತಮ್ಮ ಜೇಬಿಗೆ ತುಂಬಿಕೊಳ್ಳುತ್ತಿದ್ದಾರೆ. ಇವರಿಗೆ ಕಾನೂನು, ತೆರಿಗೆ ನಿಯಮ, ಯಾವುದೂ ಅನ್ವಯವಾಗುತ್ತಿಲ್ಲ.



**ಈ ಬೆಟ್ಟಗಳು ಕ್ರಮೇಣ ಇಲ್ಲವಾಗುತ್ತವೆ, ಉಳಿಯುವುದು ಕೆಂಪು ಮಣ್ಣು . ಸುತ್ತಣ ಹೊಲಗಳು ಕೃಷಿಯೋಗ್ಯವಾಗಿ ಉಳಿಯುವುವೆ?**

ಒಂದರ್ಥದಲ್ಲಿ ಹೇಳುವುದಾದರೆ 50-60 ಕಿ.ಮೀ. ಉದ್ದ, 22 ಕಿ.ಮೀ. ಅಗಲದ ಈ ಬೆಟ್ಟಗಳು ಖಾಸಗಿ ಮಾಲೀಕರನ್ನು ಕೈಬೀಸಿ ಕರೆಯುತ್ತಿವೆ. ಈ ಖನಿಜ ಸಂಪತ್ತಿಗೆ ಮಾರುಹೋಗದವರು ಯಾರಿದ್ದಾರೆ ? ಗೋವಾದ ಸಾಲಗಾಂವ್‌ಕರನಿಂದ ಹಿಡಿದು ಮಾಜಿ ಸಚಿವ ಎಂ.ವೈ. ಘೋರ್ಪಡೆ ತನಕ ನೂರಾರು ಖಾಸಗಿ ಮಾಲೀಕರ ವಿಪುಲ ಬಂಡವಾಳ ಮತ್ತು ಆಕಾಶದೆತ್ತರದ ಲಾಭ ಇಲ್ಲಿ ಲಾರಿಗಳ ರೂಪದಲ್ಲಿ ಓಡಾಡುತ್ತಿವೆ. ಇವರು ಇಲ್ಲಿನ ಖನಿಜ ಸಂಪತ್ತನ್ನು ಲಂಗು ಲಗಾಮಿಲ್ಲದೆ ಲೂಟಿ ಮಾಡುತ್ತಿದ್ದಾರೆ.

ಮೈಸೂರು ಮಿನರಲ್ಸ್ ಮತ್ತು ರಾಜ್ಯ ಸರ್ಕಾರ ನಡೆಸುತ್ತಿದ್ದ ವಹಿವಾಟನ್ನು 1980ರಲ್ಲಿ ಆಗಿನ ಮುಖ್ಯಮಂತ್ರಿ ಆರ್. ಗುಂಡೂರಾವ್ ಗೋವಾದ ಉದ್ಯಮಿ ಸಾಲಗಾಂವ್‌ಕರ್‌ಗೆ ಭಾಗಶಃ ನೀಡಿ ಅವರಿಗೆ ಅಲ್ಲಿನ ಸಂಪತ್ತನ್ನು ಕರಗಿಸಲು ಅವಕಾಶ ಮಾಡಿಕೊಟ್ಟರು. ಇಲ್ಲಿ ತೊಡಗಿಸಲಾಗಿರುವ ಒಟ್ಟು ಬಂಡವಾಳದಲ್ಲಿ ಮೈಸೂರು ಮಿನರಲ್ಸ್ ಕಾರ್ಪೊರೇಷನ್ನಿನದು ಕೇವಲ ಶೇ. 25. ಉಳಿದ ಶೇ. 75 ಸಾಲಗಾಂವ್‌ಕರ್‌ಗೆ ಸೇರಿದೆ. ಅಂದರೆ ಖಾಸಗಿಯವರದೇ ಮೇಲುಗೈ ಎಂಬುದು ಇದರಿಂದ ವಿದಿತ.

**ಆರ್ಥಿಕ ಉದಾರೀಕರಣದ ದುಷ್ಪರಿಣಾಮ** : ಇದು, ಒಂದು ರೀತಿಯಲ್ಲಿ, ಸರಕಾರ ಈಚೆಗೆ ಅನುಸರಿಸುತ್ತ ಬಂದಿರುವ ಆರ್ಥಿಕ ಉದಾರೀಕರಣ ನೀತಿಯ ದುಷ್ಪರಿಣಾಮ ಎಂದೇ ಹೇಳಬಹುದು. ಸಾವಿರಾರು ಬಡ ಕಾರ್ಮಿಕರ ಹಾಗೂ ರೈತರ ಜೀವನಕ್ಕೆ ಸಹಕಾರಿಯಾಗ ಬೇಕಿದ್ದ ಈ ಖನಿಜ ಸಂಪತ್ತು ಖಾಸಗಿ ಬಂಡವಾಳಗಾರರ ಲಾಭ ಹೆಚ್ಚಳಕ್ಕೆ ವಿನಿಯೋಗವಾಗುತ್ತಿದೆ. ಸಂಪತ್ತಿದ್ದರೆ ಸಾಲದು, ಅದರ ಸೂಕ್ತ ನಿರ್ವಹಣೆ, ಸಂಯಮಯುತ ಬಳಕೆ ಅತ್ಯವಶ್ಯ. ಇಲ್ಲದಿದ್ದರೆ ಸಂಪತ್ತೇ ಸಂಕಟಕ್ಕೆ ಮೂಲವಾಗುವ ಸಂಭವ ಹೆಚ್ಚು ಅನ್ನುವುದಕ್ಕೆ ಸೊಂಡೂರು ಒಂದು ಉಜ್ವಲ ನಿದರ್ಶನ.

ಇಲ್ಲಿ ಪ್ರತಿವರ್ಷ ಸುಮಾರು 90 ಲಕ್ಷ ಟನ್ ಕಬ್ಬಿಣದ ಅದಿರನ್ನು ಉತ್ಪಾದಿಸಲಾಗುತ್ತಿದೆ. ಇದರಲ್ಲಿ ಎನ್‌ಎಮ್‌ಡಿ ಸಿಯ ಪಾಲು ಸುಮಾರು 40 ಲಕ್ಷ ಟನ್, ಖಾಸಗಿ ಬಂಡವಾಳಗಾರರದು ಸುಮಾರು 50 ಲಕ್ಷ ಟನ್. ಈ ಅದಿರು ದೇಶೀಯ ಮಾರುಕಟ್ಟೆಯಲ್ಲಿ ಮಾರಾಟವಾಗದೆ ವಿದೇಶಗಳಿಗೇ ಹೆಚ್ಚಾಗಿ ರಫ್ತಾಗುತ್ತಿದೆ. 1998-99ರಲ್ಲಿ ಮಿನರಲ್ಸ್ ಹಾಗೂ ಮೆಟಲ್ ಕಾರ್ಪೊರೇಷನ್ ಒಟ್ಟು 55 ಲಕ್ಷ ಟನ್ ಕಬ್ಬಿಣದ ಅದಿರನ್ನು ರಫ್ತು ಮಾಡಿತು. ಅದಕ್ಕೆ ಹಿಂದಿನ ವರ್ಷ (1997-98ರಲ್ಲಿ) ಅದು 65 ಲಕ್ಷ ಟನ್ ರಫ್ತು ಮಾಡಿದ್ದಿತು. ಕಬ್ಬಿಣಕ್ಕೆ ಬೇಡಿಕೆ ಕಡಿಮೆಯಾಗಿರುವುದು ಹಾಗೂ ಆರ್ಥಿಕ ಬೇಡಿಕೆ ಗಣನೀಯವಾಗಿ ಕುಗ್ಗಿರುವುದು ಇದರಿಂದ ಸ್ಪಷ್ಟ. ಪ್ರಸಕ್ತ ವರ್ಷ, ಅಂದರೆ 1999-2000ದಲ್ಲಿ 50 ಲಕ್ಷ ಟನ್ ಕಬ್ಬಿಣದ ಅದಿರನ್ನು ಮಾರಾಟ ಮಾಡುವ ಗುರಿಯನ್ನು ಹೊಂದಲಾಗಿದೆ.

ಇದರಿಂದ ಸರಕಾರಕ್ಕೆ ಲಾಭ ಎಷ್ಟು ? ಕಬ್ಬಿಣದ ಅದಿರನ್ನು ಬಳ್ಳಾರಿ ಜಿಲ್ಲೆಯಿಂದ ಮದ್ರಾಸ್ ಮತ್ತು ಗೋವಾ ಬಂದರುಗಳಿಗೆ ಸಾಗಿಸುವುದರಿಂದ ರೈಲ್ವೆ ಇಲಾಖೆಗೆ ಪ್ರತಿ ವರ್ಷ ಸುಮಾರು 230 ಕೋಟಿ ರೂಪಾಯಿ ಆದಾಯ ಬರುತ್ತಿದೆ ಎನ್ನುತ್ತಾರೆ. ಆದರೆ ಇದನ್ನು ಲಾಭವೆಂದು ಹೇಳಲಾಗುವುದಿಲ್ಲ.

ಅದೇ ರೀತಿ ರಾಯಲ್ಟಿ ಮೂಲಕ ಸರಕಾರಕ್ಕೆ 16 ಕೋಟಿ ರೂಪಾಯಿ ದಕ್ಕುತ್ತಿದೆ. ಮಾರಾಟ ತೆರಿಗೆ ಮತ್ತು ಸಾರಿಗೆ ತೆರಿಗೆಯ ಮೂಲಕ 10-15 ಕೋಟಿ ರೂ. ಸಂದಾಯವಾಗುತ್ತಿದೆ. ತೆರಿಗೆಯ ರೂಪದಲ್ಲಿ ಕೇಂದ್ರ



ಖನಿಜ ಸಂಪತ್ತಿನ ಲೂಟಿಯಲ್ಲಿ ಮಾನವ ಸಂಪತ್ತು ನುಚ್ಚುನೂರಾಗುತ್ತಿದೆ.

ಸರಕಾರಕ್ಕೆ ಪ್ರತಿ ವರ್ಷ ಸುಮಾರು 30 ಕೋಟಿ ರೂ. ಆದಾಯ ಬರುತ್ತಿದೆ. ಒಟ್ಟಾರೆ ಬಳ್ಳಾರಿ ಜಿಲ್ಲೆಯ ಈ ಉದ್ಯಮದಿಂದಾಗಿ ಎರಡೂ ಸರಕಾರಗಳಿಗೆ ನೂರಾರು ಕೋಟಿ ರೂ. ಸಂದಾಯವಾಗುತ್ತಿದೆ. ಇದರಲ್ಲಿ ಎಷ್ಟು ಭಾಗ ಬಳ್ಳಾರಿ ಜಿಲ್ಲೆಯ ಅಭಿವೃದ್ಧಿಗೆ ತೊಡಗಿಸಲಾಗುತ್ತಿದೆ ಎಂಬುದು ಒಂದು ಯಕ್ಷ ಪ್ರಶ್ನೆ. ಜೊತೆಗೆ ಆ ಸಂಪತ್ತಿನ ಬೆಲೆಯನ್ನು ಅಷ್ಟು ಕೆಳಮಟ್ಟದಲ್ಲಿ ನಿಗದಿಗೊಳಿಸಿದ್ದೇಕೆ ಎಂಬ ಪ್ರಶ್ನೆಯೂ ಉದ್ಭವಿಸುತ್ತದೆ.

**ಕಾರ್ಮಿಕರ ಬಾಳು ಕರುಣಾಜನಕ :** ಇಷ್ಟೆಲ್ಲಾ ವಹಿವಾಟು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ನಡೆಯುತ್ತಿದ್ದರೂ ಮೂಲ ಸಂಪತ್ತಿನ ಒಡೆಯರಾದ ರೈತರ ಮತ್ತು ಈ ಸಂಪತ್ತಿನ ಸೃಷ್ಟಿಕರ್ತರಾದ ಕಾರ್ಮಿಕರ ಬಾಳು ತುಂಬ ದುಸ್ತರವಾಗಿದೆ. ಅವರ ಜೀವನ ಧೂಳಿನಿಂದ ಧೂಳೀಪಟವಾಗುತ್ತಿದೆ. ಗಣಿಗಾರಿಕೆಯಲ್ಲಿ ರಾತ್ರಿ, ಹಗಲೆನ್ನದೆ ದಿನದ 24 ಗಂಟೆಗಳ ಕಾಲವೂ ಜೀತದಾಳುಗಳಂತೆ ಕೆಲಸ ಮಾಡುತ್ತಿರುವ ಕಾರ್ಮಿಕನಿಗೆ ಕನಿಷ್ಠ ವೇತನದ ಭಾಗ್ಯವೂ ಇಲ್ಲ. ಪ್ರತಿ ಕ್ಷಣವೂ ಸಾವನ್ನು ಕೈಯಲ್ಲಿ ಹಿಡಿದುಕೊಂಡೇ ದುಡಿಯುತ್ತಿರುವ ಅವರಿಗೆ ಸಿಗುವ ದಿನದ ಸಂಬಳ 30ರೂ. ಮಾತ್ರ.

ಕೆಲಸದ ಸ್ಥಿತಿಯಂತೂ ಅವರ್ಣನೀಯ. ಕೆಂಪು ಕೆಸರಿನಲ್ಲಿ ಮುಳುಗಿ ಮೇಲೆದ್ದ ಮನುಷ್ಯನ ಸ್ಥಿತಿ ಅವರದು. ಇಲ್ಲಿ ಬಳಸಲಾಗುತ್ತಿರುವ ಸಲಕರಣೆಗಳೂ ಆಧುನಿಕವೇನಲ್ಲ. ಗುತ್ತಿಗೆ ಆಧಾರದಲ್ಲಿಯೇ ಕೆಲಸಕ್ಕೆ ನೇಮಕ ಮಾಡಿಕೊಳ್ಳುವ ಇಲ್ಲಿನ ಬಂಡವಾಳಗಾರರು ಕಾರ್ಮಿಕರ ಸ್ಥಿತಿಗತಿಗಳ ಬಗೆಗೆ ವಿಚಾರಿಸುವ ಗೊಡವೆಗೂ ಹೋಗುತ್ತಿಲ್ಲ.

**ಮಿತಿಮೀರಿದ ಪರಿಸರ ಮಾಲಿನ್ಯ :** ಹೊರಬರುವ ಧೂಳು ಮತ್ತು ಕಣಿವೆಯಲ್ಲಿನ ಕರ್ಕಶ ನಾದದಿಂದ ಇಲ್ಲಿನ ನಿವಾಸಿಗಳಿಗೆ ಎರಡು ರೀತಿಯ ಮಾಲಿನ್ಯದ ನೇರ ಪರಿಚಯವಾಗಿದೆ. ಕ್ಯಾನ್ಸರ್, ಟಿ.ಬಿ., ಅಸ್ತಮಾದಂಥ ಭಯಾನಕ ರೋಗಗಳಿಗೆ ಇಲ್ಲಿಯ ಜನ ತುತ್ತಾಗುತ್ತಿದ್ದಾರೆ.

ಸೊಂಡೂರಿನ ತಾರಾನಗರ ಪ್ರದೇಶದಲ್ಲಿ ಟಿ.ಎಂ.ಎಲ್.ನ ನೂರಾರು ಅದಿರು ಸಾಗಿಸುವ ಲಾರಿಗಳ ಓಡಾಡುವಿಕೆಯಿಂದ ಬನಹಟ್ಟಿ, ತಾರಾ ನಗರ, ನಾಗಲಾಪುರ, ಲಿಂಗದಳ್ಳಿ ಗ್ರಾಮಗಳ ಪರಿಸರ ಸಂಪೂರ್ಣವಾಗಿ ನಾಶವಾಗಿದೆ. ಫಸಲು ನಾಶವಂತೂ ಹೇಳತೀರದು. ಜೊತೆಗೆ ಅರಣ್ಯ ನಾಶವೂ ಅವ್ಯಾಹತವಾಗಿ ಸಾಗಿದೆ. ಮರಗಿಡಗಳ ಮೇಲೆ ಒಂದಿಂಚಿನಷ್ಟು ಧೂಳು ಕೂತರೇ ಅವು ನಶಿಸುವಾಗ, ಪೈರಿನ ಮೇಲೆ ಅಷ್ಟು ಧೂಳು ಕೂತಾಗ ಪರಿಣಾಮ ಹೇಗಿರುತ್ತದೆ ? ಸಹಜವಾಗಿಯೇ ಇಲ್ಲಿಯ ಕೃಷಿಗೆ ಬಲವಾದ ಪೆಟ್ಟು ಬಿದ್ದಿದೆ.

ಈ ವಿಷಮ ಸ್ಥಿತಿ ನಾಲ್ಕು ವರ್ಷಗಳಿಂದೀಚೆಗೆ ವಿಪರೀತವಾಗಿ ಹರಡುತ್ತಿದೆ. ಕುಡಿಯುವ ನೀರಿನಿಂದ ಹಿಡಿದು ಹರಿವ ನೀರೂ ಕಲುಷಿತಗೊಂಡು ಸಾಂಕ್ರಾಮಿಕ ರೋಗಗಳಿಗೆ ಕಾರಣವಾಗುತ್ತಿದೆ.

**ಅವೈಜ್ಞಾನಿಕ ಗಣಿಗಾರಿಕೆ :** ಇಂತಹ ಕಲುಷಿತ ನೀರು ಕುಡಿದ ಜನರಷ್ಟೇ ಅಲ್ಲ, ದನಕರುಗಳೂ ರೋಗಗ್ರಸ್ತವಾಗುತ್ತಿವೆ. ತಾರಾನಗರ ಮತ್ತಿತರ ಪ್ರದೇಶಗಳಲ್ಲಿ ಶೇಂಗಾ, ಜೋಳ, ಸೂರ್ಯಕಾಂತಿ ಬೆಳೆಗಳ ಸಾವಿರಾರು ಎಕರೆ ಜಮೀನಿನ ಮೇಲೆ ಧೂಳು ಕವಿದು ರೈತರಿಗೆ ಪ್ರತಿ ವರ್ಷ ಸುಮಾರು ಹತ್ತುಕೋಟಿ ರೂಪಾಯಿಯಷ್ಟು ಹಾನಿಯಾಗುತ್ತಿದೆ. ಎಷ್ಟೇ ಒತ್ತಾಯಿಸಿದರೂ ಯಾವುದೇ ರೀತಿಯ ಪರಿಹಾರವೂ ಇದುವರೆಗೆ ಸಂದಿಲ್ಲ.

ಇವೆಲ್ಲ ಅವೈಜ್ಞಾನಿಕ ಗಣಿಗಾರಿಕೆ ಹಾಗೂ ಅದಿರು ಮತ್ತು ಪೌಡರ್ ಸಾಗಾಣಿಕೆಗಳ ನೇರ ಪರಿಣಾಮಗಳೆಂದು ಬೇರೆ ಹೇಳಬೇಕಾಗಿಲ್ಲ. ಲಾಭದ ಹೆಚ್ಚಳಕ್ಕೇ ಗಮನ ಕೊಡುವಾಗ ಸ್ಥಳೀಯರ ಪಾಡು ಹೇಗಾದರೂ ಆಗಲಿ ಎಂಬ ಭಾವನೆ ಇಲ್ಲಿಯ ಉದ್ಯಮಶೀಲ ವ್ಯಕ್ತಿಗಳದ್ದು.

ಇಲ್ಲಿ ನಡೆಯುತ್ತಿರುವ ಅವ್ಯಾಹತ ಪರಿಸರ ನಾಶವನ್ನು ಕುರಿತಂತೆ ತಹಸೀಲ್ದಾರರ ನೇತೃತ್ವದ ಒಂದು ಸಮಿತಿ ವರದಿಯೊಂದನ್ನು ನೀಡಿ, ಇಲ್ಲಿನ ಗಣಿಗಾರಿಕೆ, ಲಾರಿಯಲ್ಲಿ ಡಂಪ್ ಮಾಡುವ ಪದ್ಧತಿ, ಇವೆಲ್ಲ ಈ ಪರಿಸರ ನಾಶಕ್ಕೆ ಕಾರಣವೆಂದು ತಿಳಿಸಿದೆ. ಲಾಭ ಮಾಡಹೊರಡುವ ಉದ್ಯಮಿಯು ಗಣಿಗಾರಿಕೆಯನ್ನು ಶುದ್ಧ ವೈಜ್ಞಾನಿಕ ಪದ್ಧತಿಯಲ್ಲಿ ಮಾಡಬೇಕೆಂಬ ಪ್ರಾಥಮಿಕ ಜವಾಬ್ದಾರಿಯನ್ನೂ ನಿರಾಕರಿಸುವುದು ಇಲ್ಲಿಯ ಪಿಡುಗಾಗಿದೆ.



ನನ್ನ ಯಜಮಾನ್ರು 'ಚಂದ್ರಲೋಕ'-ದಲ್ಲೂ ಸಹ 2 ಸೈಟ್ ಕೊಂಡು-ಕೊಂಡಿದ್ದಾರೆ ಗೊತ್ತಾ !

ಇಲ್ಲಿನ ಅಧಿಕಾರಿಗಳು, ಪೊಲೀಸು ಇಲಾಖೆ, ಪರಿಸರ ಇಲಾಖೆ ಮುಂತಾದ ಸರಕಾರಿ ಅಂಗಗಳು ಕಬ್ಬಿಣದ ಅದಿರನ್ನು ಸಾಗಿಸುವ ಖಾಸಗಿ ಕಂಪನಿ ಮಾಲೀಕರ ಜೊತೆ ಶಾಮೀಲಾಗಿದ್ದಾರೆಂಬ ಅಂಶ ವರದಿಯ ಮೂಲಕ ಹೊರಬಂದಿದೆ.

**ಸುಪ್ರಿಂ ಕೋರ್ಟ್ ಆದೇಶ :** ಪರಿಸರ ನಾಶ, ರೈತರ ಗೋಳು, ಕಾರ್ಮಿಕರ ಪರಿತಾಪ, ಇವನ್ನು ನೋಡಿಯೇ ಸುಪ್ರಿಂ ಕೋರ್ಟ್ ಕೂಡ ಇತ್ತೀಚೆಗೆ ಒಂದು ಆದೇಶ ಹೊರಡಿಸಿದೆ. ಪರಿಸರನಾಶವನ್ನು ತೀವ್ರವಾಗಿ ಉಂಟು ಮಾಡುತ್ತಿರುವ ಧೂಳನ್ನು ತಡೆಯಬೇಕೆಂಬ ಅಂಶವನ್ನು ಈ ಆದೇಶ ಒತ್ತಿಹೇಳಿದೆ. ಇದನ್ನು ತಪ್ಪಿಸಲು ಹಲವು ನಿಯಮಗಳ ಒಂದು ಸಂಹಿತೆಯನ್ನು ರೂಪಿಸಲೂ ಈ ಆದೇಶ ಸೂಚಿಸಿದೆ.

ಇಷ್ಟಾದರೂ ಪರಿಸರ ಇಲಾಖೆ ಇನ್ನೂ ಯಾವುದೇ ಕಟ್ಟುನಿಟ್ಟಿನ ಕ್ರಮ ಕೈಗೊಳ್ಳುತ್ತಿಲ್ಲವೆಂಬುದು ಅಚ್ಚರಿ ಮತ್ತು ರೋಷಕ್ಕೆ ಎಡೆ ಮಾಡಿಕೊಟ್ಟಿದೆ. ಒಂದು ಉದಾಹರಣೆ ನೀಡುವುದಾದರೆ, ಸಾಲಗಾಂವ್‌ಕರ್ ಕಂಪನಿ ಒಂದು ದಿನಕ್ಕೆ ಎರಡೂವರೆ ಸಾವಿರ ಟನ್ ಅದಿರನ್ನು ಒಯ್ಯುತ್ತಿದೆ. ಅದಿರನ್ನು ಡಂಪ್ ಮಾಡುವಾಗ ಹೊರಬೀಳುವ ಧೂಳು ಇಡೀ ಪರಿಸರಕ್ಕೆ ಧಕ್ಕೆ ತರುತ್ತಿದ್ದರೂ, ಡಂಪ್ ಮಾಡುವುದರಲ್ಲಿ ಹೊಸ ವೈಜ್ಞಾನಿಕ ವಿಧಾನವನ್ನು ಅಳವಡಿಸುವ ಯೋಚನೆಯನ್ನು ಕೂಡ ಆ ಕಂಪನಿ ಮಾಡುತ್ತಿಲ್ಲ.

ಸರಕಾರದ ದೃಷ್ಟಿಯಲ್ಲಿ ಇದೊಂದು ಲಾಭ ತರುವ ಕೇಂದ್ರ. ಇಲ್ಲಿಯ ಜನ, ಅವರ ದುರ್ಭರ ಬಾಳು ಸರಕಾರದ ಕಣ್ಣಿಗೆ ಕಾಣುತ್ತಿಲ್ಲ. ಅದಕ್ಕೆ ಕಾಣುವುದೆಲ್ಲ ಅದಿರಿನ ಬೆಟ್ಟಗಳೇ.

**ಜನಾಂದೋಳನ :** ಇನ್ನೆಷ್ಟು ಕಾಲ ಇದು ಹೀಗೇ ಸಾಗುತ್ತಿರಬೇಕೆಂಬುದು ಜನಮನದಲ್ಲಿ ಸುಳಿಯುತ್ತಿದೆ. ಖಾಸಗಿ ಮಾಲೀಕರ ಕಪಿಮುಷ್ಟಿಯಲ್ಲಿ ಸಿಕ್ಕಿಬಿದ್ದು ಇಲ್ಲಿನ ಸುಂದರ ಪ್ರಕೃತಿ, ಖನಿಜ ಸಂಪತ್ತು ಮತ್ತು ಶುದ್ಧ ವಾತಾವರಣಕ್ಕೆ ಎಲ್ಲಿಲ್ಲದ ಕುತ್ತು ಒದಗಿಬಂದಿರುವುದು ಜನರ ರೋಷ ಕೆರಳಿಸಿದೆ. ಸೊಂಡೂರು ತಾಲ್ಲೂಕಿನ ಸುಮಾರು ಐದು ನೂರು ರೈತರು ಅಖಿಲ ಭಾರತ ಕಿಸಾನ್ ಸಭಾದ ನೇತೃತ್ವದಲ್ಲಿ ಈಚೆಗೆ ಬೃಹತ್ ಮೆರವಣಿಗೆ ನಡೆಸಿ ವ್ಯಾಪಕ ಕಾರ್ಯಕ್ರಮ ಹಮ್ಮಿಕೊಂಡಿದ್ದಾರೆ.

ಬಾಗೂರು-ನವಿಲೆ ಹೋರಾಟದಿಂದ ಸ್ಫೂರ್ತಿಗೊಂಡ ಇಲ್ಲಿನ ರೈತರೂ, ಕಾರ್ಮಿಕರೂ ಕರ್ನಾಟಕ ರೈತ ಸಂಘ ಹಾಗೂ ಎಐಟಿಯುಸಿಗಳ ಬೆಂಬಲದೊಂದಿಗೆ ಬೃಹತ್ ಸಭೆ, ಮೆರವಣಿಗೆಗಳನ್ನು ನಡೆಸುತ್ತಿದ್ದಾರೆ. ಹಾನಿಗೊಳಗಾದ ರೈತರಿಗೆ ಸೂಕ್ತ ಪರಿಹಾರ ನೀಡಬೇಕು, ಪಟ್ಟಾ ಜಮೀನಿನಲ್ಲಿ ಅಕ್ರಮ ಗಣಿಗಾರಿಕೆ ಹಾಗೂ ಅವೈಜ್ಞಾನಿಕ ಅದಿರು ಸಾಗಣೆ ನಿಲ್ಲಬೇಕು ಎಂದು ಆಗ್ರಹಿಸಿ ಅವರು ಹೋರಾಟದ ಒಂದು ಅಂಗವಾಗಿ ಅದಿರು ಸಾಗಣೆ ಲಾರಿ ತಡೆ ಚಳುವಳಿಯನ್ನೂ ನಡೆಸಲು ಮುಂದಾಗಿದ್ದಾರೆ.

**ಗೋಪಾಲ್ - ಲಕ್ಷ್ಮಣ್**
ಘಾಟೆಭವನ, ಜಿ. ಡಿ. ಪಾರ್ಕ್ ಎಕ್ಸ್‌ಟೆನ್ಷನ್, ಬೆಂಗಳೂರು - ೫೬೦ ೦೦೩

ನಮ್ಮ ಪತ್ರಿಕೆಗಳು ಕಾಶ್ಮೀರದಲ್ಲಾಗುತ್ತಿರುವ ಕದನಕ್ಕೆ ಕೋಮುವಾದದ ಬಣ್ಣ ಹಚ್ಚಿ ವರದಿ ಮಾಡುವುದನ್ನು ನಿಲ್ಲಿಸಬೇಕಾಗಿದೆ ಮತ್ತು ಮುಂಬರುವ ಲೋಕಸಭಾ ಚುನಾವಣೆಯ ಸಂದರ್ಭದಲ್ಲಿ ರಾಜಕೀಯ ಪಕ್ಷಗಳ ಮುಖವಾಣಿಗಳಾಗದಂತೆ ಎಚ್ಚರ ವಹಿಸಬೇಕಾಗಿದೆ. ಜಾತೀಯತೆ ಮತ್ತು ಕೋಮುವಾದ ಜನಸಾಮಾನ್ಯರನ್ನು ರೊಚ್ಚಿಗೇಳಿಸುತ್ತದೆ. ಸಮಾಜದಲ್ಲಿನ ಶಾಂತಿ ಮತ್ತು ಸಹಿಷ್ಣುತೆಗಳನ್ನು ಬಲಿ ತೆಗೆದುಕೊಳ್ಳುತ್ತದೆ. ಅದರಿಂದಾಗಿ ನಮ್ಮ ರಾಷ್ಟ್ರದ ಪ್ರಜಾಪ್ರಭುತ್ವಕ್ಕೇ ಧಕ್ಕೆ ಉಂಟಾಗುತ್ತದೆ. ಈ ಬಗ್ಗೆ ಪತ್ರಿಕೆಗಳು ತಮ್ಮ ಜವಾಬ್ದಾರಿಯನ್ನೂ ಮನಗಾಣಬೇಕಾಗಿದೆ. ಕಾಶ್ಮೀರದ ಸಮಸ್ಯೆಯನ್ನು ಇಂದು ಮತೀಯ ಕಣ್ಣುಗಳಿಂದ ನೋಡಲಾಗುತ್ತಿದೆ. ಅಲ್ಲಿರುವ ಜನರಲ್ಲಿ ಹೆಚ್ಚಿನವರು ಮುಸ್ಲಿಮರಾಗಿದ್ದಾರೆಂಬ ಕಾರಣದಿಂದಲೇ ಬಹುತೇಕ ಮುಸ್ಲಿಮ್ ರಾಷ್ಟ್ರಗಳು ಪಾಕಿಸ್ತಾನವನ್ನು ಬೆಂಬಲಿಸುತ್ತಿವೆ. ಈ ಸಮಸ್ಯೆಯನ್ನು ಪತ್ರಿಕೆಗಳು ಕೋಮು ದೃಷ್ಟಿಯಿಂದ ನೋಡುವ ಬದಲು ಅಲ್ಲಿಯ ನೊಂದ ಜನರನ್ನು ಸಾಂತ್ವನಗೊಳಿಸಿ ಅವರಲ್ಲಿ ಭರವಸೆ ಮೂಡಿಸಬೇಕಾಗಿದೆ. ಅನ್ಯರಾಷ್ಟ್ರಗಳು ಭಾರತದ ಮೇಲೆ ಸಾಲದ ಹೊರೆ ಹೊರಿಸಿ ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಗುಲಾಮಗಿರಿಯತ್ತ ತಳ್ಳುತ್ತಿವೆ. ವಿಷಾದನೀಯ ವಿಷಯವೆಂದರೆ ನಮ್ಮ ರಾಷ್ಟ್ರವನ್ನು ಅಸ್ಥಿರಗೊಳಿಸುವ ಪಿತೂರಿಗಳಲ್ಲಿ ನಿರತರಾಗಿರುವ ಕೆಲವು ಅಂತರರಾಷ್ಟ್ರೀಯ ಏಜೆನ್ಸಿಗಳು ಮತ್ತು ಸಂಸ್ಥೆಗಳು ಕೊಡುವ ದಕ್ಷಿಣೆಗಾಗಿ ಸಾಷ್ಟಾಂಗ ಮಾಡುವ ಪತ್ರಕರ್ತರು ನಮ್ಮಲ್ಲಿದ್ದಾರೆ. ತಮ್ಮ ಧೋರಣೆ ಮತ್ತು ಸಿದ್ಧಾಂತಗಳನ್ನು ಅನುಸರಿಸುವ ಬಾಲಂಗೋಚಿಗಳಾಗುವಂತೆ ಕೆಲವು ಪತ್ರಕರ್ತರನ್ನು ಅಂತರರಾಷ್ಟ್ರೀಯ ಸಂಸ್ಥೆಗಳು ತಮ್ಮ ಸೇವಾಪಟ್ಟಿಯಲ್ಲಿರಿಸಿಕೊಂಡಿವೆ. ಅಮೆರಿಕಾದ ಸಿ.ಐ.ಎ ಇಲ್ಲಿನ ಸ್ಥಳೀಯ ಪತ್ರಿಕೋದ್ಯೋಗಿಗಳನ್ನು ತನ್ನ ಪ್ರಚಾರಕರನ್ನಾಗಿ ನೇಮಕ ಮಾಡಿಕೊಂಡಿರುವುದನ್ನು ಆ ಸಂಘಟನೆಯ ಮುಖ್ಯಸ್ಥ ಅಮೆರಿಕದ ಸೆನೆಟ್ ಸಮಿತಿಯ ಮುಂದೆ ಹೇಳಿಕೆ ನೀಡಿದ್ದಾನೆ. ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ, ವಿಶ್ವಬ್ಯಾಂಕ್ ಮತ್ತು ಕೆಲವು ಬಹುರಾಷ್ಟ್ರೀಯ ಸಂಘಟನೆಗಳು ಭಾರತವನ್ನು ಯಾವ ರೀತಿಯಲ್ಲಿ ಆರ್ಥಿಕವಾಗಿ ನಿರ್ವೀರ್ಯಗೊಳಿಸುತ್ತಿವೆ ಮತ್ತು ಗುಲಾಮಗಿರಿಯತ್ತ ತಳ್ಳುತ್ತಿವೆ ಎಂಬುದರ ಬಗ್ಗೆ ಜನಸಾಮಾನ್ಯರಲ್ಲಿ ತಿಳುವಳಿಕೆ ಮೂಡಿಸುವುದು ನಮ್ಮ ಮಾಧ್ಯಮಗಳ ಪ್ರಮುಖ ಜವಾಬ್ದಾರಿಯಾಗಿದೆ.

*(ಭಾರತೀಯ ಭಾಷಾ ವೃತ್ತಪತ್ರಿಕೆಗಳ ಸಂಘಟನೆಯ 58ನೆಯ ಸರ್ವಸದಸ್ಯರ ಸಭೆಯಲ್ಲಿ ಭಾರತೀಯ ಪತ್ರಿಕಾ ಮಂಡಲಿಯ ಅಧ್ಯಕ್ಷ ನ್ಯಾಯಮೂರ್ತಿ ಪಿ.ಬಿ. ಸಾವಂತ್ ಅವರ ಭಾಷಣದಿಂದ).*

**-ವಿದೇಶಿ ಬಂಡವಾಳಕ್ಕಾಗಿ ರಾಷ್ಟ್ರದ ಹಿತಾಸಕ್ತಿಗಳನ್ನೇ ಮಣ್ಣುಪಾಲು ಮಾಡುತ್ತಿರುವ ರಾಜಕೀಯ ಧುರೀಣರು ಮತ್ತು ಆರ್ಥಿಕ ತಜ್ಞರು ನಮ್ಮಲ್ಲಿದ್ದಾರೆ. ಅದಕ್ಕೆ ಸರಿಯಾಗಿ ತಾಳಹಾಕುವ ರಾಷ್ಟ್ರಮಟ್ಟದ ಪತ್ರಿಕೆಗಳು ಮತ್ತು ಸಂಪಾದಕ ವರ್ಗ ಏರುತ್ತಲೇ ಇವೆ. ಇಂತಹ ವಾತಾವರಣದಲ್ಲಿ ಕೆಲವು ಎಚ್ಚರಿಕೆಯ ಮಾತುಗಳನ್ನಾಡಿರುವ ಶ್ರೀ ಸಾವಂತ್ ನಿಜವಾಗಿಯೂ ಅಭಿನಂದನಾರ್ಹರು.**

**ಅದಿರಲಿ, ಇತ್ತೀಚಿನ ಕೆಲವು ಘಟನೆಗಳನ್ನು ನೆನಪಿಸಿಕೊಂಡರೆ, ಭಾರತೀಯ ನೌಕಾಪಡೆಯ ಮುಖ್ಯಸ್ಥರಾಗಿದ್ದ ಶ್ರೀ ವಿಷ್ಣು ಭಾಗವತ್ ಅವರಿಗಾದ ಪಾಡು ಇವರಿಗೂ ಆದರೆ ಆಶ್ಚರ್ಯವೇನಿಲ್ಲ!**

ನನ್ನ ಮಟ್ಟಿಗೆ ಹೇಳುವುದಾದರೆ ನಾನು ಯಾವ ಮತಧರ್ಮವನ್ನೂ ಅನುಸರಿಸುವವನಲ್ಲ, ದೇವರಲ್ಲಿಯೂ ನನಗೆ ನಂಬಿಕೆಯಿಲ್ಲ. ಆದರೆ ಯಾರಿಗಾದರೂ ಒಂದು ಮತಧರ್ಮ ಬೇಕೆನಿಸಿದರೆ ಅಂಥವರು ಆದಿವಾಸಿಗಳು ಆಚರಿಸುವಂತಹ ಧರ್ಮವನ್ನು ಸ್ವೀಕರಿಸಬೇಕು. ಆದಿವಾಸಿ ದೇವತೆಗಳು ನಮಗಿಂತ ಭಿನ್ನವಾದವರಲ್ಲ, ಅವರು ನಮ್ಮೊಡನೆಯೇ ಇರುವವರು; ಅವರು ನಮ್ಮ ಗೆಳೆಯರು, ನಮ್ಮ ಪೂರ್ವಜರು; ಅವರು ನಮಗಿಂತ ಮೊದಲು ಜೀವಿಸಿದ್ದ ಮನುಜರು. ನಾವು ಹೇಗೆ ನಡೆದುಕೊಳ್ಳಬೇಕು, ಯಾವ್ಯಾವುದು ನಮಗೆ ನಿಷಿದ್ಧ ಎಂಬಂತಹ ವಿಚಾರಗಳಲ್ಲಿ ಅವರು ನಮ್ಮ ಮೇಲೆ ಅತಿಯಾದ ನಿರ್ಬಂಧಗಳನ್ನೇನೂ ಹೇರುವುದಿಲ್ಲ. ಹಬ್ಬದ ದಿನಗಳಲ್ಲಿ ಅವರ ಪಾದಗಳಿಗೆ ಎರಗುತ್ತಾ ನಾವು ತೃಪ್ತಿಯನ್ನು ಪಡೆದುಕೊಳ್ಳುವುದಿಲ್ಲ. ಹಬ್ಬಗಳು ಬಂದಾಗ ಯಾವ ಅಡೆತಡೆಗಳೂ ಇಲ್ಲದೆ ಒಟ್ಟು ಸೇರುವ, ನಲಿದಾಡುವ ಸಮಯ ನಮಗೆ. ಈ ಪ್ರಪಂಚವನ್ನು ತೊರೆದು ಹೋಗಾಚೆ ಎಂದು ನಮ್ಮ ದೇವತೆಗಳು ನಮಗೆ ಹೇಳುವುದಿಲ್ಲ. ನಮ್ಮ ಸಾಕ್ಷಾತ್ ಜೀವನದ ಬಗ್ಗೆ ಅವರು ಪ್ರೀತಿಯನ್ನು ಕಟ್ಟಿಕೊಡುತ್ತಾರೆ.

-ಆದಿವಾಸಿ ಕಾರ್ಯಕರ್ತ ಹಾಗೂ ಕವಿ ವಹಾರು ಸೋನಾವಣೆ.

ನಮಗೆ ಭಾರತದ ಜೊತೆ ಸ್ನೇಹ ಸಂಬಂಧಗಳು ಬೇಡ. ಅದು ಸಾಧ್ಯವೂ ಅಲ್ಲ........ ಭಾರತೀಯ ಜನತಾ ಪಕ್ಷ ಅಧಿಕಾರದಲ್ಲಿರುವುದು ನಮ್ಮ ಆಲೋಚನೆ, ಕಾರ್ಯಾಚರಣೆಗಳಿಗೆ ಸರಿಹೊಂದುತ್ತದೆ. ನೋಡಿ! ಒಂದೇ ಒಂದು ವರ್ಷದಲ್ಲಿ ಪಾಕಿಸ್ತಾನವು ಅಣುಬಾಂಬು ಮತ್ತು ಕ್ಷಿಪಣಿಗಳನ್ನು ಹೊಂದಿರುವ ಶಕ್ತಿಯುತ ರಾಷ್ಟ್ರವಾಗಲು ಅವರು ಕಾರಣರಾಗಿದ್ದಾರೆ. ಬಿ.ಜೆ.ಪಿಯ ಹೇಳಿಕೆಗಳಿಂದಾಗಿ ನಮ್ಮ ಸಂಘಟನೆಗೆ ಒಳ್ಳೆಯ ಪ್ರತಿಕ್ರಿಯೆ ಸಿಗುತ್ತಿದೆ. ಈ ರೀತಿಯ ಪ್ರತಿಕ್ರಿಯೆ ಹಿಂದೆ ಇದ್ದದ್ದಕ್ಕಿಂತ ಈಗ ಬಹುಪಾಲು ಮೇಲು. ಅವರೇ ಮತ್ತೆ ಅಧಿಕಾರಕ್ಕೆ ಬರಲೆಂದು ನಾವು ದೇವರಲ್ಲಿ ಪ್ರಾರ್ಥಿಸುತ್ತೇವೆ. ಆಗ ನಾವು ಇನ್ನೂ ಪ್ರಬಲರಾಗಿ ಬೆಳೆಯುತ್ತೇವೆ.

*(ಹಿಂದೂಸ್ತಾನ್ ಟೈಮ್ಸ್ ಪತ್ರಿಕೆಯ ಇಸ್ಲಾಮಾಬಾದಿನ ವರದಿಗಾರ ಭಾರತ್ ಭೂಷಣ್ ಅಲ್ಲಿನ ಇಸ್ಲಾಮಿ ಮೂಲಭೂತವಾದಿ ಸಂಘಟನೆ ''ಲಷ್ಕರ್-ಇ-ತಾಯ್ಬೆಬ''ದ ವಾರ್ತಾ ಕಾರ್ಯದರ್ಶಿಯನ್ನು ಸಂದರ್ಶಿಸಿದಾಗ ಆತನಿಂದ ಬಂದ ಪ್ರತಿಕ್ರಿಯೆ).*

**-ಭಾರತದ ವಿರುದ್ಧ ''ಧರ್ಮಯುದ್ಧ'' ಘೋಷಿಸಬೇಕೆಂದು ಪದೇ ಪದೇ ದನಿ ಎತ್ತುವ ''ಲಷ್ಕರ್-ಇ-ತಾಯ್ಬೆಬ'' ಕಾರ್ಗಿಲ್ ದುಸ್ಸಾಹಸದ ಮುಂಚೂಣಿಯಲ್ಲಿದ್ದ ಸಂಘಟನೆ. ಪಾಕಿಸ್ತಾನ ಕಾರ್ಗಿಲ್‌ನಿಂದ ತನ್ನ ಪಡೆಗಳನ್ನು ವಾಪಸ್ ಪಡೆಯಲು ತೀವ್ರ ವಿರೋಧ ವ್ಯಕ್ತಪಡಿಸಿದ ಸಂಘಟನೆಯೂ ಇದು. ಭಾರತದಲ್ಲಿನ ಮೂಲಭೂತವಾದಿ ಸಂಘಟನೆಗಳ ಪ್ರತಿನಿಧಿಗಳನ್ನು ಸಂದರ್ಶಿಸಿದರೆ ನಮ್ಮ ಮಿಲಿಟರಿ ಶಕ್ತಿಯ ಹಿನ್ನೆಲೆಯಲ್ಲಿ ಇದೇ ರೀತಿಯ ಪ್ರತಿಕ್ರಿಯೆ ಬಂದರೆ ಆಶ್ಚರ್ಯವಿಲ್ಲ. ಎರಡೂ ಒಂದೇ ಹೂರಣದ ಸಾಮಗ್ರಿಗಳು!**

ಲಾರೆನ್ಸ್ ಸಮ್ಮರ್ಸ್ ಎಂಬುವನು ವಿಶ್ವಬ್ಯಾಂಕಿನ ಮುಖ್ಯ ಅರ್ಥಶಾಸ್ತ್ರಜ್ಞನಾಗಿದ್ದ. 1991ರಲ್ಲಿ ತನ್ನ ಸಹೋದ್ಯೋಗಿಯೊಬ್ಬನಿಗೆ ಅವನು ಒಂದು ಗುಪ್ತ ಟಿಪ್ಪಣಿ ಕಳಿಸಿದ: ''ನಮ್ಮ ನಮ್ಮಲ್ಲೇ ಇರಲಿ ಈ ವಿಷಯ. ನಿನಗೇನನ್ನಿಸುತ್ತದೆ? ಕಡಿಮೆ ಅಭಿವೃದ್ಧಿ ಹೊಂದಿರುವ ದೇಶಗಳಿಗೆ ಹೆಚ್ಚು ಹೆಚ್ಚಾಗಿ ಈ ಹೊಲಸು ಉದ್ಯಮಗಳನ್ನು ವಿಶ್ವಬ್ಯಾಂಕ್ ಸ್ಥಳಾಂತರಿಸಬೇಕಲ್ಲವೆ?'' (ಅಂದರೆ, ವಾತಾವರಣವನ್ನು ಹೆಚ್ಚು ಕಲುಷಿತಗೊಳಿಸುವ, ಆರೋಗ್ಯಕ್ಕೆ ಹೆಚ್ಚು ಅಪಾಯಕಾರಿಯಾದ ಉದ್ಯಮಗಳನ್ನು ಎಂದರ್ಥ). ಆ ದೇಶಗಳಲ್ಲಿ ಮಾನವನ ಜೀವಕ್ಕಿರುವ ಮೌಲ್ಯ ಕಡಿಮೆ ಮಟ್ಟದ್ದು, ಅಲ್ಲಿಯ ದುಡಿಮೆಗೆ ಕೂಲಿ ಕೆಳಮಟ್ಟದ್ದು. ಇದನ್ನು ಹಿನ್ನೆಲೆಯಾಗಿಟ್ಟುಕೊಂಡು ಸಮ್ಮರ್ಸ್ ಹೇಳಿದ: ''ವಿಷಪೂರಿತ ಉಪ ಉತ್ಪನ್ನಗಳನ್ನು ಅತಿ ಕಡಿಮೆ ಮಟ್ಟದ ಕೂಲಿಯಿರುವ ದೇಶಗಳಿಗೆ ಸಾಗಿಹಾಕುವುದು ಆರ್ಥಿಕ ನೆಲೆಯಲ್ಲಿ ತರ್ಕಬದ್ಧವಾಗಿ ಕಾಣುತ್ತದೆ ಮತ್ತು ನಾವದನ್ನು ಅಂಜಿಕೆಯಿಲ್ಲದೆ ಒಪ್ಪಬೇಕು.''

–ವಿಶ್ವಬ್ಯಾಂಕಿನ ನೈತಿಕತೆ, ಆರ್ಥಿಕ ನೀತಿ, ಅನಭಿವೃದ್ಧ ದೇಶಗಳ ಜನರ ಬಗೆಗಿನ ತುಚ್ಛ ಭಾವನೆ, ಇವೆಲ್ಲಾ ಈ ಹೇಳಿಕೆಯಲ್ಲಿ ಸ್ಪಷ್ಟವಾಗಿದೆ. ಅತ್ಯುಚ್ಚಮಟ್ಟದಲ್ಲಿ ಆ ಬ್ಯಾಂಕಿನ ಸೂತ್ರಗಳನ್ನು ನಿರ್ದೇಶಿಸುವವರ ಪ್ರತಿಕ್ರಿಯೆ ಹೇಗಿರಬಹುದೆಂಬುದಕ್ಕೆ ಇದೊಂದು ನಿದರ್ಶನ. ನಮ್ಮ ದೇಶಕ್ಕೆ ಬಂದು ನೂರಾರು ಜನರನ್ನು ಆಹುತಿ ತೆಗೆದುಕೊಂಡ ಭೋಪಾಲ್‌ನ ಯೂನಿಯನ್ ಕಾರ್ಬೈಡ್ ಅಂತಹದ್ದು. ಅಂತಹವು ಬೇರೆಯೂ ಇವೆ. ತಲೆಯ ಮೇಲೆ ಮಲ ತುಂಬಿಸಿಕೊಳ್ಳುವ ಆರ್ಥಿಕ ನೀತಿಯನ್ನು ಅನುಸರಿಸುತ್ತಾ ಬಂದಿರುವ ನಮ್ಮ ಕೇಂದ್ರ ಸರ್ಕಾರ ಮತ್ತು ಆಳುವ ವರ್ಗದ ದೇಶದ್ರೋಹ ಇದರಿಂದ ಗೊತ್ತಾಗುತ್ತದಲ್ಲವೆ?

ಕಾರ್ಗಿಲ್ ಬಿಕ್ಕಟ್ಟಿನ ಸಂದರ್ಭ ಏನನ್ನಾದರೂ ತೋರಿಸಿಕೊಟ್ಟಿದೆ ಎನ್ನುವುದಾದರೆ ಅದು ಇದು: ಅಣ್ವಸ್ತ್ರಗಳನ್ನು ಹೊಂದಿದ ಮಾತ್ರಕ್ಕೆ ಅದು ಅಬದ್ಧ ತೀರ್ಮಾನಗಳನ್ನು ಕೈಗೊಳ್ಳುವ ಸಾಧ್ಯತೆಯನ್ನು ಕೊನೆಗಾಣಿಸುವುದಿಲ್ಲ. ಭಾರತ ಮತ್ತು ಪಾಕಿಸ್ತಾನಗಳೆರಡೂ ಅದಕ್ಕೆ ನಿದರ್ಶನ. ಅಣ್ವಸ್ತ್ರಗಳನ್ನು ಹೊಂದಿ 'ಬೇರಾರಿಗೂ ಅದು ಇಲ್ಲೆಂದು' ಮೊದಲಿಗೆ ಅರ್ಭಟಿಸಿ, ಎರಡು ವಾರಗಳ ನಂತರ ದಿಗ್ಭ್ರಮೆಗೊಂಡು, , ಆಮೇಲೆ ಎಂತೆಂತಹ ಪ್ರಮಾದಗಳನ್ನು ವಾಜಪೇಯಿ ಸರ್ಕಾರ ಮಾಡಿದೆಯೆಂದು ಈಗ ಎಲ್ಲರಿಗೂ ತಿಳಿದಿದೆಯಲ್ಲ.

-ಪಾಕಿಸ್ತಾನದ ಡಾನ್ ಪತ್ರಿಕೆಯಲ್ಲಿ ಅಯಾಜ್ ಅಮೀರ್.



ಸಂದರ್ಶಕರು : **ಡಾ|| ಎನ್. ಗಾಯತ್ರಿ**

# ಉದಾತ್ತ ಸಮಾಜ ಸೇವಕಿ ಅಮ್ಮ ಸುಶೀಲಮ್ಮ



**'ನಿಷ್ಠೆ ಇದ್ದರೆ ಏನನ್ನಾದರೂ ಮಾಡಲು ಸಾಧ್ಯ' - ಸುಶೀಲಮ್ಮ**

*ಹೆಬ್ಬಾಳದ ಚೋಳನಾಯಕನ ಹಳ್ಳಿಯ ಸುಮಂಗಲಿ ಸೇವಾಶ್ರಮ ಇಂದು ಇನ್ನೂರು ಹೆಣ್ಣು ಮಕ್ಕಳ, ತಾಯಂದಿರನ್ನೊಳಗೊಂಡ ಆಶ್ರಮವಾಗಿದೆ. ೧೯೭೫ರಲ್ಲಿ ಸುಶೀಲಮ್ಮ ತಮ್ಮೊಡನೆ ಕೆಲಸ ಮಾಡುತ್ತಿದ್ದ ಗೆಳತಿಯರೊಂದಿಗೆ ಆರಂಭಿಸಿದ ಈ ಆಶ್ರಮ ಮೊದಲು ಬಾಲವಾಡಿಯಾಗಿ, ನಂತರ ಶಾಲೆಯಾಗಿ, ಅನಾಥ ಬಾಲಿಕೆಯರಿಗೆ ಆಶ್ರಯವಾಗಿ, ಪರಿತ್ಯಕ್ತ ಹೆಂಗಸರಿಗೆ ನೆಲೆಯಾಗಿ, ಒಟ್ಟಾರೆಯಾಗಿ ಹೆಣ್ಣು ಮಕ್ಕಳ ಆರ್ಥಿಕ, ಸಾಮಾಜಿಕ ಸ್ವಾವಲಂಬನೆಯ ದಾರಿದೀಪವಾಗಿ ಮಾದರಿಯಾಗಿ ನಿಂತಿದೆ. ಮಹಿಳೆಯರ ಆರ್ಥಿಕ ಸ್ವಾವಲಂಬನೆಯ ನಿಟ್ಟಿನಲ್ಲಿ ಕೈಮಗ್ಗ ತರಬೇತಿ, ಹೊಲಿಗೆ, ನಿಟ್ಟಿಂಗ್, ಡೆಕೋರೇಷನ್, ಪೌಲ್ಟ್ರಿ ಫಾರ್ಮಿಂಗ್, ಬಟ್ಟೆ ಹಾಗೂ ಪಾತ್ರೆ ತೊಳೆಯುವ ಪುಡಿ ತಯಾರಿಕೆ, ಮೋಂಬತ್ತಿ, ಬೊಂಬೆ ಮತ್ತು ಸುಂದರ ರತ್ನಗಂಬಳಿಗಳ ತಯಾರಿಕೆ, ಕೂಲಿ ತಾಯಿಯರ ಮಕ್ಕಳಿಗೆ ಉಚಿತ ಕ್ರೆಷ್ ಮುಂತಾದವು ಮಹತ್ವದ ಪಾತ್ರ ವಹಿಸಿವೆ. ಇದರ ಜೊತೆಗೆ ಅಂಗನವಾಡಿ, ಸಾಕ್ಷರತೆ, ಮಹಿಳಾ ಜಾಗೃತಿ ಶಿಬಿರಗಳು ಮತ್ತು ಕುಟುಂಬ ನ್ಯಾಯ ದೊರಕಿಸುವ ಪ್ರಯತ್ನಗಳು ಆಶ್ರಮದ ವ್ಯಾಪ್ತಿಯನ್ನು ಹಿಗ್ಗಿಸಿವೆ. ಈ ಅದ್ಭುತ ಸಾಧನೆಗೆ ಸುಶೀಲಮ್ಮ ಮತ್ತು ಸುಮಂಗಲಿ ಸೇವಾಶ್ರಮ ಗಳಿಸಿದ ಪ್ರಶಸ್ತಿಗಳು ಹಲವಾರು. ೧೯೮೮ರ ರಾಜ್ಯ ಪ್ರಶಸ್ತಿ, ೧೯೮೫ರ ರಾಷ್ಟ್ರೀಯ ಪುರಸ್ಕಾರ, ೧೯೯೧-೯೨ನೆಯ ಸಾಲಿನ ಬಾಬಾ ಸಾಹೇಬ್ ಅಂಬೇಡ್ಕರ್ ರಾಷ್ಟ್ರೀಯ ಪ್ರಶಸ್ತಿ, ೯೪-೯೫ನೆ ಸಾಲಿನ ಜಾನಕಿದೇವಿ ಬಜಾಜ್ ಪುರಸ್ಕಾರ, ೧೯೯೬ರ ಲಕ್ಷ್ಮಿ ಮೆನನ್ ಪ್ರಶಸ್ತಿ ಮತ್ತು ಇತ್ತೀಚೆಗೆ ಕರ್ನಾಟಕ ಸರ್ಕಾರದಿಂದ ಲಭಿಸಿದ ಕಿತ್ತೂರು ಚೆನ್ನಮ್ಮ ಪ್ರಶಸ್ತಿ, ಹೀಗೆ ಇವುಗಳ ಪಟ್ಟಿ ಸುದೀರ್ಘವಾಗಿದೆ. ಇದೀಗ ಅರವತ್ತು ವಸಂತಗಳನ್ನು ಮುಗಿಸಿರುವ ಶ್ರೀಮತಿ ಎಸ್. ಜಿ. ಸುಶೀಲಮ್ಮನವರಿಗೆ ಶುಭಾಶಯಗಳನ್ನು ಕೋರುತ್ತಾ, ಅವರ ಇನ್ನೂ ಹೆಚ್ಚಿನ ಸಾಧನೆಗಳಿಗೆ ಆಯಸ್ಸು ಮತ್ತು ಆರೋಗ್ಯ ಲಭಿಸಲಿ ಎಂದು ಆಶಿಸುತ್ತಾ 'ಹೊಸತು' ಪತ್ರಿಕೆ ಅವರೊಡನೆ ನಡೆಸಿದ ದೀರ್ಘ ಸಂವಾದದ ಒಂದು ಸಂಕ್ಷಿಪ್ತರೂಪವನ್ನು ಓದುಗರ ಮುಂದಿಡುತ್ತೇವೆ.*

ಸುಮಾರು ಎರಡೂವರೆ ದಶಕಗಳ ಹಿಂದೆ ಬೆಂಗಳೂರಿನ ಎಸ್. ಜಿ. ಸುಶೀಲಮ್ಮ, ಅವರ ಆಪ್ತ ವಲಯದಲ್ಲಿ ಬಿಟ್ಟರೆ ಎಷ್ಟು ಜನಕ್ಕೆ ಗೊತ್ತಿದ್ದರು ? ಆದರೆ ಇಂದು ಎಸ್. ಜಿ. ಸುಶೀಲಮ್ಮ ಮತ್ತು ಅವರು ಕಟ್ಟಿದ ಸುಮಂಗಲಿ ಸೇವಾಶ್ರಮ ಬೆಂಗಳೂರಿನಲ್ಲೇ ಏಕೆ, ಇಡೀ ಕರ್ನಾಟಕದಲ್ಲಿ ಹಾಗೂ ಅದರಾಚೆಗೂ ಪರಿಚಿತ ಹೆಸರಾಗಿದೆ. ಈ ಆಶ್ರಮದ ತಂಪಿನಲ್ಲಿ ಹೊಸಬೆಳಕು ಕಂಡ ಜೀವಗಳು ಹಲವಾರು. ಇಂದು ಎಸ್. ಜಿ. ಸುಶೀಲಮ್ಮ ಮತ್ತು ಸುಮಂಗಲಿ ಸೇವಾಶ್ರಮ ಎರಡೂ ಬೇರ್ಪಡಿಸಲಾಗದ ಹೆಸರುಗಳಾಗಿವೆ.

ಅರವತ್ತು ವರ್ಷಗಳ ಹಿಂದೆ ಬೆಂಗಳೂರಿನ ಚಾಮರಾಜಪೇಟೆಯಲ್ಲಿ ಅನುಕೂಲವಂತ ನೇಕಾರ ಕುಟುಂಬದಲ್ಲಿ ಜನಿಸಿದ ಸುಶೀಲಮ್ಮ ಸುಖದ ದಿನಗಳಂತೆ ಕಷ್ಟದ ದಿನಗಳನ್ನೂ ಕಂಡವರು. ಎರಡನೇ ಮಹಾಯುದ್ಧದ ಸಮಯದಲ್ಲಿ ಅವರ ತಂದೆ ಎದುರಿಸಿದ ವ್ಯಾಪಾರದ ನಷ್ಟದಿಂದ ಅವರ ಕುಟುಂಬ ಸಂಕಷ್ಟಗಳನ್ನು ಎದುರಿಸಬೇಕಾಗಿ ಬಂತು. ಆಗ ಶಾಲೆ ಕಲಿಯುತ್ತಿದ್ದ ಬಾಲಕಿ ಸುಶೀಲಮ್ಮ ಟ್ಯೂಷನ್ ಹೇಳಿ ತಂದೆಗೆ ನೆರವಾದರು. ತಂದೆಯ ಮರಣಾನಂತರ ಪಿಯುಸಿ ಓದುತ್ತಿದ್ದ ಸುಶೀಲಮ್ಮ ಮಧ್ಯದಲ್ಲಿ ಓದು ನಿಲ್ಲಿಸಿ ರೆಮ್ಕೊ ಫ್ಯಾಕ್ಟರಿಯಲ್ಲಿ ಕೆಲಸಕ್ಕೆ ಸೇರಿದರು ಮತ್ತು ಫ್ಯಾಕ್ಟರಿಯೇ ನಡೆಸುತ್ತಿದ್ದ ಬಾಲವಾಡಿಯಲ್ಲಿ ವಿಶೇಷ ಆಸಕ್ತಿ ತೋರಿದರು. ಎಳೆತನದಿಂದ ಗೀಳಾಗಿ ಅಂಟಿದ ಸಮಾಜಕಾರ್ಯ ಅವರು ಹೋದಲ್ಲೆಲ್ಲಾ ವ್ಯಾಪಿಸಿ ಮನದಲ್ಲೇ ಹೆಮ್ಮರವಾಗಿ ಬೆಳೆದು ನಿಂತಾಗ ಅವರಿಂದ ಫ್ಯಾಕ್ಟರಿಯ ಕೆಲಸ ಮುಂದುವರೆಸಲಾಗಲಿಲ್ಲ. ಆ ವೇಳೆಗಾಗಲೆ ಮದುವೆಯಾಗಿ ಮೂರು ಮಕ್ಕಳ ತಾಯಿಯಾಗಿದ್ದ ಅವರ ಮನಸ್ಸು ಆಧ್ಯಾತ್ಮದತ್ತ ಸೆಳೆದಿತ್ತು. ಮಾತೆ ಮಹಾದೇವಿಯಿಂದ ಆಕರ್ಷಿತರಾಗಿದ್ದರು. ಈ ಎಲ್ಲ ಸೆಳೆತಗಳ ಹಿನ್ನೆಲೆಯಲ್ಲಿ ಫ್ಯಾಕ್ಟರಿಗೆ ರಾಜೀನಾಮೆ ಕೊಟ್ಟು ಗಂಡನಿಗೆ ಮತ್ತೊಂದು ಮದುವೆಯಾಗಲು ಹೇಳಿ ಬಂಧನದಿಂದ ಮುಕ್ತರಾಗಿ ಮೂರು ಮಕ್ಕಳೊಂದಿಗೆ ಮನೆಯಿಂದ ಹೊರಬಿದ್ದ ಸುಶೀಲಮ್ಮ ಈಗ ಒಂದು ದೊಡ್ಡ ಸೇವಾಶ್ರಮದ ರೂವಾರಿಯಾಗಿ ನಮ್ಮ ಕಣ್ಣಮುಂದೆ ನಿಲ್ಲುತ್ತಾರೆ. ಇಂದು ಹತ್ತು ಹಲವು ದಿಕ್ಕಿನಲ್ಲಿ ಕೆಲಸ ಮಾಡುತ್ತಾ, 'ಸಮಾಜ ಸೇವೆ' ಯೆಂಬ ಪದಕ್ಕೆ ಗೌರವ ತಂದುಕೊಟ್ಟ ಈ ಸಂಸ್ಥೆಯ ಬೆಳವಣಿಗೆಯ ಹಿಂದೆ ಕಲ್ಲು, ಮುಳ್ಳಿನ ಒಂದು ನಿಡಿದಾದ ಕತೆಯಿದೆ. ಇವತ್ತಿನ ಈ ಸಂಸ್ಥೆಯ ಸಾಧನೆಯ ಸ್ವರೂಪದ ಹಿಂದಿರುವ ಚಿಂತನೆಯ ಬಗೆಗೆ 'ಹೊಸತು' ಪತ್ರಿಕೆ ಸುಶೀಲಮ್ಮನವರನ್ನು ಸಂದರ್ಶಿಸುವ ಲಾಭ ಪಡೆದಿದೆ.

ಸುಶೀಲಮ್ಮನವರ ಸ್ತ್ರೀಪರ ಕಾಳಜಿ ವ್ಯಾಪಕವಾದದ್ದು. 'ಹೊಸತು' ಪತ್ರಿಕೆಯ ಬಿಡುಗಡೆಯ ಆಹ್ವಾನ ಪತ್ರಿಕೆಯ ಮೇಲೆ ಕಣ್ಣಾಡಿಸಿ ನನ್ನ ಜೊತೆಯಲ್ಲಿದ್ದ ಪತ್ರಿಕೆಯ ಸಂಪಾದಕರನ್ನು ಕುರಿತು 'ಸರ್, ನೀವೇನೂ ತಪ್ಪು ತಿಳಿದುಕೊಳ್ಳದಿದ್ದರೆ ನನ್ನದೊಂದು ಆಕ್ಷೇಪಣೆಯಿದೆ. ಹೇಳಲಾ ?' ಎಂದು ವಿನಯದಿಂದ ಕೇಳಿದರು. 'ಅಲ್ಲಾ, ನಮ್ಮ ಸುತ್ತಮುತ್ತ ಎಷ್ಟೊಂದು ಯಶಸ್ವೀ ಮಹಿಳೆಯರು ಸಿಗುತ್ತಾರೆ; ನಿಮಗೆ ಕಾರ್ಯಕ್ರಮಕ್ಕೆ ಆಹ್ವಾನಿಸಲು ಒಬ್ಬ ಮಹಿಳೆಯೂ ಸಿಗಲಿಲ್ಲವೆ ? ನಾನು ನಿಮಗಷ್ಟೇ ಅಲ್ಲ, ಹೋದಲ್ಲೆಲ್ಲಾ ಇದನ್ನೇ ಹೇಳುತ್ತಾ ಬಂದಿದ್ದೇನೆ. ಪ್ರಜ್ಞಾಪೂರ್ವಕವಾಗಿ ನಾವು ಎಲ್ಲಿಯವರೆಗೆ ಇಂತಹ ಅಂಶಗಳಿಗೆ ಗಮನಕೊಡುವುದಿಲ್ಲವೋ ಅಲ್ಲಿಯವರೆಗೆ ಎಷ್ಟೇ ಸ್ತ್ರೀ ಅಭಿವೃದ್ಧಿಯ ಬಗೆಗೆ ಮಾತನಾಡಿದರೂ ಅದು ಕಾರ್ಯರೂಪಕ್ಕೆ ಬರುವುದಿಲ್ಲ' ಎಂದರು.

ಸುಶೀಲಮ್ಮನವರ ಚಿಂತನೆ ಮತ್ತು ಕ್ರಿಯೆಗಳು ನಿಜವಾದ ಸ್ತ್ರೀವಾದಿ ಸಿದ್ಧಾಂತದ ಕೆಲವು ಮುಖಗಳ ಪರಿಚಯ ಮಾಡಿಕೊಡುತ್ತದೆ. ಹೆಣ್ಣಿನ ಸಾಮರ್ಥ್ಯ ಮತ್ತು ನಿಷ್ಠೆಯ ಬಗ್ಗೆ ಅವರಿಗೆ ಎಷ್ಟೊಂದು ಅಚಲ ವಿಶ್ವಾಸವೆಂದರೆ ಮಹಿಳೆ ಮನಸ್ಸು ಮಾಡಿದರೆ ಏನನ್ನಾದರೂ ಸಾಧಿಸಬಲ್ಲಳು ಎಂಬುದು ಅವರ ನಂಬಿಕೆ. ಅದಕ್ಕೆ ಫಲಶ್ರುತಿಯಾಗಿ ಈಗ ಮೂರ್ತವಾಗಿ ನಿಂತಿದೆ ಸುಮಂಗಲಿ ಸೇವಾಶ್ರಮ. ಆಶ್ರಮದ ಸಕಲ ಕಾರ್ಯಗಳನ್ನೂ ಮಹಿಳೆಯರೇ ನಡೆಸುತ್ತಾರೆ. ವಾಹನ ಚಾಲಕರೇ ಮುಂತಾದ ಒಂದಿಬ್ಬರು ಮೂವರು ಪುರುಷರನ್ನು ಬಿಟ್ಟರೆ ಉಳಿದವರೆಲ್ಲಾ ಮಹಿಳೆಯರೇ. ಪುರುಷದ್ವೇಷಿಯೇನೂ ಅಲ್ಲದ ಸುಶೀಲಮ್ಮ ಮಹಿಳೆಯರಿಗೇ ಸಾಮರ್ಥ್ಯವಿರುವಾಗ ಅನಗತ್ಯವಾಗಿ ಪುರುಷರನ್ನು ಅವಲಂಬಿಸಬೇಕಿಲ್ಲವೆಂದು ನಂಬಿದವರು. ಅವರ ನಂಬಿಕೆಗೆ ಸಾಕ್ಷಿಯೆಂಬಂತೆ ಅವರ ಜೀಪನ್ನು ನಡೆಸುವ ಶ್ರೀದೇವಿ ಎಂತಹ ಪುರುಷರನ್ನೂ ಸಾಮರ್ಥ್ಯದಲ್ಲಿ ಬೆಚ್ಚಿಬೀಳಿಸಬಲ್ಲರು. ಜೀಪಿರಲಿ, ಬಸ್ಸು, ಲಾರಿ ಬೇಕಾದರೂ ಓಡಿಸಬಲ್ಲೆ ಎಂಬ ಆತ್ಮಸ್ಥೈರ್ಯವಿರುವ ಶ್ರೀದೇವಿ ಹತ್ತಾರು ಜವಾಬ್ದಾರಿಗಳನ್ನು ಹೊತ್ತು ಸುಶೀಲಮ್ಮನವರಿಗೆ ಆಪ್ತ ಸಹಾಯಕಿಯೂ ಆಗಿದ್ದಾರೆ.

ಮಹಿಳೆಯರು ಯಾರೇ ಆಗಿರಲಿ, ಯಾವುದೇ ಕಾರ್ಯಕ್ರಮ ಮಾಡಲಿ ಸುಶೀಲಮ್ಮನವರ ಪ್ರೋತ್ಸಾಹ, ಬೆಂಬಲ ಅದಕ್ಕಿರುತ್ತದೆ. ಸರ್ಕಾರದಿಂದಾಗಲಿ, ಸಾಮಾಜಿಕ ಸಂಸ್ಥೆಗಳಿಂದಾಗಲೀ ತಮಗೆ ಸಿಗುವ ಎಷ್ಟೋ ಉದ್ಯೋಗದ ಅವಕಾಶಗಳನ್ನು ಬೇರೆ ಸಂಘ ಸಂಸ್ಥೆಗಳಿಗೆ ಹಂಚಿದ್ದಾರೆ. ಯಾರು ಏನೇ ಮಾಡಲಿ, ಒಟ್ಟಾರೆಯಾಗಿ ಮಹಿಳೆಯರ ಶ್ರೇಯೋಭಿವೃದ್ಧಿಯಾದರೆ ಸಾಕು ಎನ್ನುವ ಸುಶೀಲಮ್ಮನವರಿಗೆ ಬ್ಯಾನರ್, ಕೀರ್ತಿ ಪತಾಕೆಗಳ ಹುಚ್ಚಿಲ್ಲ. ಸುಶೀಲಮ್ಮನವರ ಈ ಮನೋಭಾವದಿಂದ ನಮ್ಮ ಮಹಿಳಾ ಸಂಘಟನೆಗಳು ಕಲಿಯುವುದು ಬಹಳಷ್ಟಿವೆ.

**ಹೊಸತು** : ನೀವು ಈ ಆಶ್ರಮವನ್ನು ಆರಂಭಿಸಿದ್ದು ಹೇಗೆ ?

**ಸುಶೀಲಮ್ಮ** : ನನಗೆ ಚಿಕ್ಕಂದಿನಿಂದಲೂ 'ಸಮಾಜ ಸೇವೆ' ಎಂಬ ಪದದ ಅರ್ಥ ಸರಿಯಾಗಿ ಗೊತ್ತಿಲ್ಲದಿದ್ದರೂ ನನ್ನ ಸುತ್ತಮುತ್ತಲ ಸಮಾಜಕ್ಕೆ ಏನಾದರೂ ಮಾಡಬೇಕೆನಿಸಿತ್ತು. ಒಂದು ಶಾಲೆ

ತೆರೆಯಬೇಕೆಂಬ ಮನಸ್ಸಾಯಿತು. ಆಡುಗೋಡಿಯಲ್ಲಿ ಭುವನೇಶ್ವರಿ ಮಹಿಳಾ ಸಮಾಜ ಎಂದು ತೆರೆದು ಅಲ್ಲಿ ಮೊದಲು ಒಂದು ಶಾಲೆ, ಬಾಲವಾಡಿ ಆರಂಭಿಸಿದೆವು. ನಂತರ ಮಕ್ಕಳ ಮೂಲಕ ಅವರ ತಾಯಂದಿರನ್ನು ಸೇರಿಸಿ ಸಮಾಜ ಆರಂಭಿಸಿದೆವು. ನಂತರ ಸಮಾಜ ಸೇವೆ ಅಂದರೂ, ನನ್ನ ಮುಖ್ಯ ಗುರಿ ಮಹಿಳೆ ಹಾಗೂ ಮಕ್ಕಳ ಸರ್ವತೋಮುಖ ಅಭಿವೃದ್ಧಿ. ಪ್ರತಿಯೊಬ್ಬ ಮಹಿಳೆಯೂ ಆರ್ಥಿಕ ಸ್ವಾವಲಂಬನೆ ಸಾಧಿಸದ ಹೊರತು ಸರ್ವಾಂಗೀಣ ಅಭಿವೃದ್ಧಿ ಸಾಧ್ಯವಿಲ್ಲ ಎನ್ನುವುದು ನನ್ನ ಅಭಿಪ್ರಾಯ. ಹಾಗಾಗಿ ೧೯೭೫ರಲ್ಲಿ ಸುಮಂಗಲಿ ಸೇವಾಶ್ರಮ ನೋಂದಾಯಿತವಾಗಿ ಅಂದಿನಿಂದ ಇಂದಿಗೆ ಸತತವಾಗಿ ಬೆಳೆಯುತ್ತಾ ಸಾಗಿದೆ. ೧೯೭೭ರಲ್ಲಿ ಈ ಜಾಗಕ್ಕೆ ಬಂದೆವು. ನಾವು ಯಾವಾಗಲೂ ನಮ್ಮ ಚಟುವಟಿಕೆಗಳನ್ನು ಮಕ್ಕಳ ಮೂಲಕವೇ ಆರಂಭಿಸಿದ್ದೇವೆ. ನಾವೆಲ್ಲಾ ಸಮಾನ ಮನಸ್ಕ ಮಹಿಳೆಯರು ಒಟ್ಟಾಗಿ ಸೇರಿ ಈ ಆಶ್ರಮ ಆರಂಭಿಸಿದೆವು.

**ಹೊ** : ನಿಮ್ಮ ಆಶ್ರಮದ ಫಲಾನುಭವಿಗಳು ಸುಮಾರು ಎಂತಹವರು ? ಯಾವ ವರ್ಗದಿಂದ, ಯಾವ ಸ್ಥಳದಿಂದ ಬರುತ್ತಾರೆ ?

**ಸು** : ನಮ್ಮಲ್ಲಿ ಸುಮಾರು ಮಂದಿ ಕರ್ನಾಟಕದ ವಿವಿಧ ಭಾಗಗಳಿಂದ ಬರುತ್ತಾರೆ. ವಿವಿಧ ವರ್ಗಗಳಿಂದ ಬರುತ್ತಾರೆ. ಉದಾಹರಣೆಗೆ, ನಮ್ಮಲ್ಲಿ ಕೌಟುಂಬಿಕ ನ್ಯಾಯ ಅರಸಿ ಬರುವವರು, ಅವಿದ್ಯಾವಂತ ಕೂಲಿ ಜನರಿಂದ ಹಿಡಿದು ಸುಶಿಕ್ಷಿತರಾದವರು, ವೈದ್ಯರು, ಪೋಲಿಸ್ ಇನ್ಸ್‌ಪೆಕ್ಟರ್‌ಗಳು, ಹಲವಾರು ವೃತ್ತಿಗಳಲ್ಲಿರುವವರು, ಬೇರೆ ಬೇರೆ ಜಿಲ್ಲೆಗಳಿಂದ ಬರುತ್ತಾರೆ. ನ್ಯಾಯಾಲಯದಲ್ಲೂ ಇತ್ಯರ್ಥವಾಗದ ಎಷ್ಟೋ ಸಮಸ್ಯೆಗಳನ್ನು ನಾವು ಬಗೆಹರಿಸಿದ್ದೇವೆ ಎಂಬ ತೃಪ್ತಿ ಇದೆ. ಅಷ್ಟೇ ಅಲ್ಲದೆ ತಂದೆ-ತಾಯಿ ಇಲ್ಲದವರು, ಇದ್ದರೂ ಉಪಯೋಗವಿಲ್ಲದೆ ಓದಲು ತೊಂದರೆಪಡುವ ಹೆಣ್ಣುಮಕ್ಕಳು ಇಲ್ಲಿ ಆಶ್ರಯಕ್ಕಾಗಿ ಬರುವುದಿದೆ. ಭಗ್ನ ಪ್ರೇಮ ವಿವಾಹಗಳಿಂದ ನೊಂದ ಮಹಿಳೆಯರು, ವರದಕ್ಷಿಣೆ-ಕೌಟುಂಬಿಕ ಹಿಂಸೆಗಳಿಂದ ನೊಂದ ಹೆಣ್ಣುಗಳು ಇಲ್ಲಿ ಆಶ್ರಯ ಕೋರಿ ಬರುತ್ತಾರೆ. ಇನ್ನು ನಾವು ಕೂಲಿ ಮಾಡುವ ತಾಯಂದಿರ ಮಕ್ಕಳಿಗಾಗಿ ಉಚಿತ ಕ್ರೆಷ್ ನಡೆಸುತ್ತೇವೆ. ಸುಮಾರು ೨೦೦ ಮಕ್ಕಳು ಇದ್ದಾರೆ. ಅಂಗನವಾಡಿಗಳನ್ನು ಗ್ರಾಮಾಂತರ ಪ್ರದೇಶಗಳಲ್ಲಿ ನಡೆಸುತ್ತೇವೆ.

**ಹೊ** : ಸರ್ಕಾರವು ನಿಮ್ಮ ಕೆಲಸದ ದಕ್ಷತೆಯನ್ನು ನೋಡಿ ಹಲವಾರು ಯೋಜನೆಗಳನ್ನು ನಿಮಗೆ ಕೊಟ್ಟಿವೆ ಎಂದು ಕೇಳಿದ್ದೆ. ಅವು ಯಾವುವು ?

**ಸು** : ನಮಗೆ ಅಂಗನವಾಡಿ ನಡೆಸಲು ಪ್ರಾಜೆಕ್ಟ್ ಕೊಟ್ಟಿದ್ದಾರೆ. ಹಾಗೇ ಗ್ರಾಮೀಣ ಮಹಿಳೆಯರಿಗೆ ಜಾಗೃತಿ ಶಿಬಿರಗಳನ್ನು ನಡೆಸಲು, ಚುನಾಯಿತ ಮಹಿಳೆಯರಿಗೆ ತರಬೇತಿ ಶಿಬಿರಗಳು, ಅಂಗನವಾಡಿ ಶಿಕ್ಷಕಿಯರಿಗೆ ಶಿಬಿರಗಳು, ಮಹಿಳೆಯರಿಗೆ ಉದ್ಯಮಶೀಲ ಶಿಬಿರಗಳು, ಮುಂತಾದ ಇನ್ನೂ ಹಲವಾರು ಯೋಜನೆಗಳನ್ನು ನಮಗೆ ಕೊಟ್ಟಿದ್ದಾರೆ.

**ಹೊ** : ಹೊರಗಿನ ಸಾಕ್ಷರತಾ ಚಳುವಳಿಯಲ್ಲೂ ನೀವು ಭಾಗವಹಿಸಿದ್ದೀರಿ. ಹಾಗೆಯೇ ನಿಮ್ಮ ಸಂಸ್ಥೆಯ ಮೂಲಕವೂ ಸಾಕ್ಷರತಾ ಚಳುವಳಿಯನ್ನು ನಡೆಸಿದವರು. ಈ ಎರಡರ ಅನುಭವದ ಹಿನ್ನೆಲೆಯಲ್ಲಿ ಈ ಚಳುವಳಿಯನ್ನು ವಿವರಿಸುತ್ತೀರಾ ?

**ಸು** : ಸರ್ಕಾರ ನಡೆಸುತ್ತಿದ್ದ ಸಾಕ್ಷರತಾ ಚಳುವಳಿಯಲ್ಲೂ ಭಾಗವಹಿಸಿದ್ದೇವೆ. ಅಲ್ಲಿನ ಅನುಭವವೆಂದರೆ ಬೃಹತ್ ಸಂಖ್ಯೆಯಲ್ಲಿ ಚಳುವಳಿ ನಡೆದಾಗ ಅದರ ಫಲಿತಾಂಶ ಹೇಗಿರುತ್ತದೆಂದರೆ ನಮ್ಮ ಸಭೆಗಳಲ್ಲಿ ಮಂಡಿಸುವ ಅಂಕಿ ಸಂಖ್ಯೆಗಳಲ್ಲಿ ಸಾಕ್ಷರತೆ ಆಗಿರುತ್ತೆ, ಆದರೆ ಆ ಹಳ್ಳಿಗಳಿಗೆ ಹೋಗಿ ನೋಡಿದಾಗ ಎಲ್ಲರೂ ಸಾಕ್ಷರರು ಆಗಿರುವುದಿಲ್ಲ. ಆದ್ದರಿಂದ ಸಣ್ಣ ಪ್ರಮಾಣದಲ್ಲಾದರೂ ಆ ಹಳ್ಳಿಯ ಜನರನ್ನೇ ಸೇರಿಸಿಕೊಂಡು ಸಾಕ್ಷರತೆಯ ಕಾರ್ಯ ನಡೆಸಿದಾಗ ಅದರ ಫಲಿತಾಂಶವೇ ಬೇರೆಯಾಗಿರುತ್ತೆ. ಚಾಕೋಲೆಟ್ ಬಾಗೂರಿನಲ್ಲಿ ನಮಗಾದ ಅನುಭವ ನೋಡಿ. ಅಲ್ಲಿನ ಯುವಕರ ಮಂಡಳಿಗಳ ಸಹಾಯದಿಂದ ಪದೇ ಪದೇ ಸಭೆಗಳು, ಮೇಲ್ವಿಚಾರಣೆಗಳ ಮೂಲಕ ಆ ಹಳ್ಳಿಯ ಜನರಲ್ಲಿ ಮೋಟಿವೇಷನ್‌ಗೆ ಪ್ರಯತ್ನಿಸಿದೆವು. ಧ್ವಜಾರೋಹಣ ಕಾರ್ಯಕ್ರಮ ಇಟ್ಟುಕೊಳ್ಳುತ್ತಿದ್ದೆವು. ಪೂರ್ತಿ ಅನಕ್ಷರಸ್ಥರಿದ್ದರೆ ನೀಲಿಬಣ್ಣ, ಅಕ್ಷರಸ್ಥರಾದರೆ ಬಿಳಿಬಣ್ಣ, ಇಬ್ಬರೂ ಇದ್ದರೆ ಮಿಶ್ರ ಬಣ್ಣದ ಧ್ವಜಗಳನ್ನು ಹಾರಿಸುತ್ತಿದ್ದೆವು. ನಾಟಕಗಳ ಮೂಲಕ ಸಾಕ್ಷರತೆಯ ಪ್ರಾಮುಖ್ಯತೆಯನ್ನು ಸಾರುತ್ತಿದ್ದೆವು. ಒಂದು ಚಿಕ್ಕ ಹಳ್ಳಿಯನ್ನೇ ಕೇಂದ್ರೀಕರಿಸಿ ನಮ್ಮೆಲ್ಲ ಸಮಯ, ಗಮನವನ್ನು ಅದಕ್ಕೆ ಧಾರೆಯೆರೆದು, ಶಿಕ್ಷಣದ ಸಲಕರಣೆಗಳನ್ನು ಒದಗಿಸುತ್ತಿದ್ದೆವು. ಸರ್ಕಾರ ಕೂಡ ಜನಕ್ಕೆ ಮೋಟಿವೇಷನ್ ಮಾಡಲಿಕ್ಕೆ ಸಾಕ್ಷರರಾದವರ ಮನೆಯ ಮುಂದೆ ರಸ್ತೆ ರಿಪೇರಿ, ನೀರಿನ ವ್ಯವಸ್ಥೆ, ಹೀಗೆ ಯಾವುದೋ ಒಂದು ರೀತಿಯ ಪ್ರೋತ್ಸಾಹ ಕೊಟ್ಟಿದ್ದರೆ ಚೆನ್ನಾಗಿರುತ್ತಿತ್ತು. ಈಗ 'ಗುಂಪಿನಲ್ಲಿ ಗೋವಿಂದ' ಎನ್ನುವ ರೀತಿ ಸರ್ಕಾರದ ಸಾಕ್ಷರತಾ ಕಾರ್ಯಕ್ರಮ ಆಗಿಬಿಟ್ಟಿದೆ.

**ಹೊ** : ನೀವು ಕೊಳಚೆ ಪ್ರದೇಶದಲ್ಲೂ ಕೆಲಸ ಮಾಡಿದ್ದೀರಾ ?

**ಸು** : ಹೌದು. ಸುಬ್ರಹ್ಮಣ್ಯ ನಗರದ ಕೊಳಚೆ ಪ್ರದೇಶದ ನೂರು ಗುಡಿಸಲುಗಳ ಸ್ವಚ್ಛತೆ ಮತ್ತು ಶಿಕ್ಷಣದ ಬಗೆಗೆ ಗಮನ ಹರಿಸಿದೀವಿ. ಮುಖ್ಯವಾಗಿ 'ಕಪ್ಪುರಾಜ್ ಬಂಡೆ' ಎಂದು ಕರೆಯಲ್ಪಡುತ್ತಿದ್ದ ಕೊಳಚೆ ಪ್ರದೇಶವನ್ನು ಅಲ್ಲಿನ ಜನರ ಸಹಾಯದಿಂದಲೇ ಅಭಿವೃದ್ಧಿ ಪಡಿಸುವಲ್ಲಿ ಶ್ರಮಿಸಿದ್ದೇವೆ. ಅಲ್ಲಿನ ಜನರು ಕಲ್ಲೊಡೆದು ಜೀವಿಸುವವರು. ಅವರಿಗೆ ನಿವೇಶನ ಕೊಡಿಸಿ ಮನೆ ಕಟ್ಟಿಕೊಳ್ಳಲು ಸಾಲ ಕೊಡಿಸಿದ್ದೇವೆ. ಈಗ ಅದೊಂದು ಸುಂದರ ಪ್ರದೇಶವಾಗಿ ಪರಿವರ್ತನೆಗೊಂಡು 'ಶಕ್ತಿ ನಗರ' ಎಂದು ಹೆಸರು ಪಡೆದಿದೆ. ಮನಸ್ಸು ಮಾಡಿದರೆ ಏನನ್ನಾದರೂ ಮಾಡಬಹುದು ಎಂಬುದಕ್ಕೆ ಇದೇ ಉತ್ತಮ ನಿದರ್ಶನ.

**ಹೊ** : ಮದ್ಯಪಾನ ನಿರೋಧದ ಚಳುವಳಿಯಲ್ಲಿ ನಿಮ್ಮದು ಎಂತಹ ಪಾತ್ರ ?

**ಸು** : ನಮ್ಮ ಆಶ್ರಮದ ಸುತ್ತಮುತ್ತಲಿನ ಸಾರಾಯಿ-ಮದ್ಯದ ಅಂಗಡಿಗಳನ್ನು ಮುಚ್ಚಬೇಕು ಹಾಗೂ ರಾಜ್ಯದಲ್ಲಿ ಪಾನ ನಿಷೇಧ ಜಾರಿಗೆ ತರಬೇಕು ಎಂದು ಒತ್ತಾಯಿಸಿ ಸುಮಾರು ಒಂದು ಸಾವಿರ ಮಹಿಳೆಯರು ಹೆಬ್ಬಾಳ ರಸ್ತೆ ತಡೆ ಮಾಡಿದೆವು. ಇಲ್ಲಿದ್ದ ಮದ್ಯದ ಅಂಗಡಿಯನ್ನು ಮುಚ್ಚಿಸಲು ಪ್ರಯತ್ನ ಪಟ್ಟೆವು. ಆದರೆ ಸರ್ಕಾರದ ಬೊಕ್ಕಸ ತುಂಬುವವರು ಇವರಾದ್ದರಿಂದ ಅಧಿಕಾರಸ್ಥರ ಬೆಂಬಲದಿಂದ ಮತ್ತೆ ಲೈಸೆನ್ಸ್ ಪಡೆಯುತ್ತಾರೆ. ಇದು ನಮ್ಮ ಮಿತಿಯನ್ನು ಮೀರಿದ ಸಮಸ್ಯೆ. ಅದಕ್ಕೆ ಈಗ ಮದ್ಯಪಾನ ಬಿಟ್ಟಂತಹವರನ್ನು ಹಳ್ಳಿಗಳಿಗೆ ಕರ್ಕೊಂಡುಹೋಗಿ ಜನಜಾಗೃತಿ ಮೂಡಿಸುವ ಮಟ್ಟಿಗೆ ನಮ್ಮ ಕಾರ್ಯಕ್ರಮ ಸೀಮಿತಗೊಳಿಸಿಕೊಂಡಿದ್ದೇವೆ.

**ಹೊ** : ನಿಮ್ಮದು ಸಮಾಜ ಸುಧಾರಣೆಯ ಕೆಲಸ. ತುಂಬಾ ಸಂತೋಷ ಇದಲ್ಲದೆ ಇವತ್ತಿನ ಮಹಿಳಾ ಚಳುವಳಿಯೊಂದಿಗೆ ನೀವು ಎಂತಹ ಸಂಬಂಧ ಇಟ್ಟುಕೊಂಡಿದ್ದೀರಾ ?

**ಸು** : ಮಹಿಳೆಯರ ಅಭಿವೃದ್ಧಿಗಾಗಿ ನಡೆಸುವ ಯಾವುದೇ ಚಳುವಳಿಯಿರಲಿ, ಅದರೊಂದಿಗೆ ನಾವು ಭಾಗಿಯಾಗುತ್ತೇವೆ. ಅದು ವರದಕ್ಷಿಣೆ ವಿರೋಧವಿರಬಹುದು, ಮೀಸಲಾತಿ ಪರ ಚಳುವಳಿಯಾಗಿರಬಹುದು, ಸೌಂದರ್ಯ ಸ್ಪರ್ಧೆ ವಿರೋಧಿ ಚಳುವಳಿಯಾಗಬಹುದು, ಎಲ್ಲದರಲ್ಲೂ ನಾವು ಭಾಗವಹಿಸುತ್ತೇವೆ.

**ಹೊ** : ಇಂದಿನ ಮಹಿಳಾ ಮೀಸಲಾತಿಯ ಸಾಧ್ಯತೆ ಬಗ್ಗೆ ನಿಮಗೆ ಏನನ್ನಿಸುತ್ತೆ ?

**ಸು** : ಈ ಮಹಿಳಾ ಮೀಸಲಾತಿಯೆನ್ನುವುದು ಒಂದು ಥರಾ ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದ ಹಾಗೆ ಆಗಿದೆ. ಪುರುಷರು ಅಂದ್ಕೊಂಡಿರಲಿಲ್ಲ, ಹೆಂಗಸರಿಗೆ ಮೀಸಲಾತಿ ಕೊಟ್ಟರೆ ಅವರು ಅದನ್ನು ಸರಿಯಾಗಿ ಬಳಸಿಕೊಳ್ಳಬಲ್ಲರು ಅಂತ. ಹೇಗೂ ಅದನ್ನು ಉಪಯೋಗಿಸಿಕೊಳ್ಳುವುದಿಲ್ಲ ಎಂದೇ ಭಾವಿಸಿದ್ದರು. ಆದರೆ ಶೇ. ೪೦ರಷ್ಟು ಮಹಿಳೆಯರು ಪಂಚಾಯಿತಿಯಲ್ಲಿ ಚುನಾಯಿತರಾಗಿ ಪುರುಷರೂ ಬೆಚ್ಚುವಂತೆ ಮಾಡಿದ್ದಾರೆ. ಇನ್ನು ಲೋಕಸಭೆ, ಶಾಸನ ಸಭೆಗಳಲ್ಲಿ ಏಕೆ ಬೇಡ ? ಖಂಡಿತವಾಗಿಯೂ ಅಲ್ಲೂ ನಮ್ಮ ಮಹಿಳೆಯರಿಗೆ ಮೀಸಲಾತಿ ಸಿಕ್ಕಬೇಕು. ಸಿಕ್ಕಾಗ ಮಹಿಳೆಯರು ಅದನ್ನು ಸಮರ್ಥವಾಗಿ ಬಳಸಿಕೊಳ್ಳಬಲ್ಲರು.

**ಹೊ** : ಇಂದಿನ ಜಾಗತೀಕರಣದ ಸಂದರ್ಭವನ್ನು ನೀವು ಹೇಗೆ ವಿಶ್ಲೇಷಿಸುತ್ತೀರಿ ?

**ಸು** : ಜಾಗತೀಕರಣವೆನ್ನುವುದು ಇವತ್ತು ಎಲ್ಲರ ಬದುಕಿಗೂ ಮುಳುವಾಗೇ ಇದೆ. ಇದರ ವಿರುದ್ಧ ಎರಡು ರೀತಿಯ ಹೋರಾಟ ಸಾಧ್ಯ. ಒಂದು, ದೇಶೀಯವಾದ ವಸ್ತುಗಳನ್ನು ನಾವೇ ತಯಾರಿಸಿಕೊಳ್ಳುವುದು. ನಮ್ಮದೇ ಹಲ್ಲುಪುಡಿ, ಸೋಪು, ಫಿನಾಯಿಲ್, ಬಟ್ಟೆ ಬರೆ- ಒಟ್ಟಾರೆಯಾಗಿ ಗ್ರಾಮೀಣ ಗುಡಿ ಕೈಗಾರಿಕೆಯನ್ನು ಪ್ರೋತ್ಸಾಹಿಸಿ, ನಾವೆಲ್ಲಾ ಅದರ ಗ್ರಾಹಕರಾಗುವುದು. ಇನ್ನೊಂದು ವಿಶಾಲವಾದ ವ್ಯಾಪ್ತಿಯಲ್ಲಿ ನೀವೆಲ್ಲಾ ಮಾಡುವಂತೆ ಜಾಗತೀಕರಣದ ಒಟ್ಟು ಪ್ರಕ್ರಿಯೆಯ ವಿರುದ್ಧ ಪ್ರತಿಭಟಿಸುವುದು.

**ಹೊ** : ನಿಮಗೆ ತೃಪ್ತಿ ಕೊಟ್ಟ ಕ್ಷಣಗಳು ಯಾವುವು ?

**ಸು** : ಕುಟುಂಬದಲ್ಲಿ ಬೆಂದು ನೊಂದವರು ನಮ್ಮಲ್ಲಿಗೆ ಬಂದು ಅವರ ಸಮಸ್ಯೆ ಬಗೆಹರಿದಾಗ, ಅವರ ಕಣ್ಣಲ್ಲಿ ಹೊಳಪು ಮೂಡಿದಾಗ, ಸಾಕ್ಷರತೆಯ ಕಾರ್ಯಕ್ರಮದಲ್ಲಿ ಸಾಕ್ಷರರಾಗಿ ಹೊರಬಂದಾಗ ಅತ್ಯಂತ ತೃಪ್ತಿ ಸಿಗುತ್ತದೆ. ನಾನು ಹೊಗಳಿಕೆಗೂ ತೆಗಳಿಕೆಗೂ ಕಿವಿಗೊಡುವುದಿಲ್ಲ. ಯಾವುದಾದರೂ ಒಂದಿಟ್ಟು ಕೊಂಡರೆ ಕಷ್ಟ. ಎರಡೂ ಬೇಡ ಅಂದರೆ ಚಿಂತೆಯಿಲ್ಲ. ಸಮಾಜ ಕಾರ್ಯ ಮಾಡಲು ಬಂದವರಿಗೆಲ್ಲಾ ನಾನು ಹೇಳುವುದಿಷ್ಟೆ. ನೀವು ನೇಮ್ ಮತ್ತು ಫೇಮ್ ಮೇಲೆ ಕಣ್ಣಿಟ್ಟು ಕೆಲಸ ಮಾಡಬೇಡಿ ಎಂದು.

ಡಾ॥ ಎನ್. ಗಾಯತ್ರಿ
ನಂ. ೧೦೮, ಸ್ಕೈಲೈನ್ ಸುರಭಿ, ವಿದ್ಯಾಪೀಠ ರೋಡ್
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ಮಂಡೂಕೋಪಾಖ್ಯಾನ



ಬಹಳ ದಿನಗಳಲ್ಲಿ ಗುಂಡಣ್ಣನ ಭೇಟಿಯಾಗಿದ್ದಿಲ್ಲವೆಂದು ಆತನ ಮನೆಯ ಕಡೆಗೆ ಹೋಗಿದ್ದೆ. ಮುಂಬಾಗಿಲು ಹಾಕಿತ್ತು. ಕರೆಗಂಟೆ ಒತ್ತಬೇಕೆಂದು ಬೆರಳು ಎತ್ತುತ್ತಿದ್ದಂತೇ ಗುಂಡಣ್ಣನ ಕೊರಳೊಳಗಿಂದ ಹೊಮ್ಮಿದ ದನಿ ಕೇಳಿತು.

''ಸತ್ಯೂ ; ಸತ್ಯಭಾಮಾ ! ಒಂದ್ ಸ್ವಲ್ಪ ಬಂದು ಹೋಗೇ ಇಲ್ಲಿ. ಸ್ವಲ್ಪ ನನ್ನ ಕಾಲು ಹಿಡಿ ಬಾರೆ...''

ಕರೆಗಂಟೆ ಒತ್ತಲೆಂದು ಎತ್ತಿದ್ದ ಬೆರಳನ್ನು ಬಾಯಲ್ಲಿ ತುರುಕಿ ಕಚ್ಚಿಕೊಂಡು ಹಾಗೇ ನಿಂತೆ.

''ನಿಮಗೇನು ಹೊತ್ತು ಗೊತ್ತು ಇಲ್ಲವೇನು ? ಅಡುಗೆ ಮನೆಯಲ್ಲಿ ರಾಶಿ ಕೆಲಸ ಬಿದ್ದಾವೆ, ನನಗೆ ಬಿಡುವಿಲ್ಲ... ಹ್ಞೂಂ'' ಸತ್ಯಭಾಮಮ್ಮನವರ 'ಹ್ಞೂಂ'ಕಾರವು ಮೊಳಗಿದ್ದು ನನ್ನ ಕಿವಿಮೇಲೆ ಅಪ್ಪಳಿಸಿತು. ಹೊತ್ತಲ್ಲದ ಹೊತ್ತಿನಲ್ಲಿ ಅವರು ಕಾಲು ಹಿಡಿಯುವ ಪೈಕಿ ಅಲ್ಲವಲ್ಲ. ಅವರಿಗೆ ಕನ್ನಡದ ಗಾದೆಮಾತು, 'ಹೊತ್ತು ಬಂದಾಗ ಕತ್ತೇ ಕಾಲು ಹಿಡಿ' ಎಂಬುದು ಅವಗತವಾಗಿರಬೇಕು ಎಂದು ಮನದಲ್ಲಿಯೇ ಅಂದುಕೊಳ್ಳುತ್ತ ಮುಂಬಾಗಿಲು ದೂಡಿ ಒಳಗೆ ಅಡಿ ಇಟ್ಟೆ. ಗುಂಡಣ್ಣ ಒಂದು ಮೂಲೆಯಲ್ಲಿ ಗೋಡೆಯ ಪಕ್ಕ ತನ್ನ ತಲೆಯ ಮೇಲೆ ತನ್ನ ಇಡೀ ದೇಹದ ಭಾರ ತೂಗಿಸುತ್ತ ಏದುಸಿರುಬಿಡುತ್ತಿದ್ದ!

''ಹೋ ಗುಂಡಣ್ಣ, ಶೀರ್ಷಾಸನದ ಸಾಧನೆ ನಡೆದದ ಏನು?'' ನಾನು ಉದ್ಗರಿಸಿದೆ: ಗುಂಡಣ್ಣ ಸಹಜ ಸ್ಥಿತಿಗೆ ಬರುತ್ತ,

''ಬಾ ಬಾ ರಾಮಣ್ಣ; ಏನ್ ಹೇಳಲಿ ನನ್ನ ರಾಮಾಯಣ? ಶೀರ್ಷಾಸನದ ಅಭ್ಯಾಸ ಮಾಡಿಕೋಬೇಕಂತ ನಾನು ಯತ್ನಿಸುತ್ತಿದ್ದರೆ ನನ್ನ ಧರ್ಮಪತ್ನಿಯ ಸಹಕಾರವೇ ಇಲ್ಲ. ಬ್ಯಾಲನ್ಸ್ ತಪ್ಪಲಿಕ್ಕೆ ಹತ್ತೇದಂತ ಕಾಲು ಹಿಡಿದುಕೊಳ್ಳಲಿಕ್ಕ ಕೂಗಿದ್ರ ಸತ್ಯಭಾಮಾ ಅಡುಗೆ ಮನೆ ಬಿಟ್ಟು ಬರಲು ಸಿದ್ಧಳಿಲ್ಲ. ನೀನು ಕಾಲು ಹಿಡ್ಕೋತೀನಿ ಅಂತ ಅಂದ್ರ ನಾನು ತಲೀ ಮ್ಯಾಲ ನಿಲ್ಲುತ್ತೇನೆ...'' ಗುಂಡಣ್ಣ ಗೋಗರೆದ.

''ಗುಂಡಣ್ಣಾ, ನನಗೆ ಕಾಲು ಎಳೆದು ಅಭ್ಯಾಸವಿದೆ ಹೊರತು ಕಾಲು ಹಿಡಿದು ಅಭ್ಯಾಸವಿಲ್ಲವಲ್ಲ! ಹ ಹ್ಹಿಽಽ ; ಇರಲಿ ಈಗ ಯಾಕ ಶೀರ್ಷಾಸನದ ಹುಚ್ಚು ಬಡ್ಕೊಂಡಿತು ಅಂತೀನಿ'', ನಾನು ಕೇಳಿದೆ.

''ಮಂಡೂಕೋಪಾಖ್ಯಾನ ಕೇಳಿಲ್ಲೇನು ರಾಮಣ್ಣ ?'' ನನ್ನ ಅಜ್ಞಾನದ ಬಗ್ಗೆ ಮರುಗುತ್ತಿರುವಂತೆ ದನಿ ತೆಗೆದು ಕೇಳಿದ ಗುಂಡಣ್ಣ.

''ಮಂಡೂಕೋಪಾಖ್ಯಾನ? ಅದೆಂಥದು ಮಾರಾಯ; ನನಗೆ ಅದೇನೋ ಮಾಂಡೂಕ್ಯೋಪ ನಿಷತ್ತು, ಮುಂಡಕೋಪನಿಷತ್ತು ಎಂಬ ಹಲವು ಪುರಾತನ ಉಪನಿಷತ್ತುಗಳ ಹೆಸರು ಮಾತ್ರ ಗೊತ್ತು ಹೊರತು ನೀ ಹೇಳುವ ಮಂಡೂಕೋಪಾಖ್ಯಾನ ಎಂಬ ಹೆಸರೇ ಕೇಳಿಲ್ಲವಲ್ಲ ಈವರೆಗೆ'', ನಾನೆಂದೆ.

''ನಮ್ಮ ಪುರಾಣ ಗಿರಾಣದ ಮಾತಲ್ಲ. ಅತ್ಯಾಧುನಿಕ ಪಾಶ್ಚಿಮಾತ್ಯ ಜೀವನ ಶೈಲಿಯ ಅಮೆರಿಕೆಯಲ್ಲಿ ಇತ್ತೀಚೆಗೆ ನಡೆದ ಸಂಗತಿ ಮಂಡೂಕೋಪಾಖ್ಯಾನ !'' ಗುಂಡಣ್ಣ ಕಣ್ಣರಳಿಸಿ ಹೇಳಿದ.

''ಓಂಽಽಽ'' ಎಂದು ನಾನು ಬಾಯ್ದೆರೆದು ಅವಾಕ್ಕಾದೆ.

''ಹ್ಞೂಂ; ಅದ್ಯಾವತ್ ಪದ್ಧತಿಯ ಅಮೆರಿಕಾದಲ್ಲಿ ಸಂಭವಿಸಿದ ಘಟನೆ ಇದು. ರಿಚ್‌ಮಂಡ್ ಎಲಿಮೆಂಟರಿ ಸ್ಕೂಲಿನ ಪ್ರಿನ್ಸಿಪಾಲ್‌ರಾದ ಮಾರ್ಕ್ ಅಂಡ್ರ್ಯೂಸ್ ಎಂಬುವವರು ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳಿಗೆ ಒಂದು ಸವಾಲ್ ಎಸೆದಿದ್ದರು. ಶಾಲೆಯ ವಾಚನಾಲಯದಲ್ಲಿಯ ಮೂರು ಸಾವಿರ ಪುಸ್ತಕಗಳನ್ನು ವಿದ್ಯಾರ್ಥಿಗಳು ಏಪ್ರಿಲ್ ತಿಂಗಳೊಳಗೆ ಓದಿ ಮುಗಿಸಿದಲ್ಲಿ ತಾವು ತಲೆಕೆಳಗೆ ಕಾಲು ಮೇಲೆ ಮಾಡಿ, ಶೀರ್ಷಾಸನದಲ್ಲಿ ನಿಂತು ನೆಲದ ಮೇಲಿನ ಕಪ್ಪೆಗೆ ಚುಂಬನ ನೀಡುವುದಾಗಿ ಸಂಕಲ್ಪಕೊಟ್ಟರು. ವಿದ್ಯಾರ್ಥಿಗಳು ಈ ಸವಾಲನ್ನು ಸ್ವೀಕರಿಸಿದರು ಹಾಗೂ ನಿಗದಿತ ಗಡುವಿನಲ್ಲಿ ಮೂರುಸಾವಿರದ ಮೂರು ಪುಸ್ತಕಗಳನ್ನು ಓದಿ ಮುಗಿಸಿದರು. ಪ್ರಿನ್ಸಿಪಾಲ್ ಸಾಹೇಬರ ಲೆಕ್ಕ ತಲೆಕೆಳಗಾಯಿತು. ಈಗಿನ ಹುಡುಗರ ಟಿ.ವ್ಹಿ, ವ್ಹಿಡಿಯೋ ಬಿಟ್ಟು ಓದುವ ಹವ್ಯಾಸಕ್ಕೆ ಇಳಿಯಲಾರರು ಎಂಬ ಅಂದಾಜಿನ ಮೇಲೆ ತಾವು ಎಸೆದ ಈ ಸವಾಲು ಈಗ ಅವರ ಕೊರಳಿಗೇ ಬಂತು. ಅವರು ತಮ್ಮ ಜೇಬಿನಿಂದ ಒಂದು ರಬ್ಬರ್ ಕಪ್ಪೆಯನ್ನು ತೆಗೆದು ನೆಲದ ಮೇಲಿಟ್ಟು ಶೀರ್ಷಾಸನ ಹಾಕಿ ಆ ಕಪ್ಪೆಯ ತುಟಿಗೆ ತಮ್ಮ ತುಟಿ ಸೋಂಕಿಸಿದರು. ಆದರೆ ವಿದ್ಯಾರ್ಥಿಗಳು ಬಿಡಬೇಕಲ್ಲ; ಅವರು ಜೀವಂತ ಕಪ್ಪೆಯನ್ನು ತಂದಿಟ್ಟು, ಪ್ರಿನ್ಸಿಪಾಲ್ ಸಾಹೇಬರಿಂದ ಮುತ್ತಿಕ್ಕಿಸಿದರು. ಹ್ಯಾಂಗಯ್ತು ಈ ಮಂಡೂಕೋಪಾಖ್ಯಾನ......?'' ಗುಂಡಣ್ಣ ಕೇಳಿದ.

ನಾನು ಮತ್ತೊಮ್ಮೆ ''ಓಂ ಽಽಽ'' ಎಂದು ಉದ್ಗರಿಸಿ ನನ್ನ ಅಚ್ಚರಿಯನ್ನು ಸುವ್ಯಕ್ತಗೊಳಿಸಿದೆ. ಗುಂಡಣ್ಣನ ಮೊಗದಲ್ಲಿ ಸಾರ್ಥಕ್ಯಭಾವ ತಾನೇ ತಾನಾಗಿ ತೇಲಿತು.

**ಅನಂತ ಕಲ್ಲೋಳ**

''ಅದ್ಸರಿ ಗುಂಡಣ್ಣಾ ; ನಿನಗೂ ಶೀರ್ಷಾಸನದಲ್ಲಿ ನಿಂತು ಕಪ್ಪೆ ತುಟಿಯನ್ನು ಚುಂಬಿಸುವ ಹಂಬಲ ಉಂಟಾಗಿದೆಯೇ ? ಇದೆಂಥ ಹುಚ್ಚು ಹಂಬಲ ? ಅಲ್ಲೇನೋ ಕಪ್ಪೆ ಕಾಲನ್ನು ಮೃಷ್ಟಾನ್ನ ಎಂದು ಬಾಯಿ ಚಪ್ಪರಿಸಿ ತಿನ್ನುತ್ತಾರೆ ಎಂದು ಓದಿದ್ದೆ. ಆದರೆ ಹೀಗೆ ತಲೆಕೆಳಗೆ ಕಾಲು ಮೇಲೆ ಮಾಡಿ ಕಪ್ಪೆಯನ್ನು ಮುತ್ತಿಕ್ಕುವುದೂ ಆಪ್ಯಾಯಮಾನ ಶೃಂಗಾರವಾಗಿದೆಯೇ?'' ನಾನು ಬೆಕ್ಕಸಬೆರಗಾಗಿ ಕೇಳಿದೆ.

''ಶೃಂಗಾರ ಗಿಂಗಾರದ ಮಾತಲ್ಲಽ ನನ್ನ ಬಂಗಾರಽಽ! ವಾಚನಾಭಿರುಚಿಯನ್ನು ಬೆಳೆಸಲು ಆ ಪ್ರಿನ್ಸಿಪಾಲರು ಮಾಡಿದ್ದನ್ನು ನಾನು ಯಾಕೆ ಪ್ರಯೋಗಿಸಿ ನೋಡಬಾರದು, ಎಂಬ ಆಲೋಚನೆ ನನ್ನದು. ದುಬಾರಿ ಖರ್ಚು ಮಾಡಿ ಪ್ರಕಟಗೊಳಿಸಿದ ನನ್ನ ಕವನ ಸಂಕಲನದ ಪ್ರತಿಗಳೆಲ್ಲ ಖರ್ಚಾಗದೆ ಕುಳಿತಾವೆ..'' ಗುಂಡಣ್ಣ ನಿಟ್ಟುಸಿರುಬಿಡುತ್ತ ಉಸುರಿದ.

''ಹೌದು ಗುಂಡಣ್ಣಾ; ನಮ್ಮ ರಾಜರತ್ನಂರವರು ಎಂದೋ ಹೇಳ್ಯಾರಲ್ಲಽ 'ಕನ್ನಡ ಸಾಹಿತ್ಯ, ಶಾಶ್ವತ ಸಾಹಿತ್ಯ! ಪ್ರಕಟಿಸಿದ ಸಾಹಿತ್ಯ ಕೃತಿಗಳು ಶಾಶ್ವತವಾಗಿ ಹಾಗೇ ಇರುತ್ತವೆ ಪ್ರಕಟನಾಲಯದಲ್ಲಿ' ಅಂತ.'' ನಾನು ಸಮಾಧಾನ ಹೇಳಲು ಯತ್ನಿಸಿದೆ.

''ಹ್ಞೂಂ; ಆ ಮಾತು ಗೊತ್ತದ ಬಿಡೋ. ಆದರೆ ಅಮೆರಿಕೆಯ ಆ ಪ್ರಿನ್ಸಿಪಾಲರು ತಮ್ಮ ವಿದ್ಯಾರ್ಥಿಗಳಲ್ಲಿ ವಾಚನಾಭಿರುಚಿ ಬೆಳೆಸಬೇಕೆಂದು ತಾವು ತಲೆಕೆಳಗೆ ಕಾಲು ಮೇಲೆ ಮಾಡಿ ನಿಂತು ಕಪ್ಪೆಯನ್ನು ಚುಂಬಿಸುವ ಪ್ರತಿಜ್ಞೆಗೈದಂತೆ ನಾನು ಇಲ್ಲಿ ಆ ಪ್ರಯೋಗ ಯಾಕೆ ಮಾಡಬಾರದು ಎಂದು ಆಲೋಚಿಸಿರುವೆ. ಅದಕ್ಕಾಗಿ ಪೂರ್ವಭಾವಿಯಾಗಿ ಶೀರ್ಷಾಸನದ ಅಭ್ಯಾಸ ನಡೆಯಿಸಿದ್ದೆ. ಹಾಗೆ ನಿಂತಾಗ ಗೋಡೆಗೆ ಆನಿಸಿದ ನನ್ನ ಕಾಲುಗಳು ಸಡಿಲುಬಿದ್ದು ಕುಸಿಯುತ್ತಿದ್ದವು. ಅವುಗಳನ್ನು ಗಟ್ಟಿಯಾಗಿ ಹಿಡಿದುಕೊಳ್ಳುವಂತೆ ಸತ್ಯಭಾಮಾನನ್ನು ಕರೆಯುತ್ತಿದ್ದೆ...'' ಗುಂಡಣ್ಣ ವಿವರಿಸಿದ.

''ಪ್ಚು ಪ್ಚು; ಈ ಹಂತದಲ್ಲಿಯೇ ನಿನ್ನ ಯತ್ನ ತಲೆಕೆಳಗಾಗಬೇಕೇ ಪಾಪ! ಅಂದರೆ ಇನ್ನೂ ಕಾಲ ಮಾಗಿಲ್ಲ ಅಂದಾಂಗಾಯ್ತು'' ನಾನಂದೆ.

''ಎಷ್ಟು ತಲೀ ಕೆಳಗೆ ಕಾಲು ಮೇಲೆ ಮಾಡಿದ್ರೂನು ನಮ್ಮಲ್ಲಿ ವಾಚನಾಭಿರುಚಿ, ಪುಸ್ತಕ ಪ್ರೀತಿ ಬೆಳದೀತು ಅಂತ ಅನಿಸೂದಿಲ್ಲ.....'' ಗುಂಡಣ್ಣ ಸ್ವಗತವೆಂಬಂತೆ ಉಲಿದ.

''ಹೌದೌದು ; ಬರೀ ಕೆಳಗೆ ತಲೆ ಮೇಲೆ ಕಾಲು ಮಾಡಿ ನಿಂತರೂ ಆಗೂದಿಲ್ಲ; ಕಪ್ಪೆಯ ತುಟಿಗೆ ತುಟಿ ಸೋಂಕಿಸಬೇಕಾಗ್ತದಲ್ಲಽ ?'' ನಾನೆಂದೆ ನಗುತ್ತ. ಪ್ರಶ್ನೆಗಳಿಗೆ ಪರಿಹಾರವಿಲ್ಲದಾಗ ನಗುವುದೇ ಹಿತವಲ್ಲವೇ!

''ಮಂಡೂಕೋಪಾಖ್ಯಾನವನ್ನು ಸರಿಯಾಗಿ ತಿಳ್ಕೊಂಡಿ ರಾಮಣ್ಣ'', ಗುಂಡಣ್ಣ ನನಗೆ ಸರ್ಟಿಫಿಕೇಟ್ ನೀಡಿದ. ಅದನ್ನು ಸಂತಸದಿಂದ ಸ್ವೀಕರಿಸಿದೆ. ಮನದಲ್ಲಿಯೇ ಮರುಗಿದೆ; ''ಪಾಪ ಯಾವ ಕಪ್ಪೆಗೆ ಕಾದಿದೆಯೋ ಈ ಗುಂಡಣ್ಣನ ತುಟಿಗಳ ಸ್ಪರ್ಶದ ಸಂಕಟ'' ಎಂದು.

ಅನಂತ ಕಲ್ಲೋಳ
ನಂ. ೫೦೭, ರಮಾರಮಣ, ಕುಲಕರ್ಣಿ ಬೀದಿ, ಬೆಳಗಾವಿ - ೫೯೦ ೦೦೨

# ಹಾಸಿಗೆಯ ರೂಪ-ರಂಗು

ಪ್ರೊ || ಹಾಲಾಡಿ ಮಾರುತಿರಾವ್

ಹಾಸಿಗೆಯ ಮೇಲೆ ಬಿದ್ದುಕೊಂಡಿದ್ದೇನೆ ನಾನಿನ್ನೂ. ನಿದ್ದೆ ಬಂದಿಲ್ಲ. ನನ್ನ ಹಾಸಿಗೆ ಮತ್ತು ನನ್ನ ನಿದ್ದೆಯ ಗಾಢಸಂಬಂಧ ಶಿಥಿಲವಾಗಿ ಹಲವಾರು ವರ್ಷಗಳು ಕಳೆದುಹೋಗಿವೆ. ಈಗ ಅದರಲ್ಲಿ ನಿದ್ರಿಸುವುದಕ್ಕಿಂತ ಮುದ್ರಿಸುವುದೇ ಹೆಚ್ಚಾಗಿದೆ. ಈಗ ಅದು ಮುದ್ದಿನ ಹಾಸಿಗೆಯಲ್ಲ, ಮುಳ್ಳಿನ ಹಾಸಿಗೆ. ವಿಷ್ಣುವಿನ ಹಾಸಿಗೆಯಲ್ಲ, ಭೀಷ್ಮನ ಹಾಸಿಗೆ, ಎದ್ದು ಮಾಡುವುದೇನೂ ಇಲ್ಲ ಎಂದು ಬಿದ್ದುಕೊಳ್ಳುವವನ ಹಾಸಿಗೆ.

ಹಾಸಿಗೆಯ ಹುಟ್ಟು, ಬೆಳವಣಿಗೆ ಬಗ್ಗೆ ಚಿಂತಿಸಿದಾಗ ನಾವು ಎಲ್ಲಿಂದ ಎಲ್ಲಿಯವರೆಗೆ ಬಂದು ಮುಟ್ಟಿದ್ದೇವೆ ಎನ್ನುವುದು ಗೊತ್ತಾಗುತ್ತದೆ. ರಾತ್ರಿಯ ವಿಶ್ರಾಂತಿಗೆಂದು ಬಿಚ್ಚಿ ಬೆಳಗಾದೊಡನೆ ಅದನ್ನು ಸುರುಳಿ ಮಾಡಿ ಒಂದು ಮೂಲೆಯಲ್ಲಿ




ಡುತ್ತಿದ್ದ ಆ ಹಿಂದಿನ ಕಾಲದ ಹಿಡಿ ಹಾಸಿಗೆ ಎಲ್ಲಿ, ಕೋಣೆಯಲ್ಲಿ ಕಾಲಿಟ್ಟೊಡನೆ ಬಿದ್ದುಕೊಳ್ಳಲು ಹೊತ್ತು ಗೊತ್ತಿಲ್ಲದೆ ಆಮಂತ್ರಿಸುವ ಸದಾ ಸಿದ್ಧವಾಗಿ ಹರಡಿಕೊಂಡಿರುವ ಪಿಡಂಬಿ ಹಾಸಿಗೆ ಎಲ್ಲಿ? ಚಾಪೆ, ಜಮಖಾನ, ಗೊಜಡಿಗಳಿಂದ ಪ್ರಾರಂಭವಾಗಿ, ಸ್ವಲ್ಪ ಕಾಲ ಹತ್ತಿಯಲ್ಲಿ ಮೆರೆದು ಈಗ ಫೋಮಿನ ರೂಪ ಪಡೆದಿರುವ ಹಾಸಿಗೆಯ ಇತಿಹಾಸ ಚಿಕ್ಕ ಪುಟ್ಟದ್ದಲ್ಲ. ದುಡಿಯುವವನ ರಾತ್ರಿಯ ವಿರಾಮದ ಸಂಕೇತವಾಗಿದ್ದ ಹಾಸಿಗೆ, ಈಗ ಹೊತ್ತು ಗೊತ್ತಿಲ್ಲದೆ ಬಿದ್ದುಕೊಳ್ಳುವ ಸೋಮಾರಿಯ ಸೌಭಾಗ್ಯವಾಗುತ್ತದೆಂದು ಯಾರು ಎಣಿಸಿದ್ದರು?

ಬದುಕಿನ ಬಾಲ್ಯ, ತಾರುಣ್ಯ ಹಾಗೂ ವೃದ್ಧಾಪ್ಯ ಎಂಬ ಈ ಮೂರು ಘಟ್ಟಗಳಲ್ಲಿ ಹಾಸಿಗೆ ನಮ್ಮನ್ನು ಹೇಗೆ ಸ್ಪಂದಿಸುತ್ತಾ ಬಂದಿದೆ ಎಂದು ಯೋಚಿಸಿದಾಗ ನಮಗೆ ಹಾಸಿಗೆಯ ನಿಜವಾದ ರೂಪ-ರಂಗಿನ ದರ್ಶನವಾಗುತ್ತದೆ.

ಹಾಸಿಗೆ ನನಗೊಂದು ಹೇಸಿಗೆಯಾಗಿ ಕಂಡದ್ದು ಮಗು ಹುಟ್ಟಿದ ನಂತರ. ಎಷ್ಟು ದೊಡ್ಡ ರಬ್ಬರ್ ಅಡಿಯಲ್ಲಿಟ್ಟರೂ ಅದನ್ನು ಕಾಲಿಂದ ತಳ್ಳಿ ಮೂತ್ರದ ಮ್ಯಾಪ್ ಬಿಡಿಸದಿದ್ದರೆ ನನ್ನ ಮಗುವಿಗೆ ಸಮಾಧಾನವೇ ಇರುತ್ತಿರಲಿಲ್ಲ! ಒದ್ದೆ ಹಾಸಿಗೆಯನ್ನು ಬೆಳಿಗ್ಗೆ ಬಿಸಿಲಿಗೆ ಹಾಕಲು ಎತ್ತಿಕೊಂಡು ಹೋಗುವುದು, ಸಾಯಂಕಾಲ ಮತ್ತೆ ಮನೆಯೊಳಗೆ ತಂದಿಡುವುದು ನನ್ನ ನಿತ್ಯದ ವ್ಯಾಯಾಮವಾಗಿತ್ತು. ಈ ಮ್ಯಾಪುಗಳು ಕಾಣದಂತೆ ಒಳ್ಳೆಯ ಬೆಡ್‌ಶೀಟ್ ಹರಡಿದರೆ ನನ್ನ ಮಗ ಅಲ್ಲೊಂದು ಮೈದಾನವೆಂಬಂತೆ ಕುಣಿದಾಡಿ ಹಾಸಿಗೆಯ ಮರ್ಯಾದೆ ತೆಗೆಯುತ್ತಿದ್ದ.

ನಾನು ಚಿಕ್ಕವನಾಗಿರುವಾಗ ಕಂಡದ್ದೂ ನೆನಪಿದೆ. ಹಾಸಿಗೆಯಲ್ಲಿ ತಗಣೆಗಳು ಸೇರಿಕೊಂಡು ಅವು ಮರಿ ಹಾಕಿದ ಕಡೆ ಕಪ್ಪು ಕಲೆ, ಅವನ್ನು ಹಿಚುಕಿ ಕೊಂದಾಗ ಉದ್ಭವಿಸಿದ ಕೆಂಪು ಕಲೆ. ಆಗಲೂ ಹಾಸಿಗೆಯನ್ನು ಬಿಸಿಲಿಗೆ ಹಾಕಿ ತರುವುದಿತ್ತು. ಆಗ ಹಾಸಿಗೆ ಮಲಗುವ ಸ್ಥಳವೆನ್ನುವುದಕ್ಕಿಂತಲೂ, ಬೇಟೆ ಆಡುವ ಸ್ಥಳ ಎಂದು ಕರೆಯಬಹುದಿತ್ತು. ಇತ್ತೀಚೆಗೆ ನಾವು ತಗಣೆಯ ನಿರ್ಮೂಲನೆಯಲ್ಲಿ ಯಶಸ್ಸು ಗಳಿಸಿ ಹಾಸಿಗೆಯ ಮೂಲ ಉದ್ದೇಶವನ್ನು ಉಳಿಸಿಕೊಂಡಿದ್ದೇವೆ.

ನಾನು ಹೈಸ್ಕೂಲ್ ಶಿಕ್ಷಣದ ಕೊನೆಯ ಘಟ್ಟದಲ್ಲಿರುವಾಗ ''ಮೀಸೆ ಬಂದಾಗ ದೇಶ ಕಾಣುವುದಿಲ್ಲ'' ಎಂಬ ಗಾದೆಯನ್ನು ನಮ್ಮ ಕನ್ನಡದ ಮೇಷ್ಟ್ರು ವಿವರಿಸಬೇಕಾದ ಪ್ರಸಂಗ ಬಂದಿತ್ತು. ಆಗ ಹಿಂದಿನ ಬೆಂಚಿನಲ್ಲಿ ಕುಳಿತ ಧಡಿಯನೊಬ್ಬ ಕುಚೇಷ್ಟೆಗಾಗಿ, ''ಮತ್ತೇನು ಕಾಣುತ್ತದೆ, ಸಾರ್?'' ಎಂದು ಕೇಳಿದ. ಹಾಸ್ಯ ಪ್ರಜ್ಞೆಗೆ ಹೆಸರಾದ ಆ ಮೇಷ್ಟ್ರು ''ಹಾಸಿಗೆ'' ಎಂದು ಥಟ್ಟನೆ ಉತ್ತರವಿತ್ತು ನಮ್ಮನ್ನೆಲ್ಲಾ ನಗಿಸಿದ ನೆನಪು.

ಮದುವೆಯನಂತರ ಪ್ರಥಮ ಮಿಲನದ ರಾತ್ರಿ ಹಾಸಿಗೆಯ ಅಲಂಕಾರ ಎಷ್ಟೊಂದು ಸೊಗಸು! ಆ ಒಂದು ಸಮಯದಲ್ಲಿ ಮಾತ್ರ ಹಾಸಿಗೆಗೂ ಹೂವಿಗೂ ನಿಕಟ ಸಂಬಂಧ. ಹೆಣ್ಣು ಬಂದ ನಂತರ ಹೂವಿಗೇನು ಕೆಲಸ?

ಹಿಂದಿನ ಕಾಲದಲ್ಲಿ ಅವಿಭಕ್ತ ಕುಟುಂಬ ಜಾರಿಯಲ್ಲಿದ್ದಾಗ ಮದುವೆಯಾದ ಹೊಸತರಲ್ಲಿ ಗಂಡ ಹೆಂಡತಿ ಎಲ್ಲರ ಕಣ್ಮುಂದೆ ಮಾತನಾಡುವಂತಿರಲಿಲ್ಲ. ರಾತ್ರಿ ಹಾಸಿಗೆ ಸೇರಿದಾಗಲೇ ಅವರ ಪಿಸು ಮಾತುಕತೆಗಳು. ಆಗ ಹಾಸಿಗೆಗೆ ಎಷ್ಟೊಂದು ಪ್ರಾಶಸ್ತ್ಯವಿತ್ತು! ದೇಹಗಳ ಮಿಲನಕ್ಕಿಂತಲೂ, ಹೃದಯಗಳ ಮಿಲನದ ರಂಗಸ್ಥಳವಾಗಿತ್ತು ಹಾಸಿಗೆ.

ಹಾಸಿಗೆ ನಮ್ಮನ್ನು ಹಿಡಿದಾಗ ನಾವು ಭೋಗಿಗಳಾಗುತ್ತೇವೆ. ನಾವು ಹಾಸಿಗೆ ಹಿಡಿದಾಗ ರೋಗಿಗಳಾಗಿಬಿಡುತ್ತೇವೆ! ಹಾಸಿಗೆ ಬೇಡಪ್ಪ ಎಂದು ನಮಗನಿಸುವುದು ಕಾಯಿಲೆ ಬಿದ್ದಾಗಲೇ. ಅದುವರೆಗೆ ಹಾಸಿಗೆ ನಮಗೆ ಕೊಡುವಷ್ಟು ಹಿತ ಬೇರೆ ಯಾವ ಉಪಕರಣದಿಂದಲೂ ಸಿಗುವುದಿಲ್ಲ. our sweetest thoughts are those that spring out of sweatest beds !

ಬಾಳಿನಲ್ಲಿ ಜರುಗಿಹೋದ ಸುಖ ದುಃಖದ ಸನ್ನಿವೇಶಗಳನ್ನು ಹಾಸಿಗೆಯಲ್ಲಿ ಮೆಲಕುವಷ್ಟು ತೀವ್ರವಾಗಿ ನಾನು ಬೇರೆಲ್ಲೂ ಮೆಲುಕುವುದಿಲ್ಲ. ಹಾಗಾಗಿ ನಾನು ಬರೆಯುವುದು ಕೂಡಾ ಹಾಸಿಗೆ ಮೇಲೆ ಕುಳಿತೇ. ಆದರೆ ನನ್ನದೊಂದು ಚಿಕ್ಕ ಆಸೆ. ಹಾಸಿಗೆಯಲ್ಲಿ ಸಾಯುವುದರ ಬದಲಾಗಿ ಹಾದಿಯಲ್ಲಿ ಹಾಯಬೇಕೆಂದು!

**ಪ್ರೊ || ಹಾಲಾಡಿ ಮಾರುತಿರಾವ್**
ನಂ. 3/4, ಮಾಹ್ವಾಸ ನಿವಾಸ, ಅಬ್ಬಿಗೆರೆ ಬಡಾವಣೆ
ಚಿಕ್ಕ ಬಾಣಾವರ ರಸ್ತೆ, ಬೆಂಗಳೂರು - 560 090




ಕೇಕು
ಕತ್ತರಿಸಿ
ಚಪ್ಪಾಳೆ
ತಟ್ಟುವ
ಜನ್ಮದಾತರಿಗೆ
ಹುರುಪು
ಉಲ್ಲಾಸ;
ಕೋಳಿಗೆ

ತತ್ತಿಗಳ
ದುರ್ಗತಿಯ
ಕಹಿ
ನೆನಪು
ಕ್ಲೇಶ

– ಮ. ಶ್ರೀ. ಮುರಳಿಕೃಷ್ಣ







ಈ ಯಜಮಾನಿಕೆ ಪಕ್ಷಗಳ ಸಂಸ್ಕೃತಿಯೇ ಹಾಗೆ!









ಪರಾರಿಯಾಗಬೇಡ! ಸರ್ವ ವಿಘ್ನ ವಿನಾಶಕನೇ
ಕೊಡಿಸು ಮತವನ್ನು! ಕೊಡಿಸು ಮತವನ್ನು!




ಕನ್ನಡಮ್ಮನ ಗುಡಿಯಲ್ಲಿ ಮಾಟಗಾತಿಯರ ಸೆಣಸಾಟ ?



**ಹೃದಯ ವಚನಗಳು** (ವಚನಗಳು)
*ಲೇ: ಡಾ|| ಅಮೃತ ಸೋಮೇಶ್ವರ*
ಪುಟಗಳು : 64 ಬೆಲೆ: ರೂ. 27
**ಪ್ರಕೃತಿ ಪ್ರಕಾಶನ,** ಕೋಟೆಕಾರು - 574 152

ಡಾ|| ಅಮೃತ ಸೋಮೇಶ್ವರರು ಹೃದಯದ ಕಡೆಗೆ ಗಮನ ಹರಿಸಿದಾಗ ಮೂಡಿಬಂದ 254 ವಚನಗಳ ಸಂಗ್ರಹ. ಪ್ರಖರವಾದ ವಿಚಾರಗಳಿಂದ ಹೃದಯಕ್ಕೆ ಹತ್ತಿರವಾಗುತ್ತದೆ. ಉದಾಹರಣೆಗೆ ಈ ಕೆಳಗಿನ ವಚನ ಗಮನಿಸಿ.

*ಪ್ರಶ್ನಿಸಬಾರದೆನ್ನುವರು ಸಂಪ್ರದಾಯನಿಷ್ಠರು, ಸನಾತನಿಗಳು*
*ಪ್ರಶ್ನಿಸಬಾರದೆನ್ನುವುದು ಶಾಸ್ತ್ರ ನಿಚಯ, ಮತಗ್ರಂಥಗಳು*
*ಹೃದಯ ಸರೋವರದಿ ಪ್ರಶ್ನೆಗಳ ಕಲ್ಲೋಲ ಸಹಜವಯ್ಯ,*
*ಪ್ರಶ್ನೆಗಳ ನಿರೋಧಿಸುವ ಸಿದ್ಧಾಂತಗಳ ಒಡಲೊಳಗೆ*
*ಹೃದಯವುಂಟೇ ಎಂಬುವುದು ಪ್ರಶ್ನೆಯಯ್ಯ ಪ್ರಶ್ನಾತೀತ ಹೃದಯೇಶ ಸೋಮೇಶ.*

**ಪುಸ್ತಕ ಮಾರಾಟ ಹೋರಾಟ**
(ಲೇಖನ ಸಂಗ್ರಹ)
*ಜಿ. ಎನ್. ಅಶೋಕವರ್ಧನ*
ಪುಟಗಳು : 160 ಬೆಲೆ: ರೂ. 25
**ಅತ್ರಿ ಬುಕ್ ಸೆಂಟರ್,** 4, ಶರಾವತಿ ಕಟ್ಟಡ, ಬಲ್ಮಠ, ಮಂಗಳೂರು - 575 001

ಸ್ವತಃ ಯಶಸ್ವಿ ಪುಸ್ತಕ ಮಾರಾಟಗಾರರಾಗಿರುವ ಲೇಖಕರು, ಪುಸ್ತಕ ಮಾರಾಟದ ಸಂಬಂಧದಲ್ಲಿ ತಮ್ಮ ಸಿಹಿ-ಕಹಿ ಅನುಭವಗಳನ್ನು ಓದುಗರೊಂದಿಗೆ ಹಂಚಿಕೊಂಡಿದ್ದಾರೆ. ಸಾಹಿತ್ಯ ಬಾರದವರು, ಸಾಹಿತ್ಯದ ಗಂಧಗಾಳಿ ಇಲ್ಲದವರು ಪುಸ್ತಕ ಕ್ಷೇತ್ರದ ಮುಂಚೂಣಿಯಲ್ಲಿರುವುದನ್ನು ಗುರುತಿಸಿ, ಅವರ ಮೇಲೆ ನಿರ್ದಯೆಯ ಟೀಕಾಸ್ತ್ರ ಬಳಸಿದ್ದಾರೆ. ಪುಸ್ತಕ ಮಾರಾಟವನ್ನು ಒಂದು ಸಾಹಿತ್ಯಿಕ ಹೋರಾಟವಾಗಿಸಿದ್ದಾರೆ.

**ಹೋಲೆ... ಹೋಲೆ ಬೆಳ್ಳಕ್ಕಿ ಮಾಲೆ**
(ಕಿರುಗವಿತೆಗಳ ಸಂಗ್ರಹ)
*ಲೇ: ಶಾ. ಬಾಲುರಾವ್*
ಪುಟಗಳು : 64 ಬೆಲೆ:ರೂ. 50
**ಅಕ್ಷರ ಪ್ರಕಾಶನ,** ಹೆಗ್ಗೋಡು, ಸಾಗರ

ಶಾ. ಬಾಲುರಾವ್ ಅವರ 54 ಕಿರುಗವಿತೆಗಳನ್ನು ಓದಿ ಮೆಲುಕು ಹಾಕಬಹುದು. 'ಹೋಲೆ ಹೋಲೆ' ಎಂಬ ಪಂಜಾಬಿ ಶಬ್ದಕ್ಕೂ ಕನ್ನಡದ 'ಬೆಳ್ಳಕ್ಕಿ ಮಾಲೆ'ಗೂ ಹಾಕಿದ ಬೆಸುಗೆ. ದಿಲ್ಲಿ ವಾಸಿಯಾಗಿರುವ ಇವರು ಕನ್ನಡದೊಂದಿಗೆ ನಡೆಸುವ ಸಂವಾದ ಈ ಕವಿತೆಗಳು,

ನಾನು, ನನ್ನದು, ನಾನು ಮಾಡಿದ್ದು
ಎಂದು ಜಂಬ ಕೊಚ್ಚಿಕೊಳ್ಳುವ ನಾವೆಲ್ಲರೂ
ಹೊತ್ತು ಓಡಾಡುವುದು
ನಮಗೆ ಯಾರೋ ಕೊಟ್ಟ
ನಾವು ಕಾಣದ
ಮತ್ತಾರದೋ ಹೆಸರನ್ನ

**ಸಮಗ್ರ ಲಲಿತ ಪ್ರಬಂಧಗಳು**
*ಲೇ: ಎ. ಎನ್. ಮೂರ್ತಿರಾವ್*
ಪುಟಗಳು : 360 ಬೆಲೆ: ರೂ. 150
**ಅಂಕಿತ ಪುಸ್ತಕ,** 53, ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್, ಗಾಂಧಿಬಜಾರ್ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು- 560 004

ಶ್ರೀ ಎ. ಎನ್. ಮೂರ್ತಿರಾವ್ ಅವರ ನಲವತ್ತೊಂಬತ್ತು ಲಲಿತ ಪ್ರಬಂಧಗಳ ಸಂಗ್ರಹ. ಲೇಖಕರದು ಅಪಾರ ಲೋಕಾನುಭವ ಮತ್ತು ತಿಳಿಹಾಸ್ಯದ ಸರಳ ಶೈಲಿ. ನಮಗೆ ಅಷ್ಟು ಪರಿಚಯವಿಲ್ಲದ ಮತ್ತೊಂದು ಲೋಕದ ಬಾಗಿಲು ತೆರೆದಂತೆ. ಕನ್ನಡದ ಹಲವು ಪ್ರಮುಖ ವ್ಯಕ್ತಿಗಳ ಪರಿಚಯಗಳೂ ಇವೆ.

**ಸ್ಥಿತ್ಯಂತರ** (ಲೇಖನ ಸಂಗ್ರಹ)
*ಮರಾಠಿ ಮೂಲ: ಡಾ|| ಶಂ. ಬಾ. ಜೋಶಿ*
*ಕನ್ನಡಕ್ಕೆ: ಡಾ|| ಗೌರೀಶ ಕಾಯ್ಕಿಣಿ*
ಪುಟಗಳು : 124 ಬೆಲೆ: ರೂ. 50
**ಶಂ. ಬಾ. ವಿಚಾರ ವೇದಿಕೆ,** 'ಶ್ರೇಯಸ್' 737(262) ಕೃಷ್ಣಾನದಿ ರಸ್ತೆ, ಫೈಪ್ ಲೇನ್, ಶ್ರೀನಗರ, ಬೆಂಗಳೂರು - 560 050

ಡಾ|| ಶಂ. ಬಾ. ಜೋಶಿಯವರ ಹದಿನಾಲ್ಕು ವಿದ್ವತ್ಪೂರ್ಣ ಲೇಖನಗಳ ಸಂಗ್ರಹ. ಇವನ್ನು ಲೇಖಕರು ಮರಾಠಿಯಲ್ಲಿ ಬರೆದು ಪ್ರಕಟಿಸಿದ್ದರು. ಇಲ್ಲಿನ ಹಲವಾರು ಲೇಖನಗಳು ಮರಾಠಿ ವಿದ್ವತ್ ವಲಯದ ಸಂವೇದನಾಶೀಲ ಸ್ಪಂದನದಿಂದ ಉಂಟಾದವು. ಸಮಾಜ ಸಮ್ಮುಖ ಆಚರಣಾ ವಿಧಾನಗಳನ್ನು ಬದಿಗಿಟ್ಟು ವ್ಯಕ್ತಿ ವಿಶಿಷ್ಟತೆಯನ್ನು ಎತ್ತಿ ಹಿಡಿಯುವ ವೈಚಾರಿಕ ಆಕೃತಿಗಳ ಆರಾಧನೆಗೆ ತೊಡಗಿದ್ದರಿಂದ ಇಂದಿನ ಸಮಾಜ ದಿಕ್ಕು ತಪ್ಪುವಂತಾಗಿದ್ದನ್ನು ಗುರುತಿಸಿದಾಗ ಮೂಡಿಬಂದ ಪ್ರತಿಕ್ರಿಯೆ- ಈ ಲೇಖನಗಳು. ಅವರು ಮರಾಠಿಯಲ್ಲಿ ಬರೆದಿರುವ ಲೇಖನಗಳು ಹೆಚ್ಚು ಖಚಿತವೂ, ನಿರ್ದಿಷ್ಟವೂ ಸುಸಂಬದ್ಧವೂ ಆಗಿವೆ.

**ಮಹಾಯುದ್ಧ- 1,** **ಮಹಾಯುದ್ಧ- 2**
*ಲೇ: ಕೆ. ಪಿ. ಪೂರ್ಣಚಂದ್ರ ತೇಜಸ್ವಿ*
ಪುಟಗಳು - 96
ಪುಟಗಳು - 96
ಬೆಲೆ: ರೂ - 45
ಬೆಲೆ: ರೂ- 45
**ಪುಸ್ತಕ ಪ್ರಕಾಶನ,**
91, 9ನೇ ಮೇನ್
ಸರಸ್ವತಿಪುರಂ
ಮೈಸೂರು - 570 009

ಈ ಶತಮಾನದಲ್ಲಿ ಮನುಷ್ಯರ ಬದುಕನ್ನು ಬಹುವಾಗಿ ಬಾಧಿಸಿದ, ಅಪಾರ ಹಾನಿ, ಸಾವು-ನೋವುಗಳಿಗೆ, ಹಲವು ಸಾಮಾಜಿಕ ರಾಜಕೀಯ ಬದಲಾವಣೆಗಳಿಗೆ ಕಾರಣವಾದ ಘಟನೆಗಳೆಂದರೆ ಎರಡು ಮಹಾಯುದ್ಧಗಳು. ಈ ಶತಮಾನದ ನಾಗರಿಕತೆಯ ಮೇಲೆ ಈ ಮಹಾಯುದ್ಧಗಳು ಬೀರಿದ ಪ್ರಭಾವ ಏನು ಎಂಬುದನ್ನು ಅರಿಯಲು ಇಲ್ಲಿರುವ ಲೇಖನಗಳು, ಚಿತ್ರಗಳು ಸಹಾಯಕವಾಗುತ್ತವೆ. ಮಿಲೆನಿಯಂ ಮಾಲಿಕೆಯ ಕುಸುಮಗಳಿವು. ಅಲ್ಲದೆ ಈಗಲೂ ಯುದ್ಧ ಪ್ರಚೋದಕ ಕಾರ್ಯದಲ್ಲಿ ನಿರತವಾಗಿರುವ ಶಕ್ತಿಗಳು ಚಟುವಟಿಕೆ ನಡೆಸುತ್ತಿರುವಾಗ ಈ ಪುಸ್ತಕಗಳು ಪ್ರಸ್ತುತವಾಗಿವೆ.

- ಕೆ. ಪಿ. ಎಸ್.

# ಶಸ್ತ್ರ ವೈದ್ಯನ ಶಿಷ್ಯ

*ಪ್ರಾಚೀನ ಭಾರತದಲ್ಲಿ ಚರಕ-ಸುಶ್ರುತರಂತಹ ವೈದ್ಯರು ಶಸ್ತ್ರಚಿಕಿತ್ಸೆಯಿಂದ ಕಿವಿ, ಮೂಗು, ತುಟಿ ಮುಂತಾದ ಅಂಗಗಳನ್ನು ಸರಿಪಡಿಸುತ್ತಿದ್ದರೆಂದು ಇತಿಹಾಸದಲ್ಲಿ ದಾಖಲಾಗಿದೆ. ಯುದ್ಧಗಳಲ್ಲಿ ಸೈನಿಕರ ಶರೀರಗಳಿಗೆ ಉಂಟಾದ ಊನ ಹೀಗೆ ರಿಪೇರಿಯಾಗುತ್ತಿತ್ತು. ಮೂಲಿಕೆಗಳು ಮತ್ತು ಖನಿಜಗಳೇ ಅವರ ಔಷಧಿಗಳಿಗೆ ಮೂಲ. ಈಗ್ಗೆ ೨೫೦೦ ವರ್ಷಗಳ ಹಿಂದೆಯೇ ಭಾರತದಲ್ಲಿ ಆಸ್ಪತ್ರೆಗಳಿರುತ್ತಿದ್ದವು. ಅವುಗಳ ಆದ್ಯ ಪ್ರವರ್ತಕ ಚರಕ.*

ಗುರುಗಳ ಜೊತೆ ಸ್ವಾಮಿ ರಸ್ತೆಯ ಬಲದಲ್ಲಿದ್ದ ನೆರಳಲ್ಲಿ ಸಾಗುತ್ತಿದ್ದ. ಯಾವಾಗಲೂ ಅವರು ಮುಂದೆ, ಇವನು ನಾಲ್ಕು ಹೆಜ್ಜೆ ಹಿಂದೆ. ಕೈಯಲ್ಲಿ ಒಂದು ಪೆಟ್ಟಿಗೆ. ಅದರಲ್ಲಿ ಮೂಲಿಕೆಗಳು, ಔಷಧಿ, ಎಂತೆಂಥವೋ ಶಸ್ತ್ರಗಳು. ಅದರ ಭಾರ ಹೊತ್ತು ಸ್ವಾಮಿಗೆ ರೂಢಿಯಾಗಿತ್ತು. ರೋಗಿಗಳ ಮನೆಗಳಿಗೆ ಗುರು ಚರಕರು ಹೋಗುವಾಗೆಲ್ಲಾ ಅವರನ್ನು ಶಿಷ್ಯ ಹಿಂಬಾಲಿಸುತ್ತಿದ್ದ. ಈಗ ಊರಿನ ಹುಡುಗರು ಅವನನ್ನು ಉಂಡಾಡಿ ಗುಂಡ ಎಂದು ರೇಗಿಸುವಂತಿಲ್ಲ. ಎಲ್ಲರೂ ಗೌರವಿಸುವ ಚರಕರ ಸಹಚರನೆಂದರೆ ಸಾಮಾನ್ಯವೆ ?

ಸ್ವಾಮಿ ಅವರ ಶಿಷ್ಯನಾದ ಪ್ರಸಂಗವೇ ಒಂದು ಸ್ವಾರಸ್ಯ. ಎರಡು ವರ್ಷಗಳ ಹಿಂದೆ ಇದೇ ರೀತಿ ತಂದೆಯೊಡನೆ ರಸ್ತೆಯಲ್ಲಿ ನಡೆದು ಹೋಗಿದ್ದ. ಆದರೆ ಈಗಿನಂತೆ ನೆರಳಿನಲ್ಲಲ್ಲ. ಅಂದು ಉರಿಬಿಸಿಲು ಊರನ್ನು ಸುಡುತ್ತಿತ್ತು. ದಾರಿ ಯಾವುದೆಂದು ಕೇಳಬೇಕಾಗಿರಲಿಲ್ಲ. ತಂದೆಗೆ ಅದು ಚೆನ್ನಾಗಿ ಗೊತ್ತಿತ್ತು. ಸೀದಾ ಆ ಮನೆ ತಲುಪಿದರೆ ಜನವೋ ಜನ. ಕೆಲವರಿಗೆ ತಲೆಗೆ ಪಟ್ಟಿ, ಇನ್ನು ಕೆಲವರಿಗೆ ಕೈ-ಕಾಲುಗಳಿಗೆ. ಕೆಲವರಿಗೆ ಊರುಗೋಲುಗಳು. ಎಲ್ಲಾ ನೋವು ತಿನ್ನುತ್ತಿರುವವರೇ! ಎಲ್ಲರೂ ಸಾಲಾಗಿ ನಿಂತಿದ್ದರು. ಒಬ್ಬೊಬ್ಬರಾಗಿ ಸರದಿ ಪ್ರಕಾರ ಒಳಗೆ ಹೋಗುವುದು. ಹಾವು ಕಡಿದವರಿಗೆ ಮಾತ್ರ ಈ ಸರದಿಯ ನಿಯಮ ಇರಲಿಲ್ಲ.

ಸಂಜೆಯ ಮಬ್ಬುಗತ್ತಲು. ಒಳಗೆ ದೊಡ್ಡ ಅಂಗಳ. ಎಲ್ಲಾ ಸ್ವಚ್ಛ, ನೆರಪು. ಕಿಟಕಿಯ ಬಳಿ ಒಬ್ಬ ವಯಸ್ಸಾದ ಎತ್ತರದ ವ್ಯಕ್ತಿ, ಆದರೆ ಯೌವ್ವನದಿಂದ ಬಳುಕುತ್ತಿದ್ದ. ಏನೋ ಯೋಚಿಸುತ್ತಿದ್ದಂತೆ ಕಾಣುತ್ತಿದ್ದ: ''ಏನು ಮಗು, ಎಂತಹ ಬೇನೆ ನಿನ್ನದು ?'' ಸ್ವಾಮಿ ಕಕ್ಕಾಬಿಕ್ಕಿಯಾದ. ತಂದೆ ಹೇಳಿದ: ''ಅವನಿಗೇನೂ ಬೇನೆ ಇಲ್ಲ, ದೊರೆ.''

ಚರಕ ಹಣೆ ಸವರಿಕೊಂಡು ನಗೆಮುಖ ಮಾಡಿಕೊಂಡ: ''ನನ್ನ ಕಣ್ಣುಗಳು ಮಬ್ಬಾಗುತ್ತಿವೆ ನೋಡು, ಅದಕ್ಕೇ ಸರಿಯಾಗಿ ತಿಳಿಯಲಿಲ್ಲ. ನೀನು ಲಹೌರಿಯ ವಸುನಾಥನಲ್ಲವೆ ? ಇವನು ನಿನ್ನ ಮಗ, ಏನೂ ಆಗಿಲ್ಲದಿದ್ದರೆ ಬಂದದ್ದೇನು ವಿಶೇಷ ?''

''ಶಸ್ತ್ರದ ಹಾದಿ ತಿಳಿಯಲೆಂದು ಇವನನ್ನು ನಿಮ್ಮ ಬಳಿ ಕರೆತಂದಿದ್ದೇನೆ'' ಎಂದ ತಂದೆ.

''ಅಯ್ಯೋ! ಹುಚ್ಚ! ನಾನೇನು ಶಾಲೆ ನಡೆಸುತ್ತಿದ್ದೇನೆಯೋ ? ಇದು ಆಸ್ಪತ್ರೆ. ನಾನು ರೋಗ ಗುಣಪಡಿಸುವವನು. ನಾನೆಂತಹ ಪಾಠ ಹೇಳಿಕೊಟ್ಟೇನು ? ರೋಗಿಗಳ ಮನೆಗಳನ್ನು ಹುಡುಕುವುದೇ ಕಷ್ಟವಾಗಿದೆ ನನ್ನ ಕಣ್ಣುಗಳಿಗೆ, ನಾನಿನ್ನೇನು ಸತ್ವದ ಹಾದಿ ತೋರಿಯೇನು ? ಅದೂ ಒಂದು ಕನಸು. ಆಗಿನ ನನ್ನ ಕಣ್ಣು, ಕೈಚಳಕ, ಶಸ್ತ್ರಕ್ರಿಯೆ, ಎಲ್ಲಾ.''

''ಈ ನನ್ನ ಸ್ವಾಮಿ ನಿಮ್ಮ ಕಣ್ಣುಗಳಾಗಲೆಂದು ನನ್ನ ಆಸೆ. ಅವನು ನಿಮಗೆ ಕೈಗೋಲು ಆದಾನು. ಯಾರಿಂದಲಾದರೂ ಅನ್ಯಾಯವಾಗಿ ಏನನ್ನೋ ಕಿತ್ತುಕೊಂಡರೆ ನಾಳೆ ಅವನೂ ನಿಮ್ಮಂತೆ ಸರಿಪಡಿಸಿಯಾನು,'' ಎಂದ ತಂದೆ.

–ಅಂದೇ ಸ್ವಾಮಿ ಚರಕರ ಶಿಷ್ಯನಾಗಿ ಅವರಲ್ಲಿ ಉಳಿದ. ಯಾರದೋ ಮನೆಯಲ್ಲಿ, ಯಾವುದೋ ಊರಲ್ಲಿ ಅಪ್ಪ ತನ್ನನ್ನೇಕೆ ಹೀಗೆ ಬಿಟ್ಟುಹೋದನೆಂದು ಸ್ವಾಮಿಗೆ ಬೇಸರ. ಅಳು ತಡೆಯುವುದು ಕೂಡ ಕಷ್ಟವಾಯಿತು. ಬೇರೆಯವರು ಮಕ್ಕಳನ್ನು ಬಡಗಿಯ ಬಳಿ, ಕಮ್ಮಾರನ ಬಳಿ, ಕುಂಬಾರನ ಬಳಿ ಬಿಟ್ಟರೆ ತನ್ನನ್ನೇಕೆ ಏನೂ ಅಲ್ಲದ ಚರಕರ ಬಳಿ ಬಿಟ್ಟದ್ದು ಎಂದು ಸ್ವಾಮಿ ಮನಸ್ಸಿನಲ್ಲೇ ತಂದೆಯನ್ನು ಶಪಿಸಿದ.

ತಂದೆಗೆ ಚರಕರ ಪರಿಚಯ ಹೇಗಾಯಿತು ? ಎಷ್ಟು ಬಾರಿ ಕೇಳಿದರೂ ಗುರುಗಳು ಇನ್ನೇನೋ ವಿಷಯ ತೆಗೆದು ಮಾತು ಬದಲಾಯಿಸಿಬಿಡುತ್ತಾರೆ. ಸ್ವಲ್ಪ ದೂರ ಹೋಗಿ ಒಂದು ಗಲೀಜು ಗಲ್ಲಿಗೆ ಗುರುಗಳು ತಿರುಗಿದರು. ಎರಡು ಕಡೆಯೂ ಚಿಕ್ಕ ಚಿಕ್ಕ ಗುಡಿಸಲುಗಳು. ಔಷಧಕ್ಕೇ ಕಾಸಿಲ್ಲ, ಇನ್ನು ವೈದ್ಯರಿಗೇನು ಕೊಟ್ಟಾರು ಅವರು. ಆದರೂ ಗುರುಗಳು ಇಲ್ಲಿಗೆ ಬರುತ್ತಲೇ ಇರುತ್ತಾರಲ್ಲ ಎಂದು ಸ್ವಾಮಿಗೆ ಅಚ್ಚರಿ, ಸಂತೋಷ. ಚಳಿಗಾಲದಲ್ಲಿ ಚರಕರು, ಇವರಿಗೆ ಬಟ್ಟೆ ಕೂಡ ತಂದುಕೊಡುತ್ತಿದ್ದುದನ್ನು ಸ್ವಾಮಿ ನೆನಪಿಸಿಕೊಂಡ.

ಗಲ್ಲಿಯ ಕೊನೆಯಲ್ಲಿ ಒಂದು ಮಹಡಿ ಮನೆಯಿತ್ತು. ಕಿಟಕಿ ಬಾಗಿಲುಗಳೆಲ್ಲಾ ಮುಚ್ಚಿದ್ದ ಮನೆ. ಗುರುಗಳೆಂದರು: ''ಇದೊಬ್ಬ ಒಳ್ಳೆಯವನ ಮನೆ. ಪಾಪ, ಅವನೀಗ ರೋಗಿ. ನಿಮ್ಮಪ್ಪನಿಗೆ ಬಹಳ ಸಹಾಯ ಮಾಡಿದ್ದ. ಅವನ ಬಾಯಿಗೆ ಪಟ್ಟಿ ಕಟ್ಟಿದ್ದಾಗ ಈ ಮನೆಯಲ್ಲಿ ಆಶ್ರಯ ಸಿಕ್ಕಿತ್ತು. ಅವನಿಗೆ ನಾನು ಶಸ್ತ್ರಚಿಕಿತ್ಸೆ ಮಾಡಿದ್ದು ಇಲ್ಲೇ.''

ಬಾಯಿಗೆ ಶಸ್ತ್ರಚಿಕಿತ್ಸೆಯೇ ? ಅಪ್ಪನ ಹಲ್ಲುಗಳು ಉದುರಿದ್ದುವೇನೋ ! ಆದರೆ ಅದಕ್ಕೆ ಪಟ್ಟಿ ಏಕೆ ಕಟ್ಟಿಕೊಳ್ಳಬೇಕು ? ಸ್ವಾಮಿಯ ಪ್ರಶ್ನೆಗಳು ಹತ್ತಾರು. ಇಂದಾದರೂ ಗುರುಗಳು ಎಲ್ಲವನ್ನೂ ಬಿಚ್ಚಿ ಹೇಳಬಹುದೇ, ಎಂದುಕೊಂಡ. ಅದೇನೆನ್ನಿಸಿತೋ, ಅಂತೂ ಗುರುಗಳು ಹೇಳಿದರು:

''ನಿನ್ನ ತಂದೆ ನನ್ನ ಬಳಿ ವೈದ್ಯಕೀಯ ಸಲಹೆಗೆ ಮೊಟ್ಟಮೊದಲು ಬಂದಿದ್ದು ಮನೆ ಸುಟ್ಟುಹೋದಾಗ. ಅದು ನೀನು ಹುಟ್ಟುವ ಮೊದಲೇ ಆದ್ದು. ಆಗ ನೀವಿದ್ದುದು ಬೇರೊಂದು ಹಳ್ಳಿಯಲ್ಲಿ. ನಿಮ್ಮಮ್ಮ ಅವರಪ್ಪನ ಮನೆಗೆ ಹೋಗಿ ತಂಗಿದಳು. ಮನೆಯಲ್ಲಿದ್ದ ಚಿನ್ನದ ಬಳೆಗಳಲ್ಲಿ ಒಂದನ್ನು ಮಾರಿಬರಲು ಅಪ್ಪ ಪಟ್ಟಣಕ್ಕೆ ಹೋದ. ಅದು ಬಿಟ್ಟು ಬೆಂಕಿಯಲ್ಲಿ ಸುಟ್ಟ ಮನೆಯಲ್ಲಿ ಬೇರೇನೂ ಉಳಿದಿರಲಿಲ್ಲ.

''ಅಂಗಡಿಗಳ ಸಾಲಿನಲ್ಲಿ ಒಂದೆಡೆ ನಿಂತಿದ್ದಾಗ ಕಾವಲು ಸೇನೆಯವರು ಬಂದು ಅವನನ್ನು ಹಿಡಿದು ಬಳೆ ಕಿತ್ತುಕೊಂಡರು. ಅವನನ್ನು ಕಳ್ಳನೆಂದು ಜನ ಬೈದಾಡಿದರು. ರಾಜನ ಅಕ್ಕಸಾಲಿಗನೇ ಬಂದು ಬಳೆಯನ್ನು ನೋಡಿದ. ತಾನೇ ರಾಜಕುಮಾರಿಗೆ ಮಾಡಿಕೊಟ್ಟಿದ್ದದ್ದು ಅದು ಎಂದ. ಅದು ಎರಡು ದಿನಗಳ ಮುಂಚೆ ಕಳವಾಗಿತ್ತಂತೆ. ಎರಡನೆಯ ಬಳೆಯನ್ನೂ ಹಿಂದಿರುಗಿಸೆಂದು ನಿನ್ನ ತಂದೆಗೆ ತಗಾದೆ ಮಾಡಿದರು. ಅವನನ್ನು ನ್ಯಾಯಾಲಯಕ್ಕೆ ಎಳೆದೊಯ್ದರು. ಒಂದು ನಿಮಿಷದಲ್ಲಿ ವಿಚಾರಣೆ ಮುಗಿದು ತೀರ್ಪು ಬಂತು. ನಿಮ್ಮಪ್ಪನ ಕೆಳತುಟಿಯನ್ನು ಸುಡಬೇಕೆಂಬ ಶಿಕ್ಷೆ ವಿಧಿಸಲಾಯಿತು.''

''ಆದರೆ ನಮ್ಮಪ್ಪನಿಗೆ ಎರಡು ತುಟಿಗಳೂ ಇವೆಯಲ್ಲಾ !'' ಎಂದ ಸ್ವಾಮಿ.

''ಪೂರ್ತಿ ಕೇಳು ಮಗು'' ಎಂದ ಚರಕ. ''ನೀನು ಶಸ್ತ್ರವೈದ್ಯನಾಗುವವನಲ್ಲವೆ ? ಅಂತಹವನಿಗೆ ಅಪಾರ ಸಹನೆ ಬೇಕು. ಕಾದ ಸೀಸದಿಂದ ನಿಮ್ಮಪ್ಪನ ತುಟಿಯನ್ನು ಸುಟ್ಟರು. ಪ್ರಜ್ಞೆ ತಪ್ಪಿದ್ದ ನಿಮ್ಮಪ್ಪ ಎಚ್ಚರಾದಾಗ ಅಸಾಧ್ಯ ನೋವು ಸಹಿಸದಾದ. ಜೊತೆಗೆ ಊರಿಗೆ ಬಂದು ಮುಖ ತೋರಿಸಲು ಇಷ್ಟವಾಗಲಿಲ್ಲ. ಅಲ್ಲೇ ಉಳಿದುಬಿಟ್ಟ. ಅಮ್ಮನಿಗೆ ಇದು ತಿಳಿದಾಗ ಇನ್ನೊಂದು ಬಳೆಯೊಡನೆ ಪಟ್ಟಣಕ್ಕೆ ಹೋದಳು. ಜನ ಸೇರಿದ ಕಡೆಯೆಲ್ಲಾ ತನ್ನ ಕತೆ ಹೇಳಿಕೊಂಡಳು. ಅತ್ತಳು, ಬಳೆ ತೋರಿಸಿದಳು, ತನ್ನ ಗಂಡ ನಿರ್ದೋಷಿ ಎಂದು ಸಾರಿದಳು. ಹಿಂದೆ ನಿಮ್ಮಪ್ಪನನ್ನು ದೂಷಿಸಿದ್ದವರು ಈಗ ನ್ಯಾಯಾಧೀಶ ಮತ್ತು ರಾಜನನ್ನು ದೂಷಿಸಲಾರಂಭಿಸಿದರು. ರಾಜನ ಬಳಿ ದೂರು ಕೊಂಡೊಯ್ದರು. ರಾಜ ನಿನ್ನಮ್ಮನನ್ನು ಮಾತ್ರ ಒಳಕ್ಕೆ ಬರಮಾಡಿಕೊಂಡ.

''ನಿಮ್ಮಮ್ಮ ಗಟ್ಟಿಗಿತ್ತಿ. ರಾಜನನ್ನು ದುರುಗುಟ್ಟಿ ಹೇಳಿದಳು: 'ನೀನೆಂತಹ ನ್ಯಾಯಪರ ? ಈ ರಾಜ್ಯದಲ್ಲಿ ಏನಾದರೂ ಕಾನೂನು ಪಾಲನೆ ಉಂಟೆ ? ನನ್ನ ಗಂಡನ

ಜಿ. ಆರ್.

ತುಟಿಯನ್ನು ಅನ್ಯಾಯವಾಗಿ ಸುಡಿಸಿದ್ದೀರಲ್ಲ, ನಿನ್ನ ಅರಮನೆ ಹಾಳಾಗ.'

''ರಾಜ ಕಕ್ಕಾವಿಕ್ಕಿಯಾದ. ಕಳ್ಳತನ ಮಾಡಿದ್ದ ಅಪರಾಧಕ್ಕೆ ಶಿಕ್ಷೆ ನ್ಯಾಯವಾಗಿಯೇ ಆಗಿದೆಯೆಂದು ಸವಾಲು ಹಾಕಿದ. ನಿಮ್ಮಪ್ಪನಲ್ಲಿ ದೊರಕಿದ್ದ ಒಂದು ಬಳೆಯನ್ನೂ ತರಿಸಿ ತೋರಿಸಿದ. ಕೂಡಲೆ ನಿಮ್ಮಮ್ಮ ಇನ್ನೊಂದನ್ನೂ ರಾಜನ ಕೈಯಲ್ಲಿಟ್ಟಳು. ಅವನಿಗೆ ಕಣ್ಣು ಕಟ್ಟಿ ಬಂತು. ಕೂಡಲೇ ಅಕ್ಕಸಾಲಿಗನನ್ನು ಕರೆಸಿದ. ಥರಥರನೆ ನಡುಗುತ್ತಿದ್ದ ಅವನು ಇನ್ನೇನು ಶಿಕ್ಷೆಯಾಗುತ್ತದೋ ಎಂದು ಹೆದರಿ ನಿಜ ಹೇಳಿಬಿಟ್ಟ. ತಾನೇ ಬಳೆಗಳನ್ನು ಕದ್ದಿದ್ದನಂತೆ. ತನ್ನ ಅನುಕೂಲಕ್ಕೆ ನಿಮ್ಮಪ್ಪನನ್ನು ಸಿಕ್ಕಿಹಾಕಿಸಿದ್ದನಂತೆ.

''ಅವನೇನೋ ಕೇಡಿಗ, ಸರಿ. ಆದರೆ ನಿಮ್ಮಪ್ಪನ ಗತಿ ಏನು ? ನಮಗೆ ಮಿದುಳು, ಕೈ ಎಲ್ಲಾ ಇರುವುದೇತಕ್ಕೆ ? ಅವನ್ನು ಅಂಡಿನ ಕೆಳಗೆ ಹಾಕಿ ಕೂಡಲಿಕ್ಕೇನು ? ಅದಕ್ಕೇ ನಾನು ನಿಮ್ಮಮ್ಮನನ್ನು ಕಂಡು ಸಹಾಯಹಸ್ತ ನೀಡಿದೆ. ಅವಳ ಕಣ್ಣುಗಳನ್ನು ನೋಡಬೇಕಿತ್ತು ಆಗ ! 'ಇದು ಸಾಧ್ಯವೇ, ವೈದ್ಯರೇ; ನನ್ನ ಗಂಡನಿಗೆ ತುಟಿ ಕೂಡಿಸುತ್ತೀರಾ ?' ಎಂದಳು. 'ಪ್ರಯತ್ನ ಮಾಡೋಣ. ಅದು ಸರಳ ಚಿಕಿತ್ಸೆಯೇ ಇರಬೇಕು' ಎಂದೆ.



''ನಾನೇನೋ ಸರಳ ಎಂದು ಹೇಳಿಬಿಟ್ಟೆ. ಆದರೆ ಅವರೆಗೆ ಯಾರೂ ಅಂತಹ ಶಸ್ತ್ರವೈದ್ಯ ಮಾಡಿದ್ದುದು ನನಗೆ ತಿಳಿದಿರಲಿಲ್ಲ. ನನ್ನ ಸಂಶಯವನ್ನು ನಿಮ್ಮಮ್ಮನಿಗೆ ಹೇಗೆ ಹೇಳುವುದು ! ವೈದ್ಯನು ರೋಗಿಗಳ ಸಂಬಂಧಿಗಳಿಗೆ ಸಂಶಯಗಳನ್ನೆಲ್ಲಾ ಬಿಚ್ಚಿ ಹೇಳಲಾಗುತ್ತದೆಯೇ ?

''ಆಗ ನೋಡು, ನಿಮ್ಮಪ್ಪ ಈ ಮನೆಯಲ್ಲಿದ್ದುದು. ಪಾಪ, ಈ ಮನೆಯವನು ಅಂಥವರಿಗೆಲ್ಲಾ ಆಶ್ರಯ ಕೊಡುತ್ತಿದ್ದ. ಮುಖ ಮುಚ್ಚುವಷ್ಟು ಬಟ್ಟೆಯನ್ನೂ ಅವನೇ ಕೊಟ್ಟಿದ್ದ. ನಿಮ್ಮಮ್ಮ ಬಹಳ ಒಳ್ಳೆಯ ದಾದಿ ಆಗಬಹುದಿತ್ತು, ನೋಡು. ಮೇಜನ್ನೆಲ್ಲಾ ಸ್ವಚ್ಛಮಾಡಿ ನನ್ನ ಉಪಕರಣಗಳನ್ನೆಲ್ಲಾ ಜೋಡಿಸಿಟ್ಟಳು. ಕಾಡಿನಲ್ಲಿ ಮೊನ್ನೆ ಒಂದು ಸೊಪ್ಪು ತೋರಿಸಿ ಅದರ ಗುಣ ಹೇಳಿದ್ದು ನೆನಪಿದೆಯೆ? ಅದನ್ನೇ ನಾನು ನಿಮ್ಮಪ್ಪನಿಗೆ ಜಗಿಯಲು ಕೊಟ್ಟಿದ್ದು. ಅದರಿಂದ ಮುಖ ಜೋಮು ಹಿಡಿದಂತಾಗಿ ನೋವು ಕಾಣುವುದಿಲ್ಲ. ನನ್ನ ಶಸ್ತ್ರಕ್ರಿಯೆಗೆ ಅದು ಅನುಕೂಲ.

''ನಿಮ್ಮಪ್ಪನ ಕುಂಡಿಯ ಮೇಲೆ ಒಂದು ದೊಡ್ಡ ಮಚ್ಚೆ ಇದೆ. ನೀನು ನೋಡಿದ್ದೀಯೇನು ? ಅದೇನೆಂದು ಯಾರಾದರೂ ಕೇಳಿದರೆ ಹುಲಿ ಕಚ್ಚಿದ್ದು ಎಂದುಬಿಡುತ್ತಾನೆ, ಅಲ್ಲವೇ ? ಅದು ನಾನು ಮಾಡಿದ್ದು. ಅಲ್ಲಿಯ ಚರ್ಮವನ್ನು ಸ್ವಲ್ಪ ಮಾಂಸದ ಸಮೇತ ತೆಗೆದು ಕೆಳದುಟಿಯ ಜಾಗದಲ್ಲಿಟ್ಟೆ. ಕಳೆದವಾರ ಅಂಥದೇ ಒಂದು ಶಸ್ತ್ರಚಿಕಿತ್ಸೆಯನ್ನು ಮಾಡಿದಾಗ ನೀನೂ ನನ್ನ ಜೊತೆಯಲ್ಲೇ ಇದ್ದೆಯಲ್ಲಾ ! ತುಟಿಯ ಜಾಗದಲ್ಲಿರಿಸಿ ಕಾಯಿಸಿದ ಸಲಾಕೆಯಿಂದ ಆ ಭಾಗದ ಬೇರೆ ಚರ್ಮದೊಡನೆ ಬೆಸೆಯುವುದು ಮೈ ಜುಮ್ಮೆನ್ನಿಸುತ್ತದೆ ಅಲ್ಲವೆ ? ಮೊನ್ನೆ ಸಲಾಕೆಯನ್ನು ನೀನೆ ಹಿಡಿದುಕೊಂಡಿದ್ದೆಯಲ್ಲ, ಗಾಬರಿಯಾಯಿತೆ ? ನನಗಂತೂ ಆ ದಿನ ವಿಪರೀತ ಭಯವಿತ್ತು. ಗಾಯವೇನಾದರೂ ಕೀವುಗೂಡಿದರೆ ಏನು ಗತಿ ! ಜೊತೆಗೆ ಕುಂಡಿಯ ಮೇಲಿನ ಗಾಯ ಬೇರೆ !

''ಇದು ಹೇಗಿದೆ ನೋಡು, ನಮ್ಮ ವಿದ್ಯೆ. ಒಂದು ಗಾಯ ಹೋಗಲಾಡಿಸಲು ಇನ್ನೊಂದು ಗಾಯ ಮಾಡುವುದು ! ಇಲ್ಲದಿದ್ದರೆ ಶಸ್ತ್ರಚಿಕಿತ್ಸೆ ಹೇಗೆ ಮಾಡುವುದು ? ನಿಮ್ಮಮ್ಮನ ಶುಶ್ರೂಷೆ ಮತ್ತು ನನ್ನ ವೈದ್ಯಕೀಯ, - ಸದ್ಯ, ನಿಮ್ಮಪ್ಪ ಚೇತರಿಸಿಕೊಂಡ. ಆ ಅನುಭವ ಅಮೂಲ್ಯವಾದ್ದು. ಆಮೇಲೆ ಅದೆಷ್ಟು ಅಂತಹ ಶಸ್ತ್ರಕ್ರಿಯೆಗಳನ್ನು ಮಾಡಲು ಧೈರ್ಯಬಂತು ! ಬರೀ ಜ್ಞಾನ ಸಾಲದು; ವೈದ್ಯನಿಗೆ ಅನುಭವ ಕಲಿಸುವಷ್ಟು ಯಾವ ಗುರುವೂ ಕಲಿಸಲಾರ.

''ಅನ್ಯಾಯವಾಗಿ ನಿಮ್ಮಪ್ಪನ ತುಟಿಯನ್ನು ಕತ್ತರಿಸಿಹಾಕಿದ್ದರು. ಅದನ್ನು ಮತ್ತೆ ಗಳಿಸಿಕೊಡಲು ಆ ರಾಜನಿಗೆ ಸಾಧ್ಯವಿತ್ತೆ ? ಕತ್ತರಿಸಿದ ನಂತರ ಅವನ ಪಾಡೇನೆಂದು ವಿಚಾರಿಸಲು ರಾಜನಾಗಲಿ ಅವನ ಅಧಿಕಾರಿಗಳಾಗಲಿ ಹೋಗಲಿಲ್ಲ ! ಅನ್ಯಾಯವನ್ನು ಸ್ವಲ್ಪಮಟ್ಟಿಗಾದರೂ ಸರಿಪಡಿಸಬಲ್ಲವನು ವೈದ್ಯ. ನನ್ನ ಸೇವೆಗೆ ಮೊದಲ ಅವಕಾಶ ಕಲ್ಪಿಸಿದವನು ನಿನ್ನ ತಂದೆ. ಆ ಅರ್ಥದಲ್ಲಿ ಅವನೂ ನನಗೊಬ್ಬ ಗುರುವೇ ಆಗಿದ್ದಾನೆ.''

ಸ್ವಾಮಿಯ ಕಣ್ಣಲ್ಲಿ ನೀರು ಸುರಿಯಿತು. ಅಲ್ಲೇ ಚರಕರ ಕಾಲಿಗೆ ಬಿದ್ದು ನಮಸ್ಕರಿಸುತ್ತಿದ್ದನೋ ಏನೋ ! ಆದರೆ ಅವರು ಹೋಗಬೇಕಾದ ಮನೆಯನ್ನು ಆಗಲೇ ತಲುಪಿಬಿಟ್ಟಿದ್ದರು. ಚರಕರು ಹೇಳಿದರು: ''ನೋಡು, ರೋಗಿಯ ಮನೆಯೊಳಗೆ ಹೋಗುವಾಗ ಮನಸ್ಸು ಹಗುರಾಗಿರಬೇಕು, ಮುಖದ ಭಾವ ಲವಲವಿಕೆಯನ್ನು ಸೂಚಿಸಬೇಕು. ರೋಗಿಗೆ ಏನು ಚಿಕಿತ್ಸೆ ನೀಡಬಹುದೆಂಬುದನ್ನು ಬಿಟ್ಟು ಬೇರೇನೂ ನಿನ್ನ ಮನಸ್ಸನ್ನು ಆವರಿಸಬಾರದು. ಬಾ, ಕಣ್ಣು ಒರೆಸಿಕೋ, ನಗುನಗುತ್ತಾ ಒಳಗೆ ಹೋಗೋಣ. ಇನ್ನೂ ಒಂದು ಮಾತು: ನಮ್ಮ ರೋಗಿಯ ದೇಹಸ್ಥಿತಿಯ ಬಗ್ಗೆ ಯಾರೊಡನೆಯೂ ಹೆಚ್ಚು ಮಾತನಾಡಬಾರದು. ಅವರು ಅದನ್ನೇ ರೋಗಿಯ ವಿರುದ್ಧ ಬಳಸಿಕೊಂಡುಬಿಟ್ಟಾರು ಎಂಬ ತಿಳಿವಳಿಕೆ ನಮಗೆ ಅಗತ್ಯ. ಅದಕ್ಕೇ ಅಲ್ಲವೆ ಇಷ್ಟು ದಿನ ನಿನ್ನಪ್ಪನ ಬಗ್ಗೆ ನಿನಗೆ ನಾನು ಏನೂ ಹೇಳದೇ ಇದ್ದುದು !''

○○

## ಚಿತ್ರಕಲೆಯ ಬಗ್ಗೆ ನಿಮ್ಮ ತಿಳುವಳಿಕೆ ಪರೀಕ್ಷಿಸಿರಿ

೧. ಭಾರತದಲ್ಲಿನ ಅತಿ ಪ್ರಾಚೀನ ಮಾನವನ ಗುಹಾಚಿತ್ರಗಳಿರುವುದು.
ಅ) ಅಜಂತ ಆ) ಪಟ್ಟದಕಲ್ಲು ಇ) ಬಿಂಬಡ್ಕ

೨. ಚಿತ್ರಕಲೆಯ ಬಗ್ಗೆ ವಿವರಿಸುವ ಭಾರತೀಯ ಗ್ರಂಥಗಳಲ್ಲಿ ಮುಖ್ಯವಾದುದು.
ಅ) ಶಿಲ್ಪಸಾರ ಆ) ವಿಷ್ಣುಧರ್ಮೋತ್ತರ ಪುರಾಣ ಇ) ಮಾನಸಾರ

೩. ಕಲೆಗಳು ೬೪ ವಿಧವೆಂದೂ, ಅದರಲ್ಲಿ ಚಿತ್ರಕಲೆಯೂ ಸೇರಿದೆಯೆಂದೂ ಹೇಳುವ ಗ್ರಂಥ.
ಅ) ವಿಷ್ಣುಧರ್ಮೋತ್ತರ ಆ) ವಾತ್ಸ್ಯಾಯನ ಕಾಮಸೂತ್ರ ಇ) ಚಿತ್ರಸೂತ್ರ

೪. ರಾಧಾಕೃಷ್ಣರ ಲೀಲೆಗಳ ಶೃಂಗಾರ ಚಿತ್ರಗಳಾದ 'ರಾಗಮಾಲ' ಕೃತಿಗಳು ಈ ಗುಂಪಿಗೆ ಸೇರುತ್ತವೆ.
ಅ) ಚಿಕಣಿ ಚಿತ್ರಗಳು, ಆ) ಭಿತ್ತಿಚಿತ್ರಗಳು ಇ) ಬೇರೆ ಗುಂಪಿಗೆ

೫. ವಿಶ್ವವಿಖ್ಯಾತ ಭಿತ್ತಿಚಿತ್ರಗಳಿರುವ ಅಜಂತ ಗುಹೆಗಳು ಇರುವುದು.
ಅ) ಹೈದರಾಬಾದ್ ಬಳಿ, ಆ) ಮುಂಬಯಿ ಬಳಿ, ಇ) ಔರಂಗಾಬಾದ್ ಬಳಿ

ಉತ್ತರಗಳು : ೧) ಇ, ೨) ಆ, ೩) ಆ, ೪) ಅ, ೫) ಇ,

- ಯು. ಎಸ್. ವೆಂಕಟರಾಮನ್

# ಮೂಷಕದೊಂದಿಗೆ ಮುಖಾಮುಖಿ

ಇದೇನು ಮಹಾ ? ನಿತ್ಯವೂ ಉಗ್ರಾಣಗಳಲ್ಲಿ, ಚರಂಡಿಗಳಲ್ಲಿ ಅಥವಾ ವರ್ಷಕ್ಕೊಮ್ಮೆ ಗಣೇಶನ ವಾಹನವಾಗಿ ಮೂಷಕದೊಂದಿಗೆ ಮುಖಾಮುಖಿ ಆಗುತ್ತಲೇ ಇರುತ್ತದಲ್ಲ. ಇದರಲ್ಲೇನಿದೆ ವಿಶೇಷ ಎಂದು ಹುಬ್ಬೇರಿಸಬೇಡಿ. ಇದು ಅಂತಿಂಥ ಮೂಷಕವಲ್ಲ, ಕೇವಲ ಅವರಪ್ಪನ ಬಳುವಳಿ.

ಪ್ರಾಣಿಗಳ ಪ್ರತಿರೂಪ, ಎಂದರೆ ಕ್ಲೋನಿಂಗ್, ಈಗ ವಿಜ್ಞಾನಿಗಳ ಫ್ಯಾಷನ್ ಪೆರೇಡ್ ಆಗುತ್ತಿರುವ ಸತ್ಯ ಗೊತ್ತಲ್ಲ. ಸ್ಕಾಟ್‌ಲ್ಯಾಂಡಿನ ರೋಸ್‌ಲೀನ್ ಸಂಸ್ಥೆಯಲ್ಲಿ ಇಯಾನ್ ವಿಲ್ಮೆಟ್ 'ಡಾಲಿ' ಕುರಿಮರಿಯನ್ನು ತಾಯ ಕೆಚ್ಚಲ ಕೋಶದಿಂದ ಸೃಷ್ಟಿಸಿದ ಮೇಲೆ ಕ್ಲೋನಿಂಗ್ ಕೋಲಾಹಲ ಬಿರುಗಾಳಿ ಎಬ್ಬಿಸಿದ್ದೇ ಎಬ್ಬಿಸಿದ್ದು. ಕಳೆದ ಮೇ ತಿಂಗಳಲ್ಲಿ ಅಮೆರಿಕಾದ ಮೆಸಾಚುಸೆಟ್ಸ್‌ನ ತಳಿ ತಂತ್ರಜ್ಞಾನ ಸಂಸ್ಥೆ 'ಮೈರಾ' ಎಂಬ ಮೇಕೆ ಮರಿಯ ಅವಳಿಗಳನ್ನು ಸೃಷ್ಟಿಸಿದೆ. ಡಾಲಿ ಕುರಿಮರಿ ಹುಟ್ಟಿದ್ದು ತಾಯ ಕೆಚ್ಚಲ ಕೋಶದಿಂದ; ಮೈರಾ ಮರಿಗಳು ಹುಟ್ಟಿದ್ದು ಭ್ರೂಣದಿಂದ. ಇನ್ನೊಂದು ವಿಶೇಷ ಎಂದರೆ ಈ ಮರಿಗಳಲ್ಲಿ ಮನುಷ್ಯನ ಜೀನನ್ನು ಸೇರಿಸಲಾಗಿದೆ. ಏಕೆ ಎನ್ನುವಿರಾ ? ರಕ್ತ ಹೆಪ್ಪುಗಟ್ಟುವುದನ್ನು ತಡೆಯಲು ಆಂಟಿತ್ರೋಂಬಿನ್ 111 ಎಂಬ ರಾಸಾಯನಿಕದ ಬಗ್ಗೆ ವಿಜ್ಞಾನಿಗಳು ಸಂಶೋಧನೆ ಮಾಡುತ್ತಿದ್ದಾರೆ. ಅದು ಮುಂದೆ ಇವುಗಳ ಹಾಲಿನಲ್ಲಿ ಬರುತ್ತದಂತೆ. ಆದ್ದರಿಂದ 'ವಾತಾಪಿ ಜೀರ್ಣೋಭವ' ಎಂದು ಈ ಮರಿಗಳನ್ನು ತಿಂದು ತೇಗುವಂತಿಲ್ಲ !

ಡಾಲಿಯೂ ಹೆಣ್ಣು; ಈ ಮೈರಾ ಮರಿಗಳೂ ಕೂಡ ಹೆಣ್ಣು. ವಿಜ್ಞಾನಿಗಳೇಕೆ ಹೆಣ್ಣಿನ ಪರ ? ಏಕೆಂದರೆ ಜೆನಿಟಿಕ್ ಇಂಜಿನಿಯರಿಂಗ್ ತಜ್ಞರು ಈ ಬಗೆಯ ಸಂಶೋಧನೆ ಮಾಡುತ್ತಿರುವುದು ಅವುಗಳ ಹಾಲಿನಲ್ಲಿ ಉಪಯುಕ್ತ ಪ್ರೋಟಿನ್ ಉತ್ಪಾದಿಸಬಹುದು ಎಂಬ ದೃಷ್ಟಿಯಿಂದ. ಹೀಗಾಗಿ 'ಪ್ರತಿರೂಪ' ಗಂಡಾಗಿದ್ದರೆ ಅದು ನಿಜಕ್ಕೂ ದಂಡಪಿಂಡ.

ಆದರೆ ಜಪಾನಿನ ಗಂಡು ಸಂಶೋಧಕರು ಬಿಡಬೇಕಲ್ಲ. ಹಟ ಹಿಡಿದು ಈಗ 'ಫಿಬ್ರಿಯೋ' ಸೃಷ್ಟಿಸಿದ್ದಾರೆ. ಫಿಬ್ರಿಯೋ ಎಂದರೆ ಯಾವುದೋ ಖಾಯಿಲೆ ಎಂದು ಗಾಬರಿಯಾಗಬೇಡಿ. ಇದು ಇತ್ತೀಚೆಗೆ ಸೃಷ್ಟಿಸಿದ ಮೂಷಕ ಮಹಾಶಯ. ಹೊನೊಲುಲುವಿನ ಜೆನಿಟಿಕ್ ಇಂಜಿನಿಯರಿಂಗ್ ಸಂಶೋಧನಾ ಸಂಸ್ಥೆ ಹಿಂದೆ ಎರಡು ಹೆಣ್ಣಿಲಿಗಳನ್ನು ಸೃಷ್ಟಿಸಿತ್ತು. ಈಗ ಇದೇ ಸಂಸ್ಥೆಯ ವಿಜ್ಞಾನಿಗಳು ಹತ್ತು ವಾರಗಳ ಪ್ರಾಯದ ಚಿನ್ನದ ಬಣ್ಣದ ಗಂಡು ಇಲಿಯ ಬಾಲದ ತುದಿಯಿಂದ ಫೈಬ್ರೋಬ್ಲಾಸ್ಟ್ ಎಂಬ ಕೋಶವನ್ನು ತೆಗೆದು ಹೆಣ್ಣಿಲಿಯ ಅಂಡಾಶಯಕ್ಕೆ ಆ ಕೋಶದ ನ್ಯೂಕ್ಲಿಯೈ ಬಿತ್ತಿ, ಗಂಡು ಮರಿಯನ್ನು ಹೊರತೆಗೆದಿದ್ದಾರೆ. 700 ಕೋಶಗಳಲ್ಲಿ ಜೀವ ಮಿಟುಕಿದ್ದು 100ರಲ್ಲಿ ಮಾತ್ರ. ಸಿಸೇರಿಯನ್ ಶಸ್ತ್ರಚಿಕಿತ್ಸೆ ಮಾಡಿಸಿಕೊಂಡ ನಂತರ ಹುಟ್ಟಿದ್ದು ಮೂರು ಸಣ್ಣಿಲಿಗಳು. ಬದುಕಿದ್ದು ಒಂದೇ ಒಂದು. ಇದೂ



ಕೂಡ ಥೇಟ್ ಅಪ್ಪನ ತರಹ. ಅದೇ ಚಿನ್ನದ ಬಣ್ಣದ ಚರ್ಮ. ಇನ್ನೇನು ಜಗತ್ತಿನಲ್ಲಿ ದೊಡ್ಡ ಸುದ್ದಿಯಾಗುತ್ತದೆಂದು ಇದನ್ನು ಸೃಷ್ಟಿಸಿದ ಬ್ರಹ್ಮದ್ವಯರು ಬೀಗಬೇಕೆನ್ನುವಷ್ಟರಲ್ಲಿ ಕಾಗೋಷಿಮಾದ ಇಬ್ಬರು ತಳಿ ವಿಜ್ಞಾನಿಗಳು ಬಾಣ ಬಿಟ್ಟೇಬಿಟ್ಟರು. ಗೂಳಿಯ ಚರ್ಮದ ಕೋಶ ಬಳಸಿ 1998ರ ಆಗಸ್ಟ್ ತಿಂಗಳಲ್ಲಿ ನಾಲ್ಕು ಹೋರಿ ಕರುಗಳನ್ನು ಈ ಸಂಶೋಧಕರು ಸೃಷ್ಟಿಸಿದ್ದಾರೆ. ಮುಂದೆ ನಾವು ಏನು ನಿರೀಕ್ಷಿಸಬಹುದು ? ವಿಜ್ಞಾನ ರಂಗದಲ್ಲಿ 'ಗೂಳಿ ಕಾಳಗ' ತಾನೆ ?

ಫಿಬ್ರಿಯೋ ಗಂಡಿಲಿಯನ್ನು ಏನು ಮಾಡುತ್ತಾರೆ ? ಸಣ್ಣಿಲಿ, ಅಪ್ಪಿಲಿ, ಅವ್ವಿಲಿ, ಮೂಗಿಲಿ, ಭಾವಿಲಿ, ಮಾವಿಲಿ ಇವುಗಳ ಗುಂಪಿಗೆ ಇದೂ ಬಂದು ಸೇರುತ್ತದೆ. ಈ ಮೂಷಕ ಸಂತತಿಯಿಂದ ಪಾರಾಗಲು ಯಾವ ಕಿಂದರಿಜೋಗಿಯ ಮೊರೆ ಹೋಗಬೇಕೊ ? ○○

# 'ಹಕ್ಕಿ ಈಜುತಿದೆ ನೋಡಿದಿರಾ ?'

ಟಿ. ಆರ್. ಅನಂತರಾಮು

ಇರಾಕಿನ ಅಧ್ಯಕ್ಷ ಸದ್ದಾಂ ಹುಸೇನ್, ಕುವೈತ್ ಮೇಲೆ ಯುದ್ಧ ಸಾರಿ ಅಲ್ಲಿನ ತೈಲ ಬಾವಿಗಳಿಗೆ ಬೆಂಕಿ ಹಾಕಿದ್ದು ಈಗ ಹಳೆಯ ಕತೆ. ಆ ಕತೆ ಅಲ್ಲಿಗೇ ಮುಗಿದು ಹೋಗಿದ್ದರೆ ಭೂಮಿಯ ಒಡಲು ಸ್ವಲ್ಪ ಖಾಲಿಯಾಯಿತು ಎಂಬ ವ್ಯಥೆ ಮಾತ್ರ ಉಳಿಯುತ್ತಿತ್ತು. ಸದ್ದಾಂ, ತೈಲವನ್ನು ಚೆಲ್ಲಿ ಸಾಗರದ ಪಾಲು ಮಾಡಿ ಕುವೈತ್‌ನ ಸಿಹಿನೀರು ಸಂಸ್ಕರಣೆ ಘಟಕಗಳಿಗೆ ಧಕ್ಕೆಯನ್ನು ತಂದದ್ದು ಒಂದು ಮಹಾಪರಾಧವಾದರೆ, ಅದಕ್ಕಿಂತಲೂ ಹೆಚ್ಚು ಅಪರಾಧ ಸಾಗರ ಜೀವಿಗಳ ಸ್ವೈರ ಬದುಕಿಗೆ ಸಂಚಕಾರ ತಂದಿದ್ದು. ಕಡಲ ಹಕ್ಕಿಗಳು ಹಾರಲಾಗದಂತೆ ಅವುಗಳ ರೆಕ್ಕೆ ತೈಲಸಿಕ್ತವಾಗಿ ಎಣ್ಣೆಯ ಬಾಣಲೆಯಲ್ಲಿ ತೇಲಿ ಬಂದಂತೆ ಕಾಣುತ್ತಿದ್ದುವು. ಸಮುದ್ರದ ಮಧ್ಯೆ ಕುಸಿದು, ಕುಸಿದು ಹೆಣವಾಗಿ ಬಿದ್ದು ಆ ದೃಶ್ಯ ಗ್ರೀನ್‌ಪೀಸ್ ಸದಸ್ಯರ ಆಕ್ರೋಶ ಕೆರಳಿಸಿತ್ತು. ಯಾರದೋ ಕೋಪಕ್ಕೆ ಯಾರೋ



ಬಲಿ. ಈ ಹಕ್ಕಿಗಳು ಮಾಡಿದ ಅಪರಾಧವಾದರೂ ಏನು ? ತೈಲದ ಜಿಡ್ಡು ತೊಳೆಯಲು ವರ್ಷಗಟ್ಟಲೆ ಶ್ರಮಿಸಬೇಕಾಯಿತು. ಇಂಥ ಕೃತ್ಯಗಳು ಆಗಾಗ ಘಟಿಸುತ್ತಿರುತ್ತವೆ- ಕೆಲವೊಮ್ಮೆ ಉದ್ದೇಶಪೂರ್ವಕವಾಗಿ, ಕೆಲವೊಮ್ಮೆ ಅನಿರೀಕ್ಷಿತವಾಗಿ. ಪರಿಣಾಮ ಮಾತ್ರ ಒಂದೇ- ಕಡಲ ಜೀವಿಗಳ ಬದುಕಿಗೆ ಕುತ್ತು.

ಸರಿಯಾಗಿ ಈಗ್ಗೆ ಹತ್ತು ವರ್ಷಗಳ ಹಿಂದೆ ಅಲಾಸ್ಕದ ಬಳಿ ಪ್ರಿನ್ಸ್ ವಿಲಿಯಂಸೌಂಡ್ ಎಂಬಲ್ಲಿ ಅಮೆರಿಕದ ತೈಲ ಹಡಗೊಂದು ಹೀಗೆಯೇ ಅಪಘಾತಕ್ಕೀಡಾಗಿ ಒಂದು ಕೋಟಿ ಹತ್ತು ಲಕ್ಷ ಗ್ಯಾಲನ್ ತೈಲ ಹಡಗಿನಿಂದ ಸುರಿದು, ಸಾಗರದಲ್ಲಿ ತೇಲಿತು. ಕೇವಲ ಹತ್ತು ದಿನಗಳಲ್ಲಿ ತೈಲದ ಜಿಡ್ಡು 1,295 ಚ.ಕಿ.ಮೀ. ಸಾಗರವನ್ನು ಆಕ್ರಮಿಸಿತು. ಅದೇ ಕಾಲಕ್ಕೆ ಸುಮಾರು 1,290 ಕಿಲೋಮೀಟರು ಕರಾವಳಿಯುದ್ದಕ್ಕೂ ಜಿಡ್ಡು ಕೆನೆಗಟ್ಟಿ ನಿಂತಿತು. ಕೆಲವೆಡೆ ಅಲೆಯ ರೇಖೆಯ ಮೇಲೆ 90 ಮೀಟರು ಎತ್ತರದವರೆಗೆ ಜಿಡ್ಡಿನ ಕೇಪ ತೀರದುದ್ದಕ್ಕೂ ಮಡುವುಗಟ್ಟಿ ನಿಂತಿತ್ತು. ಸುಮಾರು 40,000 ಕಡಲ ಹಕ್ಕಿಗಳು ತೈಲಸಿಕ್ತವಾಗಿ ರಾಶಿ ರಾಶಿಯಾಗಿ ದಿನವೂ ತೇಲಿ ಬರುತ್ತಿದ್ದವು. ನೀರುನಾಯಿಗಳ ತುಪ್ಪುಳದ ಚರ್ಮಕ್ಕೆ ತೈಲದ ಜಿಡ್ಡು ಅಂಟಿ ಅವುಗಳ ಶಾಖ ನಿರೋಧಕ ಸಾಮರ್ಥ್ಯವನ್ನೇ ಕುಂದಿಸಿ ಅವನ್ನೂ ಹೆಣವಾಗಿಸಿದವು. ಸತ್ತ ಹಕ್ಕಿಗಳ ರುಚಿ ನೋಡಲು ಬಂದ ಧ್ರುವ ಕರಡಿಗಳು ನೆಲ ಕಚ್ಚಿದವು.

ಈಗ ಪಕ್ಷಿಪ್ರಿಯರು ಸಾಕಷ್ಟು ತಲೆ ಕೆಡಿಸಿಕೊಂಡು ಒಂದು ಉಪಾಯ ಹುಡುಕಿದ್ದಾರೆ. ತೈಲದ ಅಭ್ಯಂಜನ ಮಾಡಿದ ಹಕ್ಕಿಗಳ ರೆಕ್ಕೆ ಪುಕ್ಕ ಬಲು ನಾಜೂಕು. ಡಿಟರ್ಜಂಟ್ ಬಳಸಿದರೆ ಪುಕ್ಕಗಳು ನೀರನ್ನು ನಿರೋಧಿಸುವ ಗುಣ ಕಳೆದುಕೊಳ್ಳುತ್ತವೆ. ಅವುಗಳಿಗೆ ಇನ್ನಷ್ಟು ಹಿಂಸೆ. ಸ್ವಲ್ಪವೂ ಹಕ್ಕಿಗಳ ಪುಕ್ಕ ಕೊಂಕದಂತೆ ಅವುಗಳಿಗೆ ಅಂಟಿರುವ ತೈಲವನ್ನು ತೆಗೆಯಲು ಕಬ್ಬಿಣದ ಪುಡಿ, ಅಯಸ್ಕಾಂತ ಬಳಸಿ ಈಗ ಶುಶ್ರೂಷೆ ಮಾಡುವ ವಿಧಾನ ಹುಡುಕಿದ್ದಾರೆ. ಇದು ಆಸ್ಟ್ರೇಲಿಯದ ಪಕ್ಷಿಪ್ರಿಯರ ಇತ್ತೀಚಿನ ಸಂಶೋಧನೆ. ಕಾರ್ಯಾಚರಣೆ ಬಲು ಸುಲಭ. ತೈಲದಿಂದ ತುಂಬಿ ತುಳುಕಾಡುವ ಹಕ್ಕಿಗಳ ರೆಕ್ಕೆ ಪುಕ್ಕಗಳಿಗೆ ಸಣ್ಣ ಕಬ್ಬಿಣದ ಪುಡಿ ಉದುರಿಸುತ್ತಾರೆ. ತೈಲ ಬಹುಬೇಗ ಕಬ್ಬಿಣಕ್ಕೆ ಅಂಟಿಕೊಳ್ಳುತ್ತದೆ. ಒಡನೆಯೇ ಹಕ್ಕಿಗಳ ಮೈಮೇಲೆ ನವಿರಾಗಿ ಅಯಸ್ಕಾಂತ ಆಡಿಸಿದರಾಯಿತು. ನಾಲ್ಕಾರು ಬಾರಿ ಇದನ್ನು ಪುನರಾವರ್ತಿಸಿದರೆ ಹಕ್ಕಿಗಳು ತೈಲದಿಂದ ಮುಕ್ತವಾಗುತ್ತವೆಂದು 'ಮರೀನ್ ಪಲ್ಯೂಷನ್ ಬುಲೆಟಿನ್' ಇತ್ತೀಚೆಗೆ ವರದಿ ಮಾಡಿದೆ. ಇದು ಸುಲಭದ ಕೆಲಸವಷ್ಟೇ ಅಲ್ಲ, ಅಷ್ಟೇ ಶೀಘ್ರವೂ ಹೌದು. ಇಂತಹ 'ಕಿಟ್'ಗಳನ್ನು ತಯಾರುಮಾಡಿ ಸಂಕಟದಲ್ಲಿರುವ ಹಕ್ಕಿಗಳ ಬಳಿ ಓಡಲು ಸಂಶೋಧಕರು ಸಿದ್ಧರಾಗಿದ್ದಾರೆ. ಕವಿ ಬೇಂದ್ರೆ ಎದೆಯುಬ್ಬಿಸಿ, 'ಹಕ್ಕಿ ಹಾರುತಿದೆ ನೋಡಿದಿರಾ ?' ಎಂದರು, ಕಾಲದ ಹಕ್ಕಿಯನ್ನು ಕುರಿತು ಹಾಡಿದರು. ಈಗ ವಿಜ್ಞಾನಿಗಳೂ ನೆಮ್ಮದಿಯ ಉಸಿರಾಡುತ್ತಾ ಕಡಲ ಹಕ್ಕಿಗಳ ಕುರಿತು ಹೇಳುತ್ತಿದ್ದಾರೆ: 'ಹಕ್ಕಿ ಈಜುತಿದೆ ನೋಡಿದಿರಾ ?' ವಾಸ್ತವ ಬದುಕಿಗೆ ಕುರುಡರಾಗಿ ಸಂಶೋಧಕರು ಬರಿ ದಂತಗೋಪುರಗಳಲ್ಲಿ ವಾಸಿಸುತ್ತಾರೆ ಎಂದವರು ಯಾರು ? ○○

# ಹಿಂದುಗಳ ಸೋಲಿನ ಸರಮಾಲೆ

ಹಿಂದುಗಳ ಕಳೆದ ೨೦೦೦ ವರ್ಷಗಳ ಇತಿಹಾಸ ಸೋಲು ಮತ್ತು ದಾಸ್ಯದ ದಾಖಲೆಯಾಗಿದೆ. ಈ ಕಾಲಮಾನದ ಉದ್ದಕ್ಕೂ ಅವರು ಗ್ರೀಕರಿಗೆ, ಹೂಣರಿಗೆ, ಶಕರಿಗೆ, ಅರಬ್ಬರಿಗೆ, ಮೊಘಲರಿಗೆ, ಟರ್ಕರಿಗೆ, ಫ್ರೆಂಚರಿಗೆ ಹಾಗೂ ಬ್ರಿಟಿಷರಿಗೆ ತಮ್ಮ ಮಂಡಿಗಳನ್ನು ಬಾಗಿಸುತ್ತಾ ಬಂದರು. ಎಲ್ಲೋ ಬೆರಳೆಣಿಕೆಯಷ್ಟು ಅಬಿಸೀನಿಯನ್ನರಿಗೆ ಮತ್ತು ಸ್ಲೇವ್‌ಗಳಿಗೆ ಯುದ್ಧ ಭೂಮಿಯಲ್ಲಿ ಬೆನ್ನು ತೋರಿಸುವಷ್ಟು ಮತ್ತು ಅವರ ಬಾಗಿಲು ಮುಂದಿನ ಕಾಲೊರೆಸುವ ಚಾಪೆಗೆ ಮೂಗುಜ್ಜುವಷ್ಟು ದೈನ್ಯಸ್ಥಿತಿಯನ್ನು ತಲುಪಿದ್ದರು.

ಹಿಂದುಗಳು ತಮ್ಮ ಭವ್ಯ ಇತಿಹಾಸ ಮತ್ತು ಪರಾಕ್ರಮಗಳ ಬಗ್ಗೆ ಹೆಮ್ಮೆ ಪಡುತ್ತಾರೆ. ಮಾನವ ಇತಿಹಾಸದಲ್ಲೇ ತಮ್ಮ ಸಂಸ್ಕೃತಿ ಮತ್ತು ನಾಗರಿಕತೆಗಳು ಅತ್ಯಂತ ಶ್ರೇಷ್ಠ ಹಾಗೂ ಸೋಲು ಕಾಣದವು ಎಂದು ಮೇಲಿಂದ ಮೇಲೆ ಹೇಳಿಕೊಳ್ಳುವುದರಲ್ಲಿ ಅವರಿಗೆ ದಣಿವೇ ಆಗುವುದಿಲ್ಲ. ಆದರೆ ವಾಸ್ತವ ಸಂಗತಿ ಏನು ? ಅವರ ಆತ್ಮ ಪ್ರಶಂಸೆ ಸಮರ್ಥನೀಯವೆ?

ಹಿಂದುಗಳು ತಮ್ಮ ಇತಿಹಾಸವನ್ನು ಹೊಸ ವಾಸ್ತವಾಂಶಗಳು ಮತ್ತು ವೈಚಾರಿಕತೆಯ ಬೆಳಕಿನಲ್ಲಿ ನೋಡುವ ಪ್ರಯತ್ನ ಆಗಬೇಕಾಗಿದೆ. ಹಿಂದು ಧರ್ಮ ಮತ್ತು ಅದರ ಪರಂಪರೆ, ಬೇರೆ ಯಾರಿಂದಲೂ ಅಲ್ಲ, ಅದರ ಅನುಯಾಯಿಗಳಿಂದಲೇ ವಿಮರ್ಶಾತ್ಮಕವಾಗಿ ಮರು ಮೌಲ್ಯೀಕರಣಕ್ಕೊಳಪಡಬೇಕಾಗಿದೆ. ಇದರಿಂದ ಹಿಂದುಗಳು ತಾವು ಮಾತ್ರವೇ ಹಿಂದು ಸಮಾಜದಲ್ಲಿ ಸುಧಾರಣೆಯನ್ನು ತರಲು ಸಾಧ್ಯ. ಯಾರೋ ಒಬ್ಬ ನಾಯಕನಿಂದ ಅದು ಸಾಧ್ಯವಿಲ್ಲ ಎಂಬುದನ್ನು ಅರಿಯಬಲ್ಲರು.

ನಮ್ಮ ದೇಶದಲ್ಲಿ ಹಿಂದು ಎಂಬುದು ಬಹುಸಂಖ್ಯಾತ ಜನಸಮುದಾಯದ ಹೆಸರಾಗಿದೆ. ಯಾವುದೇ ಜನಾಂಗದ ಧರ್ಮಕ್ಕೆ ಇತಿಹಾಸದಲ್ಲಿ ಮಹತ್ವದ ಸ್ಥಾನವಿದೆ. ಅದು ಧನಾತ್ಮಕವಾಗಿರಬಹುದು ಅಥವಾ ಋಣಾತ್ಮಕವಾಗಿರಬಹುದು. ಹಿಂದು ಜನಾಂಗಕ್ಕೆ ಅನ್ವಯಿಸಿ ಹೇಳುವುದಾದರೆ ಹಿಂದು ಧರ್ಮದ ಪಾತ್ರವೂ ಅದೇ ಸಂಗತಿಯನ್ನು ಒತ್ತಿ ಹೇಳುತ್ತದೆ. ಭಾರತೀಯ ಶಾಸ್ತ್ರದ ವಿದ್ವಾಂಸರಾದ ಡಾ॥ ಸುರೇಂದ್ರ ಕುಮಾರ್ ಶರ್ಮ ಅವರು The History of Hindus : The Saga of Defeats ಎಂಬ ಒಂದು ಕೃತಿಯನ್ನು ರಚಿಸಿದ್ದಾರೆ. ಅದರಲ್ಲಿ ಅವರು ಕಳೆದ ೨೦೦೦ ವರ್ಷಗಳ ಇತಿಹಾಸವನ್ನು ಮತ್ತು ಸೋಲುಗಳ ಕಾರಣವನ್ನು ವಿಶ್ಲೇಷಣೆ ಮಾಡಲು ಪ್ರಯತ್ನಿಸಿದ್ದಾರೆ. ಯಾವುದೇ ದೇಶದ ವರ್ತಮಾನವು ಭೂತಕಾಲದಿಂದ ಪ್ರಭಾವಿತವಾಗದೆ ಮತ್ತು ಭವಿಷ್ಯ ಕಾಲದ ಮೇಲೆ ಪ್ರಭಾವ ಬೀರದೆ ಇರಲಾರದು ಎಂಬುದನ್ನು ಅವರು ಪ್ರತಿಪಾದಿಸಿದ್ದಾರೆ.

ಬಹುಪಾಲು ಹಿಂದುಗಳು ತಮ್ಮ ಇತಿಹಾಸದ ಬಗ್ಗೆ ತಮಾಷೆಯ ಧೋರಣೆಯನ್ನು ಹೊಂದಿದ್ದಾರೆ. ಅವರು ಯಾವಾಗಲೂ ತಮ್ಮ ಇತಿಹಾಸವನ್ನು ಮೂಲಕ್ಕಿಂತ ಭಿನ್ನವಾದ ಆಕರ್ಷಕ ರೂಪದಲ್ಲಿ ಚಿತ್ರಿಸುತ್ತಾರೆ ; ಭೂತಕಾಲದ ಕಪ್ಪು ಮಸಿಯ ಮೇಲೆ ಬಿಳಿಯ ಪರದೆಯನ್ನು ಎಳೆದು ಅದು ಅಚ್ಚ ಬಿಳುಪಾಗಿದೆ ಎಂದು ಚಿತ್ರಿಸಿ, ಅದನ್ನು ವಿಶ್ವಾಸಾರ್ಹ ಇತಿಹಾಸವೆಂದು ಜನರು ಒಪ್ಪಿಕೊಳ್ಳುತ್ತಾರೆ ಎಂಬ ಆಶೆಯನ್ನು ಹೊಂದಿದ್ದಾರೆ. ಯಾವುದೋ ಕಾರಣದಿಂದ ಅವರಲ್ಲಿನ ಕೀಳರಿಮೆ ಅದರ




ಹಿಂದಿನ ಕಾರಣವಾಗಿದೆ. ಅದರ ಬಗ್ಗೆ ಮಾತನಾಡಿದರೆ ಅವರ 'ಅಹಂ'ಗೆ ನೋವಾಗುತ್ತದೆ.

ಒಂದು ರೀತಿಯಲ್ಲಿ ನಮ್ಮ ಇತಿಹಾಸ ಸೋಲುಗಳ ಮತ್ತು ಪರಾಧೀನತೆಯ ಒಂದು ಸುದೀರ್ಘ ಕತೆ. ಕ್ಷಾಮ ಡಾಮರಗಳಿಂದ ತಮ್ಮ ದೇಶಗಳಲ್ಲಿ ಸಾಯುವ ಸ್ಥಿತಿಯಲ್ಲಿದ್ದ ಜನ ಈ ದೇಶಕ್ಕೆ ಬಂದು ದೊಡ್ಡ ಸಾಮ್ರಾಜ್ಯಗಳನ್ನು ಸ್ಥಾಪಿಸುವಲ್ಲಿ ಯಶಸ್ವಿಯಾದರು. ೧೭-೧೮ ವರ್ಷದ ಒಬ್ಬ ಹುಡುಗ ಕೆಲವೇ ಕುದುರೆ ಸವಾರರ ಜೊತೆಗೆ ದಂಡೆತ್ತಿ ಬಂದು ಬಂಗಾಳವನ್ನು ಆಕ್ರಮಿಸಿದ. ಆಗ ನಾವು ಭೀಮನು ಆನೆಗಳನ್ನು ಆಕಾಶಕ್ಕೆ ಎತ್ತಿ ಎಸೆಯುವುದನ್ನು, ಬಾಂಬುಗಳ ಸ್ಫೋಟವನ್ನು ಮೀರಿಸುವ ಅರ್ಜುನನ ಬಾಣಗಳ ಶಕ್ತಿಯನ್ನು ಮತ್ತು ಸಮುದ್ರವನ್ನು ಹಾರಿದ ಹನುಮಂತನ ಕಥೆಗಳನ್ನು ಹೇಳುತ್ತಿದ್ದೆವು. ನಾವು ಅಗ್ಗದ ಎತ್ತಿನ ಗಾಡಿಗಳಲ್ಲಿ ಸಂಚರಿಸುತ್ತಾ ಪುಷ್ಪಕ ವಿಮಾನಗಳ ಕಥೆಗಳನ್ನು ಹೇಳುತ್ತಿದ್ದೆವು. ಸೀಳು ವ್ಯಕ್ತಿತ್ವ (schizophrenia) ಎಂದು ಕರೆಯಲು ಈ ವರ್ತನೆ ಅತ್ಯುತ್ತಮವಾದುದಾಗಿದೆಯಲ್ಲವೆ?

ಈಗ ಯಾರಾದರೂ ಈ ರೀತಿ ಮಾತನಾಡಿದರೆ ಅದು ನಮ್ಮ ಅಭಿಮಾನವನ್ನು ಕೆರಳಿಸುತ್ತದೆ, ನಮ್ಮ ಪ್ರತಿಷ್ಠೆಗೆ ಕಳಂಕವನ್ನು ಲೇಪಿಸುತ್ತದೆ. ''ನೀವು ಕಶ್ಮಲವನ್ನು ಎತ್ತಿ ತೋರಿಸಬಾರದು, ಅದು ಕಾಣದಂತೆ ಮುಚ್ಚಿಬಿಡಬೇಕು. ನೀವು ಕಶ್ಮಲವನ್ನು ನೋಡಿದಾಗಲೆಲ್ಲಾ ಅದನ್ನು ಜಮಖಾನೆಯ ಕೆಳಗೆ ಮರೆಮಾಡಬೇಕು'', ಎಂದು ತಿಳಿದವರು ಸಲಹೆ ಮಾಡುತ್ತಾರೆ!

ಈ ಜಾಣ ಸಲಹೆಯನ್ನು ಅವರು ತಾವೇ ತಮ್ಮ ಮನೆಯೊಳಗೇ ಪಾಲಿಸುವುದಿಲ್ಲ. ಅವರು ತಮ್ಮ ಮನೆಯಲ್ಲಿ ಕಶ್ಮಲ ಸೇರಲು ಬಿಡುವುದಿಲ್ಲ. ಅದನ್ನು ತಮ್ಮ ಹಾಸಿಗೆಯ ಕೆಳಗೆ ಮುಚ್ಚಿಡುವುದಿಲ್ಲ. ಆದ್ದರಿಂದ ಅವರ ಸಲಹೆಯನ್ನು ಬೇರೆಯವರೇಕೆ ಪಾಲಿಸಬೇಕು ಮತ್ತು ನಮ್ಮ ದೇಶದ ಇತಿಹಾಸದಲ್ಲಿನ ಕಶ್ಮಲವನ್ನು ಏಕೆ ಮುಚ್ಚಿಟ್ಟುಕೊಳ್ಳಬೇಕು ?

ವಾಸ್ತವವಾಗಿ ಇತಿಹಾಸದ ಬಗ್ಗೆ ಅವರ ಜ್ಞಾನ ದೋಷಪೂರ್ಣವಾಗಿದೆ. ಭವ್ಯ ಇತಿಹಾಸ ಮಾತ್ರ ಗೌರವಕ್ಕೆ ಪಾತ್ರ, ಅಷ್ಟು ಭವ್ಯವಲ್ಲದ್ದು ಜನರ ಇತಿಹಾಸದಲ್ಲಿ ಉಲ್ಲೇಖಿಸಲು ಅನರ್ಹ ಎಂಬುದು ಲೇಖಕರ ಅಭಿಪ್ರಾಯವಾಗಿದೆ.

ಇತಿಹಾಸದ ಬಗ್ಗೆ ಸರಿಯಾದ ತಿಳುವಳಿಕೆ ಎಷ್ಟೋ ಜನರಿಗಿದ್ದಿದ್ದರೆ ಪ್ರಶ್ನಾರ್ಹ ಅಭಿಪ್ರಾಯವನ್ನು ಅವರು ವ್ಯಕ್ತಪಡಿಸುತ್ತಿರಲಿಲ್ಲ. ಇತಿಹಾಸವು ಭವ್ಯವಾಗಿರಬಹುದು ಅಥವಾ ಇಲ್ಲದಿರಬಹುದು. ನಾವು ಅದರಿಂದ ಪಾಠ ಕಲಿಯಬೇಕು. ನಾವು ಭೂತಕಾಲದಲ್ಲಿ ಮಾಡಿದ ತಪ್ಪುಗಳನ್ನೇ ವರ್ತಮಾನದಲ್ಲಿ ಪುನರಾವರ್ತನೆಯಾಗುವುದನ್ನು ತಪ್ಪಿಸಬೇಕು. ಭೂತಕಾಲ ಹೇಗಿತ್ತು ಎಂಬುದು ಮುಖ್ಯವಲ್ಲ. ನಾವು ಅದರಿಂದ ಕಲಿಯುವ ಪಾಠಗಳು ಮುಖ್ಯ. ಯಾರು ಇತಿಹಾಸದಿಂದ ಪಾಠ ಕಲಿಯಲು ನಿರಾಕರಿಸುವರೋ ಅವರ ಇತಿಹಾಸ ಪುನರಾವರ್ತನೆಗೊಳ್ಳುತ್ತದೆ. ಮತ್ತೆ ನಾವು ಹಿಂದಿನ ಸ್ಥಿತಿಯಲ್ಲೇ ಉಳಿಯುತ್ತೇವೆ.

ಇತಿಹಾಸವನ್ನು ಅದು ಹೇಗಿತ್ತೋ ಹಾಗೆ ದಾಖಲಿಸದೆ ಅದು ಹೇಗಿರಬೇಕೆಂದು ನಾವು ಬಯಸುವೆವೋ ಹಾಗೆ ಚಿತ್ರಿಸಿದರೆ, ಆಗ ನಾವು ಅದರಿಂದ ಯಾವ ಪಾಠವನ್ನೂ ಕಲಿಯುವುದಿಲ್ಲ ಮತ್ತು ಹಿಂದಿನ ತಪ್ಪುಗಳನ್ನೇ ಪುನಃ ಮಾಡಬೇಕಾಗುತ್ತದೆ. ಆದ್ದರಿಂದ ಚರಿತ್ರೆಯಿಂದ ನಾವು ಪ್ರಭಾವಿತರಾಗದೆ ವಂಚಿತರಾಗುತ್ತೇವೆ.

ಅದರ ಬದಲು ಚರಿತ್ರೆಯು ಕೆಟ್ಟ ಚರಿತ್ರೆಯಾಗಿದ್ದರೆ ಅದರಿಂದ ಕೆಡಕೇನಿಲ್ಲ. ನಾವು ವಿಶ್ಲೇಷಣೆ ಮಾಡಿ ಅದರ ದೋಷಗಳೇನು ಮತ್ತು ಅವು ಯಾಕೆ ಸಂಭವಿಸಿದುವು ಎಂದು ತಿಳಿದುಕೊಳ್ಳಬಹುದು. ಈ ಜ್ಞಾನವನ್ನು ಸಂಪಾದಿಸಿದ ಮೇಲೆ ನಾವು ಪುನರಾವರ್ತನೆಯನ್ನು ತಪ್ಪಿಸಿ

ಪ್ರೊ॥ ಬಿ. ವಿ. ವೀರಭದ್ರಪ್ಪ

ವರ್ತಮಾನವನ್ನು ಸುವರ್ಣಯುಗವನ್ನಾಗಿ ಮಾಡುವತ್ತ ಹೆಜ್ಜೆ ಹಾಕಬಹುದು. ಆದ್ದರಿಂದ ಇತಿಹಾಸ ಭವ್ಯವಾಗಿತ್ತೇ ಅಥವಾ ಇಲ್ಲವೆ ಎಂಬುದು ಮುಖ್ಯವಲ್ಲ. ನಾವು ವರ್ತಮಾನವನ್ನು ಹೇಗೆ ರೂಪಿಸುತ್ತಿದ್ದೇವೆ ಎಂಬುದು ಮಹತ್ವವಾದುದು.

ಇತಿಹಾಸವನ್ನು ಅದು ಹೇಗಿದೆಯೋ ಹಾಗೆ ದಾಖಲಿಸುವ ಇತಿಹಾಸಕಾರರಿದ್ದಾರೆ. ಆದರೆ ಅದನ್ನು ವಿಶ್ಲೇಷಣೆ ಮಾಡಿ ಅದು ಏಕೆ ಹಾಗಾಯಿತು ಎಂದು ವಿವರಿಸುವಾಗ ಅವರು ಒಂದು ರೀತಿಯ ಗೊಂದಲಕ್ಕೊಳಗಾಗುತ್ತಾರೆ. ಅವರು ತಮ್ಮ ಮತೀಯಾಭಿಮಾನದಿಂದ ಬೀಗಿದವರಾಗಿ ಇನ್ನೊಬ್ಬರ ಮೇಲೆ ದೋಷಾರೋಪಣೆ ಮಾಡುತ್ತಾರೆ.

ಹಿಂದು ಧರ್ಮದಲ್ಲಿರುವ ದೋಷಗಳು ಸೋಲುಗಳಿಗೆ ಕಾರಣಗಳಾದರೂ ಅವರು ಬೌದ್ಧಧರ್ಮ ಮತ್ತು ಅದರ ಅಹಿಂಸೆಯ ಮೇಲೆ ದೋಷವನ್ನು ಆರೋಪಿಸುತ್ತಾರೆ. ಒಂದುಕಡೆ ಅವರು ಎಂಟನೆ ಶತಮಾನದಲ್ಲಿ ಶಂಕರಾಚಾರ್ಯರು ಬೌದ್ಧ ಧರ್ಮವನ್ನು ಸಂಪೂರ್ಣವಾಗಿ ನಾಶಪಡಿಸಿ ಬೌದ್ಧ ಧರ್ಮೀಯನೊಬ್ಬನೂ ಇಲ್ಲದಂತೆ ಮಾಡಿದರು ಎಂದೂ, ವೈದಿಕ ಹಿಂದು ಧರ್ಮವನ್ನು ಪುನರ್ ಪ್ರತಿಷ್ಠಾಪನೆ ಮಾಡಿದರು ಎಂದೂ ಹೇಳುತ್ತಾರೆ. ಮತ್ತೊಂದು ಕಡೆ ಈ ಜನರು ಮುಸ್ಲಿಮರ ದಾಳಿಗಳ ವಿರುದ್ಧ ತಾವು ಅನುಭವಿಸಿದ ಸೋಲುಗಳಿಗೆ ಬೌದ್ಧರೇ ಕಾರಣರೆಂದು ಅವರನ್ನು ಆಪಾದಿಸುತ್ತಾರೆ. ಚರಿತ್ರಕಾರನು ಹೇಗೆ ಎರಡನ್ನೂ ಪ್ರತಿಪಾದಿಸಲು ಸಾಧ್ಯ ? ಇವುಗಳಲ್ಲಿ ಯಾವುದು ಸರಿ ? ಈ ಅಸೂಯಾಪರ ತೀರ್ಮಾನಗಳು ಅನೇಕ ಸಾರಿ ವೈರುಧ್ಯಗಳಿಂದ ಕೂಡಿದ್ದು ಆತ್ಮವಿನಾಶಕವಾಗಿವೆ.

> 'ಹೊಸತು' ಪತ್ರಿಕೆಯಲ್ಲಿ ಪ್ರಕಟಣೆಗೆ ಲೇಖನಗಳನ್ನು ಕಳಿಸಬೇಕೆಂದು ಎಲ್ಲರಲ್ಲೂ ವಿನಂತಿಸಿಕೊಳ್ಳುತ್ತೇವೆ. ಪ್ರಕಟಣೆಗೆ ಸ್ವೀಕೃತವಾಗದ ಸಾಮಗ್ರಿಯನ್ನು ಹಿಂದಕ್ಕೆ ಪಡೆಯಬೇಕೆಂದಿದ್ದರೆ ಸ್ವಯಂವಿಳಾಸ ಬರೆದಿರುವ ಅಂಚೆಚೀಟಿ ಲಗತ್ತಿಸಿರುವ ಲಕೋಟೆಯನ್ನು ಲೇಖನದೊಂದಿಗೆ ಕಳಿಸಿಕೊಡಿ.
>
> -ಸಂ.

ಶಿವಾಜಿ ಮತ್ತು ರಾಣಾ ಪ್ರತಾಪರಂತಹವರನ್ನು ಕುರಿತು ಅನೇಕರು ಪ್ರಸ್ತಾಪ ಮಾಡುತ್ತಾರೆ, ನಮ್ಮ ಇತಿಹಾಸ ಭವ್ಯವಾದುದು ಎಂದು ಹೇಳುತ್ತಾರೆ. ಆದರೆ ಒಂದು ಸಾವಿರ ವರ್ಷದ ಇತಿಹಾಸ ಒಬ್ಬರು ಅಥವಾ ಇಬ್ಬರು ವ್ಯಕ್ತಿಗಳಿಂದ ಭವ್ಯವಾಗುತ್ತದೆಯೇ ? ಒಂದು ಪಕ್ಷ ನಮ್ಮ ಇತಿಹಾಸವು ಭವ್ಯವಾದುದ್ದಾದರೆ ಶಿವಾಜಿ ಮತ್ತು ರಾಣಾ ಪ್ರತಾಪರಿದ್ದರೂ ಬೆರಳೆಣಿಕೆಯಷ್ಟು ದಾಳಿಕೋರರು ನಮ್ಮನ್ನು ಸಾವಿರಾರು ವರ್ಷಗಳು ಏಕೆ ಮತ್ತು ಹೇಗೆ ಆಳಿದರು? ರಾಣಾ ಪ್ರತಾಪನು ತನ್ನ ಜೀವಮಾನವೆಲ್ಲಾ ಅಕ್ಬರನ ಅಧೀನದಲ್ಲಿದ್ದ ಹಿಂದುಗಳೊಡನೆ ಹೋರಾಟ ಮಾಡುವುದರಲ್ಲೇ ಕಳೆಯಬೇಕಾಯಿತು ಎಂಬುದು ವಾಸ್ತವವಲ್ಲವೆ ? ಶಿವಾಜಿಯು ದೊಡ್ಡ ದೊಡ್ಡ ವಿಜಯಗಳನ್ನು ಸಾಧಿಸಿದರೂ ವೇದ ಮಂತ್ರೋಚ್ಚಾರಣೆ ಮೂಲಕ ಅವನ ಪಟ್ಟಾಭಿಷೇಕ ನೆರವೇರಲಿಲ್ಲ. ಅವನು ಶೂದ್ರನಾದ್ದರಿಂದ ಅವನಿಗೆ ಪಟ್ಟಾಭಿಷೇಕ ಮಾಡಲು ಪುರೋಹಿತರು ನಿರಾಕರಿಸಿದರು.

ಹಿಂದುಗಳು ಯಾವುದೇ ಹೊಸತನ್ನು ಕಲಿಯಲು ಉತ್ಸಾಹ ತಾಳಿದವರಲ್ಲ. ಅದು ಅವರ ಇತಿಹಾಸದ ಮೇಲೆ ಪ್ರಭಾವ ಬೀರಿತು. ಬಾಬರನು ಬಂದೂಕದಿಂದ ಗುಂಡು ಹಾರಿಸುವುದನ್ನು ಕಲಿತನಾದರೂ ನಮ್ಮ ಸೈನಿಕರು ಮದ್ದುಗುಂಡುಗಳ ಬಳಕೆಯ ಬಗ್ಗೆ ಆಸಕ್ತಿ ತಾಳಲಿಲ್ಲ ಮತ್ತು ತಮ್ಮ ಹಳೆಯ ತಂತ್ರಗಳನ್ನೇ ಪುನರುಚ್ಚರಿಸತೊಡಗಿದರು.

ಈ ರೀತಿಯಾಗಿ ಜಾತಿ ಮತಗಳು, ಅಸ್ಪೃಶ್ಯತೆ ಇತ್ಯಾದಿಗಳು ಇಂದು ನಾವು ನೋಡುತ್ತಿರುವ ರೀತಿಯಲ್ಲಿ ನಮ್ಮ ಇತಿಹಾಸವನ್ನು ರೂಪಿಸುವಲ್ಲಿ ನೆರವಾದವು. ಹಿಂದುಗಳು ತಮ್ಮ ಇತಿಹಾಸವನ್ನು ವಿಮರ್ಶಾತ್ಮಕವಾಗಿ ಪರೀಕ್ಷಿಸಲು ನೆರವಾಗುವಂತೆ ಡಾ॥ ಸುರೇಂದ್ರ ಕುಮಾರ ಶರ್ಮ ಹತ್ತಾರು ಚರ್ಚೆಗಳಿಗೆ ಸಾಮಗ್ರಿ ಒದಗಿಸಿದ್ದಾರೆ.

○○

# ನೆನಪಿನಂಗಳದಲ್ಲಿ ಟಿಪ್ಪು

ಜಗತ್ತನ್ನೇ ತಲ್ಲಣಗೊಳಿಸಿದ ಸರ್ವಶಕ್ತ ವಸಾಹತುಶಾಹಿಗೆ ಸೆಡ್ಡು ಹೊಡೆದು ತನ್ನ ರಾಜ್ಯದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಅಗ್ರಮಾನ್ಯ ಸುಲ್ತಾನ ಮೈಸೂರಿನ ಟಿಪ್ಪು. ಬ್ರಿಟಿಷ್ ಬಾಲಬಡುಕರಾಗಿದ್ದ ಹಲವಾರು 'ರಾಜ, ಮಹಾರಾಜರು'ಗಳನ್ನು ಎಲ್ಲರೂ ಹಾಡಿ ಹೊಗಳುತ್ತಿದ್ದರೆ, ಟಿಪ್ಪು ಹುತಾತ್ಮನಾದ ದ್ವಿಶತಮಾನೋತ್ಸವವನ್ನು ಆಚರಿಸಬೇಕೆಂದಾಗ ಅದನ್ನು ವಿರೋಧಿಸಿ ಹುಯಿಲೆಬ್ಬಿಸಿದ್ದು ಇತಿಹಾಸದ ಇತ್ತೀಚಿನ ವ್ಯಂಗ್ಯ. ಬ್ರಿಟಿಷರ ಗುಲಾಮನಾಗಿ ರಾಜ್ಯವನ್ನು ತನ್ನ ಮನೆತನಕ್ಕೆ ಉಳಿಸಿಕೊಳ್ಳುವುದಕ್ಕಿಂತ, ಅವರೊಂದಿಗೆ ಹೋರಾಡಿ ವೀರ ಮರಣವನ್ನಪ್ಪುವುದೇ ಲೇಸೆಂದು ಯುದ್ಧಭೂಮಿಯಲ್ಲಿ ಮಡಿದ ಯೋಧ ಟಿಪ್ಪು. ಎಲ್ಲ ವಸಾಹತುವಾದಿ ಚರಿತ್ರಕಾರರು ಟಿಪ್ಪುವನ್ನು 'ಕ್ರೂರಿ' 'ಮತಾಂಧ'ನೆಂದು ಚಿತ್ರಿಸಿದ್ದಾರೆ. ಅವರೆಲ್ಲಾ ಬ್ರಿಟಿಷ್ ವಸಾಹತುಶಾಹಿಯ ಭಾಗವಾಗಿದ್ದು ನೇರವಾಗಿ ಟಿಪ್ಪುವಿನ ವಿರುದ್ಧ ಹೋರಾಡಿದವರು. ತಾವು ಮೈಸೂರನ್ನು ಕಬಳಿಸಿದ್ದನ್ನು ಸಮರ್ಥಿಸಿ ಕೊಳ್ಳಬೇಕಾದರೆ ಅವರು ಟಿಪ್ಪುವನ್ನು ಕೆಟ್ಟವನನ್ನಾಗಿ ಚಿತ್ರಿಸಲೇಬೇಕಾಗಿತ್ತು. 'ಟಿಪ್ಪುವಿನ ಚಾರಿತ್ರ್ಯ ವಧೆ ಮಾಡಲು ಇಂಗ್ಲಿಷಿನಲ್ಲಿದ್ದ ಎಲ್ಲ ಕೊಳಕು, ಅಸಹ್ಯ ಪದಗಳನ್ನು ಬಳಸಿ ಮುಗಿಸಿ ಯಾಗಿದೆ. ಆದರೆ ಇಂಗ್ಲಿಷಿನಂಥ ಶ್ರೀಮಂತ ಭಾಷೆ ಕೂಡಾ ಈ ಪ್ರಭೃತಿಗಳಿಗೆ ಆತನನ್ನು ತೆಗಳಲು ಸಾಕಾಗುತ್ತಿಲ್ಲ' ವೆಂದು ಇಂಗ್ಲಿಷ್ ಚರಿತ್ರಕಾರ ಎಡ್ವರ್ಡ್ ಮೂರ್ ಹೇಳುತ್ತಾನೆ. ಅಂಥ ದ್ವೇಷ ಮತ್ತು ವಕ್ರದೃಷ್ಟಿ ಈ ಇತಿಹಾಸಕಾರರದು.

ಆದರೆ ಭಾರತೀಯ ಇತಿಹಾಸಕಾರರಿಗೇನಾಗಿದೆ? ಬಹುತೇಕ ಎಲ್ಲ ರಾಷ್ಟ್ರೀಯವಾದಿ ಚರಿತ್ರಕಾರರು ಟಿಪ್ಪುವನ್ನು ತೆಗಳುವಲ್ಲಿ, ವಸಾಹತು ಶಾಹಿಗಳ ಜೊತೆ ಪೈಪೋಟಿ ನಡೆಸಿದಂತಿದೆ. ಕೆಲವರಂತೂ ಪಾಶ್ಚಾತ್ಯರನ್ನು ಮೀರಿಸಿದ್ದಾರೆ. ರಾಷ್ಟ್ರೀಯವಾದಿ ಚರಿತ್ರಕಾರರು ಹಸಿ ಕೋಮುವಾದಿ ನಿಲುವು ತಳೆಯುತ್ತಾರೆ. ಟಿಪ್ಪು ಮತ್ತು ಮತಾಂಧತೆಯ ಬಗ್ಗೆ ಸ್ವಲ್ಪ ವಿವರಿಸುವ ಅವಶ್ಯಕತೆಯಿದೆ. ರಾಷ್ಟ್ರೀಯತೆ, ಪ್ರಜಾಪ್ರಭುತ್ವ ಮತ್ತು ಸಮಾಜ ವಾದಗಳಂತೆ, ಮತಾಂಧತೆ ಪೂರ್ಣವಾಗಿ ಆಧುನಿಕ ವಾದ ಪರಿಕಲ್ಪನೆ. ಅಷ್ಟೇ ಅಲ್ಲ ಅದೊಂದು ದರಿದ್ರ ಕೊಳಕು ಸಿದ್ಧಾಂತ. ಮತಾಂಧತೆ ಒಂದು ಸಿದ್ಧಾಂತವಾಗಿ, ಪರಿಕಲ್ಪನೆಯಾಗಿ ಟಿಪ್ಪುವಿನ ಕಾಲದಲ್ಲಿ ಇರಲೇ ಇಲ್ಲ. ಟಿಪ್ಪು, ತನ್ನ ಆಳ್ವಿಕೆಯನ್ನು ವಿರೋಧಿಸಿದ ಕೇರಳದ ನಾಯರರನ್ನು, ಕೆನರಾದ ಕ್ರಿಶ್ಚಿಯನರನ್ನು ಶಿಕ್ಷಿಸಿದ್ದು ನಿಜ. ಅದು ಮತಾಂತರದ ಶಿಕ್ಷೆಯೂ ಹೌದು. ಆದರೆ ಅವರು ನಾಯರ್‌ಗಳೆಂದು, ಕ್ರಿಶ್ಚಿಯನ್ನರೆಂದು ಶಿಕ್ಷಿಸಿದ್ದಲ್ಲ. ಯಾಕೆಂದರೆ ಅದೇ ಟಿಪ್ಪು, ಹಲವಾರು ದೇವಸ್ಥಾನ, ಚರ್ಚುಗಳನ್ನು ಕಟ್ಟಿಸಿಕೊಟ್ಟ. ನೂರಾರು ಗುಡಿ, ಚರ್ಚುಗಳಿಗೆ, ಮಸೀದಿಗಳಿಗೆ ಕೊಟ್ಟಂತೆಯೇ, ಕಾಣಿಕೆಗಳನ್ನು ಕೊಟ್ಟಿದ್ದಕ್ಕೆ ಸಾವಿರಾರು ಪುರಾವೆಗಳಿವೆ. ಮೈಸೂರಿನ ಕ್ರೈಸ್ತ ಧರ್ಮೀಯರು ತಮ್ಮ ಆಚರಣೆಗಳನ್ನು ಕಡೆಗಣಿಸುತ್ತಿದ್ದಾರೆ. ಅವರನ್ನು ತಿದ್ದಲು ಪಾದ್ರಿಗಳನ್ನು ಕಳಿಸಿಕೊಡುವಂತೆ ಗೋವಾದ ಆಕ್ಕಿ ಬಿಷಪ್ಪರಿಗೆ ಟಿಪ್ಪು ಪತ್ರಗಳ ಮೂಲಕ ಮನವಿ ಮಾಡಿಕೊಂಡದ್ದಕ್ಕೆ ಪುರಾವೆಗಳಿವೆ. ಶೃಂಗೇರಿ, ಮೇಲುಕೋಟೆ ಮಠಗಳಿಗೆ ಆತ ಕೊಟ್ಟ ದಾನಗಳಂತೂ ಇತಿಹಾಸ ಪ್ರಸಿದ್ಧವಾಗಿವೆ.

> *ಇನ್ನೂರು ವರ್ಷಗಳ ಹಿಂದೆ ಬ್ರಿಟಿಷ್ ವಸಾಹತುಶಾಹಿಗೆ ಸವಾಲನ್ನೆಸೆದು ಭೌಗೋಳಿಕ ರಾಜಕೀಯದಲ್ಲಿ ಉತ್ತಮ ಪರಿಣತಿಯನ್ನು ಸಾಬೀತು ಮಾಡಿದ ಟಿಪ್ಪೂ ನಮ್ಮ ಹೋರಾಟದ ಪರಂಪರೆಯಲ್ಲಿ ಅಗ್ರಮಾನ್ಯನೆನಿಸಿಕೊಳ್ಳುತ್ತಾನೆ. ಅವನ ಇಂಗಿತವನ್ನು ಅಪಾರ್ಥಕ್ಕೆ ಗುರಿಮಾಡುವ ಮತೀಯ ಹುನ್ನಾರ ಕೀಳುಮಟ್ಟದ ಕಿತಾಪತಿ ಆಗುತ್ತದೆ, ಅಷ್ಟೇ.*

**ಡಾ॥ ಎಸ್. ಚಂದ್ರಶೇಖರ್**

ವಸ್ತುಸ್ಥಿತಿ ಹೀಗಿರುವಾಗ ಟಿಪ್ಪುವನ್ನು ಮತಾಂಧನೆಂದು ತೆಗಳುವುದು ರೋಗಗ್ರಸ್ಥ ಮನಸ್ಸುಗಳು ಮಾತ್ರ.

ಜಗತ್ತು ಆಧುನಿಕತೆಯ ಹೊಸ್ತಿಲಲ್ಲಿ ನಿಂತಿದ್ದಾಗ ಟಿಪ್ಪು ಸುಲ್ತಾನನಾಗಿದ್ದ. ವಿಶ್ವದೆಲ್ಲೆಡೆ ಕ್ಷಿಪ್ರ ಗಂಭೀರ ಬದಲಾವಣೆಗಳಾಗುತ್ತಿದ್ದವು. ಅಂಥ ಸಂದರ್ಭದಲ್ಲಿ ಇಡೀ ಭಾರತ ಮತ್ತು ವಿಶೇಷವಾಗಿ ಮೈಸೂರು ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ತಮ್ಮವೇ ಆದ ಗುರಿಗಳನ್ನು ಹೊಂದಿ ದಾರಿಯನ್ನು ಅನ್ವೇಷಿಸ ಬೇಕಾಗಿತ್ತು. ಅದೇ ಸಮಯಕ್ಕೆ ಬ್ರಿಟಿಷ್ ವಸಾಹತು ವಾದ ಹೆಬ್ಬಾವಿನಂತೆ ಭಾರತವನ್ನು ತುಂಡುತುಂಡಾಗಿ ನುಂಗುತ್ತಿತ್ತು. ಈ ಅಪಾಯವನ್ನು ಮನಗಂಡ ಟಿಪ್ಪು ಎಚ್ಚರಿಕೆಯ ಗಂಟೆ ಬಾರಿಸಿದ. ಆದರೆ ಸ್ವಾರ್ಥ, ಸಣ್ಣತನಗಳಲ್ಲೇ ಮುಳುಗಿದ್ದ ಮರಾಠರು, ನಿಜಾಮ ಮತ್ತು ಮೊಘಲರು ಎಚ್ಚರಗೊಳ್ಳಲು ನಿರಾಕರಿಸಿದರು. ವಿದೇಶೀ ಶತ್ರುಗಳಿಗಿಂತ ನೆರೆಯವರನ್ನೇ ದ್ವೇಷಿಸಿದ ಅವರ ಸರ್ವನಾಶಕ್ಕೆ ವಿದೇಶಿಗಳೊಂದಿಗೆ ಕೈಗೂಡಿಸಿದ ಈ ಜನ ಗೋಡೆಯ ಮೇಲಿನ ಬರಹವನ್ನು ನೋಡಲು ನಿರಾಕರಿಸಿದರು. ಬ್ರಿಟಿಷರ ಒಡೆದು ಆಳುವ ನೀತಿ, ಶೋಷಣೆ, ದಗಾ, ವಂಚನೆ, ವಚನ ಭ್ರಷ್ಟತೆಗಳ ಬಗ್ಗೆ ಟಿಪ್ಪು ಪರಿಪರಿಯಾಗಿ ವಿವರಿಸಿ, ಸ್ನೇಹ ಹಸ್ತ ಚಾಚಿದರೂ, ನಿಜಾಮ ಮತ್ತು ಮರಾಠರು ಅದನ್ನು ತಿರಸ್ಕರಿಸಿ, ವಸಾಹತುಶಾಹಿ ಹೆಬ್ಬಾವಿನ ಬಾಯಿಗೆ ತಮ್ಮನ್ನೇ ಒಡ್ಡಿಕೊಂಡದ್ದು ಭಾರತೀಯರ ದುರ್ದೈವ.

ಒಂದು ಕಡೆ ನೆರೆಯ ಅರಸರೊಂದಿಗೆ ಮತ್ತು ಮುಖ್ಯವಾಗಿ ಬ್ರಿಟಿಷ್ ವಸಾಹತುವಾದಿಗಳೊಂದಿಗೆ ಸೆಣೆಸುತ್ತಲೇ ಟಿಪ್ಪು ತನ್ನ ರಾಜ್ಯದ ಮತ್ತು ಜನತೆಯ ಹಿತಕ್ಕಾಗಿ ದುಡಿದ ಅರಸ. ಆತನ ಕೃಷಿ ಮತ್ತು ಕೈಗಾರಿಕಾ ಕ್ಷೇತ್ರದಲ್ಲಿನ ಪ್ರಯೋಗಗಳು ರಾಜ್ಯದ ಸಂಪತ್ತನ್ನು ಹೆಚ್ಚಿಸಿ ಜನಜೀವನವನ್ನು ಹಸನಾಗಿಸುವ ಉದ್ದೇಶವುಳ್ಳವಾಗಿದ್ದವು. ದೇಶೀ ಸಂಪನ್ಮೂಲಗಳು ಹೊರಹೋಗದಂತೆ ಇಲ್ಲೇ ಉಪಯೋಗಿಸಿಕೊಳ್ಳುವ ಪ್ರಯತ್ನ ಅದು. ಹಾಗೆ ನೋಡಿದರೆ ಟಿಪ್ಪುವಿನ ಮೈಸೂರು ಆಧುನಿಕತೆಯ ಹೊಸ್ತಿಲಲ್ಲಿದ್ದ ಭಾರತದ ಪ್ರಯೋಗಶಾಲೆ ಎನಿಸುತ್ತದೆ. ಸರ್ಕಾರಿ ಸ್ವಾಮ್ಯ, ಸರ್ಕಾರಿ ಬಂಡವಾಳವಾದವೆನ್ನುವ ಪರಿಕಲ್ಪನೆಗಳು ಸಾಕಾರಗೊಂಡದ್ದೇ ಮೈಸೂರಿ ನಲ್ಲಿ. ಅದು ಸಹಜವಾಗಿ ಆಗುತ್ತಿದ್ದ ಆಧುನಿಕ ಪ್ರಕ್ರಿಯೆ. ಆದರೆ ಅದಕ್ಕೆ ಮರಣಾಂತಿಕ ಪೆಟ್ಟು ಕೊಟ್ಟದ್ದು ವಸಾಹತುವಾದಿ ಧಾಳಿ. ಭಾರತೀಯ ಅರ್ಥವ್ಯವಸ್ಥೆ ಕುರೂಪಗೊಂಡದ್ದು ಈ ಕಾರಣ ದಿಂದಾಗಿ. ಟಿಪ್ಪೂಗೆ ಆ ಬಗ್ಗೆ ಸ್ಪಷ್ಟ ಅರಿವಿತ್ತೋ, ಇಲ್ಲವೋ ನಿಖರವಾಗಿ ಹೇಳುವುದು ಕಷ್ಟ. ಆದರೆ ಭಾರತೀಯ ಮಾದರಿಯ ಪ್ರಭುತ್ವ ಬಂಡವಾಳದ ಬೆಳವಣಿಗೆಯ ಕುರುಹುಗಳಂತೂ ಆತನ ಪ್ರಯೋಗಗಳಲ್ಲಿ ಕಾಣುತ್ತವೆ. ಶ್ರೀಗಂಧ, ಅಡಿಕೆ, ರೇಷ್ಮೆ, ಮೆಣಸು, ಏಲಕ್ಕಿ ಮುಂತಾದ ಪದಾರ್ಥಗಳು ಸರ್ಕಾರದ ಪೂರ್ಣಸ್ವಾಮ್ಯಕ್ಕೆ ಒಳಪಟ್ಟವು. ಇದಕ್ಕೆ ರಾಜಕೀಯ ಕಾರಣವೂ ಇತ್ತು. ಏಕೆಂದರೆ ಬ್ರಿಟಿಷ್ ವಸಾಹತುವಾದಿಗಳು ಮೂಲತಃ ವ್ಯಾಪಾರಿಗಳು. ಈ ವಸ್ತುಗಳ ವ್ಯಾಪಾರದಲ್ಲಿ ಅವರಿಗೆ ಹೇರಳ ಲಾಭವಿತ್ತು. ಅದನ್ನು ತಪ್ಪಿಸಿ, ವ್ಯಾಪಾರದ ಲಾಭ ಪೂರ್ಣವಾಗಿ ತನ್ನ ರಾಜ್ಯಕ್ಕೇ ದಕ್ಕಬೇಕೆಂಬ ಉದ್ದೇಶ ಟಿಪ್ಪುವಿನದಾಗಿತ್ತು. ವಿದೇಶೀ ಮಾರುಕಟ್ಟೆಗಳಲ್ಲಿ ಮೈಸೂರಿನ ವಸ್ತುಗಳಿಗೆ ಬೇಡಿಕೆ ಹೆಚ್ಚಿಸಲು ಪ್ರಯತ್ನಗಳನ್ನು ಮಾಡಿ ಹಲವಾರು ದೇಶಗಳಲ್ಲಿ ಫ್ಯಾಕ್ಟರಿಗಳನ್ನು, ಮಳಿಗೆಗಳನ್ನು ತೆರೆಯ ಲಾಯಿತು. ವ್ಯಾಪಾರಿ ನಿಯೋಗಗಳು ಕೊಲ್ಲಿ ರಾಷ್ಟ್ರಗಳಿಗೆ ಹೋದವು. ಆದರೆ ಈ ಪ್ರಯೋಗ ಯಶಸ್ವಿಯಾಗಲು ಬ್ರಿಟಿಷ್ ವಸಾಹತುಶಾಹಿ ಅಡ್ಡಿಯಾಯಿತು.

> ನಾವು ನಿಸರ್ಗದ ಕೊಡುಗೆಗಳಿಗಾಗಿ ಕಾಯುತ್ತ ಕೂಡಬಾರದು ನಾವವನ್ನು ಅದರಿಂದ ಆಗ್ರಹಿಸಿ ಪಡೆಯಬೇಕು.
>
> — ಇವಾನ್ ಮಿಚುರಿನ್

ಪುಂಡು ಪಾಳೆಯಗಾರರಿಂದ ಜನರಿಗೆ ಸ್ವಲ್ಪವಾದರೂ ಬಿಡುಗಡೆ ಸಿಕ್ಕಿದ್ದು ಹೈದರ್-ಟಿಪ್ಪೂಗಳ ಕಾಲದಲ್ಲಿ. ಇತರ ರಾಜ್ಯಗಳ ತೆರಿಗೆಗಳಿಗೆ ಹೋಲಿಸಿದರೆ ಟಿಪ್ಪುವಿನ ತೆರಿಗೆಗಳು ಕಡಿಮೆಯಿದ್ದವು. ಹಾಗೆಂದು ಮೈಸೂರು ಸುಖೀರಾಜ್ಯವಾಗಿತ್ತೆಂದೇನೂ ಅಲ್ಲ.

ಟಿಪ್ಪುವನ್ನು ದೇವಮಾನವನೆಂದು ಪರಿಗಣಿಸಿರುವ ಚರಿತ್ರೆಗಳೂ ಇವೆ. ಆತ ಮಾಡಿದ್ದೆಲ್ಲಾ ಅದ್ಭುತ, ಕ್ರಾಂತಿಕಾರಿ, ಜನತಂತ್ರವಾದಿ ಮತ್ತು ಜಾತ್ಯಾತೀತ ಎಂದೆಲ್ಲಾ ಹೇಳಿರುವುದುಂಟು. ಟಿಪ್ಪುವನ್ನು ಮತಾಂಧನೆಂದು ಹೇಳುವುದು ಎಷ್ಟು ವಿಕೃತವೋ, ಆತ ಜನತಾಂತ್ರಿಕ ಸಮಾಜವಾದಿ, ಕ್ರಾಂತಿಕಾರಿ ಮತ್ತು ಜಾತ್ಯಾತೀತನೆಂದು ಹೇಳುವುದು ಒಂದು ರೀತಿ ವಿಕೃತವೇ. ಎರಡು ಮಾದರಿಗಳೂ ಆತನನ್ನು ಅನಗತ್ಯ ವಿವಾದಕ್ಕೆ ಒಳಪಡಿಸುತ್ತವೆ. ಯಾವುದೇ ಚಾರಿತ್ರಿಕ ಪುರುಷ ಎಲ್ಲ ಒಳ್ಳೆಯ ಅಥವಾ ಕೆಟ್ಟ ಮೌಲ್ಯಗಳ ಮೊತ್ತವಾಗಿರುವುದಿಲ್ಲ. ಆಯಾ ಚಾರಿತ್ರಿಕ ಸಂದರ್ಭಗಳಲ್ಲಿಟ್ಟು ಅವರನ್ನು ವಿಶ್ಲೇಷಿಸುವುದು ಸರಿಯಾದ ಮಾರ್ಗ. ಟಿಪ್ಪು ಆತನ ಸಮಕಾಲೀನ ಭಾರತೀಯ ಆಳರಸರಂತೆ ವಂಶಪಾರಂಪರ್ಯ ಆಳ್ವಿಕೆಗೆ ಬದ್ಧನಾಗಿದ್ದ. ತನ್ನ ವಿರೋಧಿಗಳನ್ನು ದಂಡಿಸಿ ಶಿಕ್ಷೆಗೆ ಒಳಪಡಿಸುತ್ತಿದ್ದ. ಜಾಣನೂ, ಧರ್ಮಿಷ್ಠ ಮುಸ್ಲಿಮನೂ ಆಗಿ ಇತರ ಧರ್ಮೀಯರೊಂದಿಗೆ ಸಾಮರಸ್ಯದಿಂದಿರಲು ಹೆಣಗಿದ. ಕೃಷಿ, ಕೈಗಾರಿಕೆಗಳು ಅಭಿವೃದ್ಧಿಯಾದರೆ ಜನರಿಗೂ ತನ್ನ ಬೊಕ್ಕಸಕ್ಕೂ ಒಳಿತೆಂದು ಮನಗಂಡು ಕ್ರಮ ಕೈಗೊಂಡ. ಹಾಗೆಯೇ ಒಂದು ಹಂತದಲ್ಲಿ ಪರಿಸ್ಥಿತಿ ಪ್ರತಿಕೂಲವಾಗಿದ್ದಾಗ, ಬ್ರಿಟಿಷರಿಗೆ ಕಪ್ಪ ಕೊಟ್ಟು ಅವರನ್ನು ತೊಲಗಿಸಿದ. ಅಂದರೆ ಪರಿಸ್ಥಿತಿಗೆ ತಕ್ಕಂತೆ ತನ್ನ ಮತ್ತು ರಾಜ್ಯದ ಒಳಿತಿಗೆ ಏನು ಅಗತ್ಯವೆಂದು ತಿಳಿದನೋ ಅದನ್ನೆಲ್ಲ ಮಾಡಿದ.

> ಅಲ್ಪ ಅರಿವಿಗೆ ಅಂಜಬೇಕಿಲ್ಲ. ತಪ್ಪು ಅರಿವೇ ಅತಿ ಅಪಾಯಕಾರಿ. ಅದೇ ಜಗತ್ತಿನ ಎಲ್ಲ ಕೇಡುಗಳ ಆಕರ.
>
> **ಲಿಯೊ ತೋಲ್‌ಸ್ತೋಯ್**

ಟಿಪ್ಪುವನ್ನು ನೆನೆಯಬೇಕಾಗಿರುವುದು ಆತನ ಸ್ವಾತಂತ್ರ್ಯ ಪ್ರೇಮಕ್ಕಾಗಿ, ತನ್ನ ನಾಡಿನ ಬಗೆಗೆ ಆತನಿಗಿದ್ದ ಪ್ರೀತಿಗಾಗಿ, ರಾಜ್ಯವನ್ನು, ಜನತೆಯನ್ನು ಆಧುನಿಕತೆಯತ್ತ ಕೊಂಡೊಯ್ಯಲು ಮಾಡಿದ ಪ್ರಯತ್ನಕ್ಕಾಗಿ, ವಸಾಹತುಶಕ್ತಿಗೆ ಶರಣಾಗದೆ ಎದೆಸೆಟೆಸಿ ನಿಂತು ಹೋರಾಡುತ್ತಾ ತನ್ನ ಜೀವವನ್ನೇ ಬಲಿಕೊಟ್ಟದ್ದಕ್ಕಾಗಿ.

ಡಾ॥ ಎಸ್. ಚಂದ್ರಶೇಖರ್
ಇತಿಹಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ

# ಪ್ರಸೂತಿ ವೈದ್ಯದಲ್ಲಿ ಹೊಸತೇನಿದೆ ?

*ಸ್ತ್ರೀಕೇಂದ್ರಿತ ಸಂಶೋಧನೆಗಳು ಕುಟುಂಬ ಯೋಜನೆಯ ಮೂಲ ಸಾಮಗ್ರಿಯಾಗಿರುವುದು ಅನೇಕ ರೀತಿಯ ದುರುಪಯೋಗ ಮತ್ತು ಕೆಟ್ಟ ಪ್ರವೃತ್ತಿಗಳಿಗೆ ಕಾರಣವಾಗಿದೆ. ಇನ್ನು ಮುಂದೆ ಈ ಸನ್ನಿವೇಶ ಬದಲಾಗಬಹುದೇ ?*

ಒಂದು ಸತ್ಯವಂತೂ ಥಾಳಾಗಿ ನಮ್ಮ ಮುಖಕ್ಕೆ ರಾಚುತ್ತದೆ. ಮುಂದುವರೆದ ರಾಷ್ಟ್ರಗಳು ಬೇರೆ ಬೇರೆ ಸಂಶೋಧನೆಗಳಿಗೆ ಎಷ್ಟು ಹಣ, ಸಮಯ, ಜ್ಞಾನಗಳನ್ನು ವೆಚ್ಚ ಮಾಡುತ್ತಿವೆಯೋ ಅದೇ ಪ್ರಮಾಣದಲ್ಲಿ ಸ್ತ್ರೀಯರ ಕುರಿತ ಸಮಸ್ಯೆಗಳ ಕಡೆಗೆ ಗಮನ ನೀಡುತ್ತಿಲ್ಲ. ಇದು ಶೋಚನೀಯ. ಅಲ್ಲಲ್ಲಿ ಜರುಗುತ್ತಿರುವ ಸ್ತ್ರೀ ಸಂಬಂಧ ಸಂಶೋಧನೆಗಳೂ ಆವಿಷ್ಕಾರಗಳೂ ಕೆಲವೊಮ್ಮೆ ಹೆಣ್ಣಿಗೆ ಅಪಾಯಕಾರಿಯಾಗಿ ಪರಣಮಿಸುತ್ತಿರುವುದನ್ನೂ ಕಾಣುತ್ತೇವೆ.

ಹೆಣ್ಣು ಎಷ್ಟೇ ದಾಪುಗಾಲಿಟ್ಟು 21ನೇ ಶತಮಾನದೆಡೆಗೆ ಧಾವಿಸುತ್ತಿದ್ದರೂ, ಗಂಡುಮಗುವೇ ಬೇಕೆಂದು ಬಯಸುವ ದಂಪತಿಗಳ ಸಂಖ್ಯೆಯೇನೂ ತಗ್ಗಿಲ್ಲ ! ಇಂಥವರ ಸಹಾಯಕ್ಕೆ ವಿಜ್ಞಾನವೂ ಮುಂದೆ ಬಂದು, ಅವರಿಗೆ ಗಂಡುಮಗು ನೀಡುವ ನಿಟ್ಟಿನಲ್ಲಿ ತನ್ನ ಸಹಾಯಕ ಹಸ್ತ ಚಾಚಲು ಪ್ರಾರಂಭಿಸಿದೆ. ಅಂಡಾಣು, ವೀರ್ಯಾಣುಗಳ ಮಿಲನಕ್ಕೆ ಮೊದಲೇ ಅಂಡವನ್ನು 'Y' ವೀರ್ಯಾಣು ಪ್ರವೇಶಿಸುವ ಹಾಗೆ ಮಾಡುವ ನಾನಾ ಕ್ರಮಗಳನ್ನು ವಿಜ್ಞಾನಿಗಳು ಕೈಗೆತ್ತಿಕೊಂಡಿದ್ದಾರೆ. ಗಂಡುಮಗುವೇ ಹುಟ್ಟಬೇಕೆಂಬ ನಿಟ್ಟಿನಲ್ಲಿ ಸಂಶೋಧಕರು ವೀರ್ಯದಲ್ಲಿನ 'Y' ವೀರ್ಯಾಣುವೇ ಮುಂದೆ ಧಾವಿಸುವಂತೆ ಮಾಡುತ್ತಿದ್ದಾರೆ ಮತ್ತು ಇನ್ನೂ ಕೆಲವು ಪ್ರಯೋಗ ಶಾಲೆಗಳಲ್ಲಿ 'Y' ವೀರ್ಯಾಣುವನ್ನು ಹೆಕ್ಕಿ ತೆಗೆದು ಅದನ್ನು ಅಂಡಾಣುವಿನೊಳಗೆ ತುರುಕುವ ಪ್ರಯತ್ನಗಳನ್ನೂ ಮಾಡುತ್ತಿದ್ದಾರೆ.

ಈ ಅಸ್ವಾಭಾವಿಕ ಪ್ರಯತ್ನಗಳ ಪರಿಣಾಮ ? ಪ್ರಕೃತಿ ಇಟ್ಟಿರುವ ಹೆಣ್ಣು-ಗಂಡುಗಳ ಸಮಪ್ರಮಾಣವು ಏರುಪೇರಾಗುವುದರಲ್ಲಿ ಅನುಮಾನವಿಲ್ಲ. ಲೈಂಗಿಕ ಸಮತೋಲವನ್ನು ಕೆಡಿಸುವುದು ಸಾಮಾಜಿಕವಾಗಿ ಒಳ್ಳೆಯದಲ್ಲ.

ಗರ್ಭದಲ್ಲಿ ಬೆಳೆಯುತ್ತಿರುವ ಮಗು ಗಂಡೋ ಹೆಣ್ಣೋ ಎಂದು ತಿಳಿಯಬೇಕೆನ್ನುವ ಕೆಟ್ಟ ಕುತೂಹಲ ನಮ್ಮಲ್ಲಿ ಇನ್ನೂ ಇಂಗಿಲ್ಲ. ಸ್ಕ್ಯಾನಿಂಗ್‌ನಲ್ಲಿ ಈ ಆಸೆಯನ್ನು ಕೆಲವೊಮ್ಮೆ ತಣಿಸಬಹುದಾದರೂ, ಅದರಲ್ಲಿ ತಪ್ಪಾಗುವ ಸಂಭವಗಳೂ ಉಂಟು. (ಹೇಮಮಾಲಿನಿಯೂ ಈ ದಿಕ್ಕಿನಲ್ಲಿ ಸೋತಳಲ್ಲಾ !) ಗರ್ಭಸ್ಥ ಮಗುವಿನ ಚರ್ಮದಿಂದ ಉದುರುವ ಕಣಗಳು ಗರ್ಭಜಲವನ್ನು ಸೇರುತ್ತವೆ- ಇವುಗಳ ಸೂಕ್ಷ್ಮ ಪರೀಕ್ಷೆಗಳಿಂದ ಮಗುವಿನ ಲಿಂಗವನ್ನು ತಿಳಿದುಕೊಂಡು, ಅದೇನಾದರೂ ಹೆಣ್ಣಾಗಿದ್ದಲ್ಲಿ ಅದನ್ನು ತೆಗೆಸುವ ಸಿದ್ಧತೆಗಳನ್ನು ದಂಪತಿಗಳು ಪ್ರಾರಂಭಿಸುತ್ತಾರೆ. ಈ ಅನಪೇಕ್ಷಿತ ಉದ್ದೇಶವನ್ನಿಟ್ಟುಕೊಂಡು, ಜರಾಯು ಲೋಮಗಳ ಪರೀಕ್ಷೆಯನ್ನೂ ಇತ್ತೀಚೆಗೆ ಮಾಡಲು ಆರಂಭಿಸಿದ್ದಾರೆ. (ಕೋರಿಯಾನಿಕ್ ವಿಲ್ಲೈ ಸ್ಯಾಂಪ್ಲಿಂಗ್) ಹೀಗಾಗಿ ವೈದ್ಯಕೀಯ ಗರ್ಭಪಾತದ ಕೆಲವು ಹೊಸ ವಿಧಾನಗಳು ಮೂಡಿಬಂದಿವೆ.

ಗರ್ಭಜಲದಲ್ಲಿ ಸ್ವಲ್ಪ ತೆಗೆದು, ನಂತರ ಗರ್ಭಕೋಶದ ಸ್ನಾಯುಗಳನ್ನು ಪ್ರಚೋದಿಸುವ ಕೆಲವು ಚುಚ್ಚು ಮದ್ದುಗಳನ್ನು ಹಿಂದೆ ಕೊಡುತ್ತಿದ್ದೆವು. ಗರ್ಭಕೋಶದ ಕಂಠಭಾಗವನ್ನು ಅಗಲಿಸಲು ಲ್ಯಾಮನೇರಿಯಾ ಕಡ್ಡಿಗಳನ್ನು ತುರುಕುತ್ತಿದ್ದೆವು. ಆದರೆ, ಇವೆಲ್ಲಾ ಈಗ ಹಳತಾಗಿವೆ. ಈ ಕಾರ್ಯಕ್ಷೇತ್ರದಲ್ಲಿ "ಪ್ರಾಸ್ಟಾಗ್ಲಾಂಡಿನ್"ಗಳ ಬಳಕೆ, ವೈದ್ಯರಿಗೆ ಸಾಕಷ್ಟು ಸಹಾಯಕವಾಗುತ್ತಿದೆ. ಈ ಅದ್ಭುತ ಔಷಧಿಗಳನ್ನು ಜೆಲ್‌ರೂಪದಲ್ಲಿ ಯೋನಿ, ಗರ್ಭಕಂಠಗಳಿಗೆ ಸೇರಿಸಿದಾಗ ಅಥವಾ ನಳಿಕೆಯ ಮೂಲಕ ಗರ್ಭಜಲದ ಹೊರಗೆ ಪ್ರಾಸ್ಟಾಗ್ಲಾಂಡಿನ್‌ಗಳನ್ನು ಸಾಗಿಸಿದಾಗ, ಅವು ತಡವಿಲ್ಲದೆ, ಗರ್ಭಕೋಶದ ಸ್ನಾಯುಗಳನ್ನು ಸಂಕೋಚನಗೊಳಿಸುತ್ತವೆ. ಗರ್ಭಕಂಠವನ್ನು ಮಿದುಗೊಳಿಸಿ ಅದು ಬೇಗ ಹಿಗ್ಗಲಿಸುವಂತೆಯೂ ಮಾಡುತ್ತವೆ. ಇದೇ ಔಷಧಿಯನ್ನು ಸೂಕ್ತ ದ್ರಾವಣದಲ್ಲಿ ಬೆರಸಿ, ಗರ್ಭಿಣಿಯ ಧಮನಿಯಲ್ಲಿ ಹರಿಯಗೊಟ್ಟಾಗಲೂ ಪರಿಣಾಮಕಾರಿಯಾಗುತ್ತದೆ. ಆದರೆ ಅದರ ಅಡ್ಡ ಪರಿಣಾಮಗಳನ್ನು ನಾವು ಎದುರಿಸಬೇಕಾಗುತ್ತದೆ.

ಯಾವ ಗರ್ಭನಿರೋಧಕವನ್ನೂ ಬಳಸದೆ ಸಂಭೋಗ ಮಾಡಿದಾಗ, ಗರ್ಭ ನಿಂತಿರಬಹುದೇನೋ ಎಂಬ ಭಯ ಕಾಡುವ ಸಾಧ್ಯತೆ ಇರುತ್ತದೆ. ಆಗ 72 ತಾಸುಗಳೊಳಗೆ ಈಸ್ಟ್ರೊಜನ್, ಪ್ರೊಜೆಸ್ಟರೋನ್ ರಸದೂತಗಳನ್ನು ಸೂಕ್ತ



*ಚಿತ್ರ 1, ಉದರ ದರ್ಶಕದ ಸಹಾಯದಿಂದ ಅಂಟಿಕೆಗಳನ್ನು ಕತ್ತರಿಸುತ್ತಿರುವುದು*

ಪ್ರಮಾಣದಲ್ಲಿ ಸೇರಿಸಿರುವ ಎರಡು ಮಾತ್ರೆಗಳನ್ನು ಹೆಣ್ಣು ನುಂಗಿ, ಮತ್ತೆ ಹನ್ನೆರಡು ತಾಸುಗಳ ನಂತರ ಇನ್ನೆರಡು ಮಾತ್ರೆಗಳನ್ನು ತೆಗೆದುಕೊಂಡಾಗ ಅವಳು ಮುಂದೆ ಮುಟ್ಟಾಗುತ್ತಾಳೆ. ಇದು ನಮ್ಮ ದೇಶದಲ್ಲಿ ಇತ್ತೀಚೆಗೆ "The moving after pills" ಎಂದು ಜನಪ್ರಿಯವಾಗುತ್ತಿದೆ. ಚೀನಾದಲ್ಲಿ "ಅನಾರ್ಡಿನ್" ಎಂಬ ರಸದೂತರಹಿತ ಮಾತ್ರೆಗಳನ್ನು ಇದೇ ಉದ್ದೇಶದಿಂದ ಬಳಸಲು ತೊಡಗಿದ್ದಾರೆ. ಇವುಗಳನ್ನು ಅಲ್ಲಿ "ರಜಾಕಾಲದ ಮಾತ್ರೆ"ಗಳೆಂದು ಕರೆಯುತ್ತಾರಂತೆ !

"RU-486" ಇತ್ತೀಚೆಗೆ ಈ ನಿಟ್ಟಿನಲ್ಲಿ ಉಪಯೋಗಕ್ಕೆ ಬರುತ್ತಿರುವ ಔಷಧಿ. ಬೇಡದ ಗರ್ಭ ತಳೆದಿರುವ ಹೆಣ್ಣು ಪ್ರಾರಂಭದಲ್ಲಿಯೇ ಇದನ್ನು ಸೇವಿಸಿ ಅದರೊಟ್ಟಿಗೆ ಪ್ರಾಸ್ಟಾಗ್ಲಾಂಡಿನ್‌ಗಳನ್ನು ಸೇವಿಸಿದಾಗ ಖಚಿತವಾಗಿ ಗರ್ಭ ತಡೆದಂತಾಗುತ್ತದೆ.

ಗರ್ಭಿಣಿಯ ಹಾಗೂ ಅವಳು ಹೊತ್ತಿರುವ ಚಿಗುರು ಗರ್ಭದ ಆರೋಗ್ಯವನ್ನು ಕೆಡಿಸುವ ಒಂದು ಭಯಾನಕ ಕಾಯಿಲೆಯೆಂದರೆ "ಬಸಿರು ನಂಜು" ಹಾಗೂ "ಎಳೆಬಸಿರ

ಡಾ॥ ಲೀಲಾವತಿ ದೇವದಾಸ್

ನಂಜುಗಳು." ಇವುಗಳು ತಲೆದೋರಿದ ನಂತರ ವಾಸಿಮಾಡುವುದು ಕಷ್ಟಕರವಾದ್ದರಿಂದ, ಇವುಗಳು ಬಾರದಂತೆ ತಡೆಗಟ್ಟಲು ಗರ್ಭಿಣಿಗೆ ಕ್ರಮವಾಗಿ "ಆಸ್ಪಿರಿನ್" ಕೊಡುವ ಅಭ್ಯಾಸ ಬಂದಿದೆ.

ಗರ್ಭಜಲವನ್ನು ಬರೀ ಮಗುವಿನ ಲಿಂಗಪರೀಕ್ಷೆಗಾಗಿ ಮಾಡಬೇಕಾಗಿಲ್ಲ. ಅದು ಕಾನೂನಿಗೆ ವಿರುದ್ಧವಾದದ್ದು; ಆದರೆ ಗರ್ಭಸ್ಥ ಮಗುವಿನ ಸ್ವಾಸ್ಥ್ಯವನ್ನು ತಿಳಿದುಕೊಳ್ಳುವುದು, ಅದರಲ್ಲಿ ಯಾವುದೇ ಆಜನ್ಮ ವಿಕಲತೆಗಳಿವೆಯೇ ಎಂದು ಖಚಿತಪಡಿಸಿಕೊಳ್ಳಲು ಈ ಪರೀಕ್ಷೆಯನ್ನು ಕೈಗೆತ್ತಿಕೊಳ್ಳುವುದು ತಪ್ಪೇನಲ್ಲ. ಮಗುವಿನ ಬೆನ್ನುಹುರಿ ತೆರೆದುಕೊಂಡಿದ್ದರೆ, ಗರ್ಭಜಲದಲ್ಲಿನ "ಆಲ್ಫಾ ಫೀಟೋ ಪ್ರೋಟೀನ್" ಪ್ರಮಾಣ ಹೆಚ್ಚಾಗಿರುತ್ತದೆ.

ಗರ್ಭಸ್ಥ ಮಗುವಿನಲ್ಲಿ ವರ್ಣತಂತುಗಳ ಸಂಖ್ಯೆ ಹಾಗೂ ವೈಕಲ್ಯಗಳು ಇದ್ದರೆ ಆ ಮಗುವಿಗೆ "ಡೌನ್ಸ್‌ಸಿಂಡ್ರೋಮ್" ತೊಂದರೆ ಇದ್ದು ಅದು ಮುಂದೆ ಬುದ್ಧಿಮಾಂದ್ಯತೆಯನ್ನು ತೋರ್ಪಡಿಸುತ್ತದೆ. "ಮಂಗೋಲಿಸಮ್" ಎಂದು ಸಹ ಕರೆಸಿಕೊಳ್ಳುವ ಈ ವಿಕಲತೆ ದಾರುಣಮಯವಾಗಿರುತ್ತದೆ. ಆಜನ್ಮ ವಿಕಲತೆಗಳು ಇದ್ದ ಮಾತ್ರಕ್ಕೆ ಆ ಗರ್ಭವನ್ನು ತೆಗೆಸಿಹಾಕಬೇಕೆಂದೇನೂ ಇಲ್ಲ. ಮಗು ಗರ್ಭದಲ್ಲಿದ್ದಾಗಲೇ ಅದಕ್ಕೆ ಸೂಕ್ತ ಶಸ್ತ್ರಚಿಕಿತ್ಸೆ ಮಾಡಿ ಅದರ ಕೊರತೆಗಳನ್ನು ಸರಿಪಡಿಸುವ ಸಂಶೋಧನೆಗಳು ದಾಪುಗಾಲಿಟ್ಟು ಮುಂದುವರೆಯುತ್ತಿವೆ. ಯಾವುದೇ ಕಾರಣದಿಂದ ಗರ್ಭದಲ್ಲಿರುವ ಆ ಮಗುವಿಗೆ ರಕ್ತಹೀನತೆ ಇದ್ದಲ್ಲಿ ಅದಕ್ಕೆ ರಕ್ತಪೂರಣೆಯನ್ನೂ ಮಾಡುತ್ತಿದ್ದಾರೆ.

ಇನ್ನು ಬಂಜೆತನದ ನಿವಾರಣೆಗೆ ಬರುತ್ತಿರುವ ನವನವೀನ ಹೆಜ್ಜೆಗಳಾದರೂ ಯಾವುವು ? ಹೆಣ್ಣಿಗೆ ವಿವಿಧ ರಸದೂತಗಳನ್ನು ಕೃತಕವಾಗಿ ನೀಡಿ, ಅಂಡಾಣು ಬಿಡುಗಡೆ



**ಚಿತ್ರ 2, ಅಂಡಾಣುವಿನೊಳಗೆ ವೀರ್ಯಾಣುಗಳನ್ನು ಕೃತಕವಾಗಿ ಹೊಗಿಸುವುದು**

ಮಾಡಿಸಿ ಅದನ್ನು ಉದರದರ್ಶಕದಿಂದ ತೆಗೆದು ಸೂಕ್ತ ಹೊರ ಪರಿಸರದಲ್ಲಿ ಸಂಸ್ಕರಿಸಿದ ವೀರ್ಯವನ್ನು ಅದಕ್ಕೆ ಬೆರೆಸುತ್ತಾರೆ. ಇದರ ಪರಿಣಾಮವಾಗಿ ಜೀವ ತಳೆಯುವ ಜೀವಕಣವನ್ನು ಅಂಡನಾಳದಲ್ಲೋ ಗರ್ಭಕೋಶದಲ್ಲೋ ನಾಟಿಸಿ, ಅದರ ಬೆಳವಣಿಗೆ ಅಲ್ಲೇ ಮುಂದುವರೆಯುವಂತೆ ಮಾಡುತ್ತಾರೆ. ಆದರೆ ಈ ವಿಧಾನಕ್ಕಿಂತಲೂ ಹೊಸದಾಗಿ ''ಮೈಕ್ರೋಮ್ಯಾನಿಪ್ಯುಲೇಷನ್'' ಎಂಬ ತಂತ್ರ ಬಂದಿದೆ.

ಪುರುಷನ ವೀರ್ಯದಲ್ಲಿ ವೀರ್ಯಾಣುಗಳ ಸಂಖ್ಯೆ ತೀರಾ ಕಡಿಮೆ ಇದ್ದಾಗ, ಅದರಲ್ಲೇ ಕೆಲವನ್ನು ಆರಿಸಿ, ಒಂದನ್ನು ಮೈಕ್ರೋಪಿಪೆಟ್ಟಿನ ಹಾಗೂ ಮೈಕ್ರೋ ಸೂಜಿಯ ಮೂಲಕ ಅಂಡಾಣುವಿಗೆ ಚುಚ್ಚಿ ಒಳಗೆ ಸೇರಿಸುವುದಕ್ಕೆ ''ಇಂಟ್ರಾಸೈಟೊಪ್ಲಾಸ್ಮಿಕ್ ಸ್ಪರ್ಮ್ ಇಂಜೆಕ್ಷನ್'' ಎನ್ನುತ್ತಾರೆ. ಈ ವಿಧಾನ ಬಹಳ ದುಬಾರಿ. ವಿಫಲತೆಗಳು ಇಲ್ಲಿಯೂ ಸಾಕಷ್ಟಿವೆ; ಅಂತೆಯೇ ಅಪರೂಪಕ್ಕೆ ಯಶಸ್ಸೂ ಸಿಗಬಹುದು. ಇದರಲ್ಲಿರುವ ಒಂದು ತೊಡಕೆಂದರೆ ವೀರ್ಯಾಣುವನ್ನು ಹೆಕ್ಕಿ ತೆಗೆಯುವಾಗ ''Y'' ವರ್ಣತಂತು ಇರುವ ವೀರ್ಯಾಣುವನ್ನೇ ಆರಿಸಿದರೆ ಪ್ರಕೃತಿಯ ಲೈಂಗಿಕ ಸಮತೋಲನ ಏರುಪೇರಾಗುವ ಸಾಧ್ಯತೆ ಏಳುತ್ತದೆ. ಬಾಡಿಗೆ ತಾಯಿಯರನ್ನು ಬಳಸಿಯೂ ಮಕ್ಕಳಾಗುತ್ತಿವೆ. ಆದರೆ ಇತ್ತೀಚೆಗೆ ದಂಪತಿಗಳು ತಮ್ಮದೇ ಮಕ್ಕಳಾಗಬೇಕೆಂಬ ಆಸೆಯನ್ನು ಬಿಟ್ಟು ದತ್ತು ಸ್ವೀಕಾರಕ್ಕೆ ಮನವೊಲಿದಿರುವುದು ಒಂದು ಶುಭಸೂಚನೆ.

ಮುಂದಿನ ಸಹಸ್ರಮಾನದ ಆರಂಭದಲ್ಲಿಯೇ ಜಗತ್ತಿನ ಜನಸಂಖ್ಯೆ ಆರು ಶತಕೋಟಿಯನ್ನು ಮೀರಲಿದೆ. ಈ ತೀವ್ರ ಏರಿಕೆಯನ್ನು ನಿಗ್ರಹಿಸಲು ಅಗತ್ಯವಾದ ಆದರ್ಶ ಕುಟುಂಬ ಯೋಜನಾ ವಿಧಾನವನ್ನು ಕಂಡುಹಿಡಿಯಲು ನಮ್ಮ ವಿಜ್ಞಾನಿಗಳು ವಿಫಲರಾಗಿದ್ದಾರೆ. ಈವರೆಗಿನ ವಿಧಾನಗಳು, ಬಹುಮಟ್ಟಿಗೆ ಹೆಣ್ಣಿಗೇ ಸೀಮಿತವಾಗಿದ್ದು, ಗಂಡಿನ ಹೊಣೆಗಾರಿಕೆ ಹೆಚ್ಚಾಗಿ ಕಾಣಿಸಿಕೊಳ್ಳುವುದಿಲ್ಲ. ಈಗಿರುವ ಅನೇಕ ಆವಿಷ್ಕಾರಗಳು ಸಾಮಾನ್ಯವಾಗಿ ರಸದೂತಗಳ ಬಳಕೆಯ ಮೇಲೆಯೇ ಆತುಕೊಂಡಿವೆ.

ಪ್ರಸ್ತುತ ರೂಢಿಯಲ್ಲಿರುವ ನುಂಗುವ ಮಾತ್ರೆಗಳಲ್ಲಿ ಅಂಡಾಣು ವಿಮೋಚನೆ ಸ್ಥಗಿತವಾಗುತ್ತದೆ. ಇದರಲ್ಲಿ ಈಸ್ಟ್ರೋಜನ್ ಅಂಶ ಅಪಾಯಕಾರಿಯೇನೋ ಎಂಬ ಅನುಮಾನವೂ ಹೊಗೆಯಾಡುತ್ತಿದೆ. ಅದರಲ್ಲೇನೂ ಅಷ್ಟು ಹುರುಳಿಲ್ಲದಿದ್ದರೂ, ಇದೇ ರಸದೂತಗಳನ್ನು ಅತ್ಯಲ್ಪ ಪ್ರಮಾಣದಲ್ಲಿ ಅಡಕ ಮಾಡಿಕೊಂಡು, ಅಂಡಾಣು ಬಿಡುಗಡೆಯ ವ್ಯವಸ್ಥೆಯನ್ನು ಕೆಡಿಸದೆ ಇರುವ ''ಮಿನಿಮಾತ್ರೆ''ಗಳು ಮಾರುಕಟ್ಟೆಗೆ ಬರುತ್ತಿವೆ ! ಇವು ಗರ್ಭಕೋಶದ ಕಂಠ ಭಾಗವನ್ನು ಬಿರಡೆಯಂತೆ ಮುಚ್ಚಿಕೊಂಡಿರುವ ಲೋಳೆಯ ಸ್ವರೂಪವನ್ನು ಬದಲಾಯಿಸಿ, ವೀರ್ಯಾಣುಗಳು ಅದನ್ನು ದಾಟಲಾಗದೆ ಹೋಗುವಂತೆ ಮಾಡುತ್ತವೆ. ಇದನ್ನು, ಮಗುವಿಗೆ ಮೊಲೆ ಹಾಲೂಡಿಸುತ್ತಿರುವ ತಾಯಿಯರು ಉಪಯೋಗಿಸಿದಾಗ ಹಾಲಿನ ಪ್ರಮಾಣ ಕಡಿಮೆಯಾಗುವುದಿಲ್ಲವೆನ್ನುವುದೂ ಒಂದು ಪ್ಲಸ್ ಪಾಯಿಂಟ್.

ಇವೇ ರಸದೂತಗಳನ್ನು ಯೋನಿ ಉಂಗುರಗಳಲ್ಲಿ ಸೇರಿಸಿದ್ದಾರೆ. ಗರ್ಭಕೋಶದಲ್ಲಿ ಅಳವಡಿಸುವ ಸಾಧನೆಗಳಲ್ಲೂ ರಸದೂತಗಳನ್ನು ಅಡಕ ಮಾಡಿದ್ದಾರೆ. ನುಂಗುವ ಮಾತ್ರೆಗಳಲ್ಲಿ ಪ್ರಕೃತಿಯನ್ನು ಅನುಕರಿಸಿ ತಿಂಗಳ ವಿವಿಧ ದಿನಗಳಂದು ಪ್ರಬಲವಾಗಿರುವ ರಸದೂತಗಳನ್ನು ಬೇರೆ ಬೇರೆಯಾಗಿ ನೀಡುವ ''ಸೀಕ್ವೆನ್ಷಿಯಲ್ ಮಾತ್ರೆ''ಗಳೂ ಇವೆ. ತಿಂಗಳಿಗೊಮ್ಮೆ ನುಂಗುವ ಗುಳಿಗೆಗಳೂ ಬರುತ್ತಿವೆ. ತಿಂಗಳಿಗೊಮ್ಮೆ, ಮೂರು ತಿಂಗಳಿಗೊಮ್ಮೆ ಹೆಣ್ಣು ಸ್ವೀಕರಿಸುವ ಚುಚ್ಚುಮದ್ದುಗಳಿವೆ. ಆದರೆ ಇವುಗಳಿಂದ ಮುಟ್ಟಿನ ಏರುಪೇರುಗಳಾಗಿ ಅಡ್ಡಪರಿಣಾಮಗಳ ಸಾಧ್ಯತೆ ಇದೆ.

ಉದರದರ್ಶಕದ ಬಳಕೆಯನ್ನು ನಾವು ಹೆಚ್ಚಾಗಿ ಕುಟುಂಬ ಯೋಜನೆಯಲ್ಲಿ ನೋಡಿದ್ದೇವಲ್ಲಾ ? ಆದರೆ ಅದೇ ಸಾಧನದಿಂದ (ಕೆಲವು ಬದಲಾವಣೆಗಳೊಂದಿಗೆ) ಗುರಿ ತಪ್ಪಿದ ಗರ್ಭ (ಎಕ್ಟೋಪಿಕ್)ವನ್ನು ತೆಗೆಯಬಹುದು. ಹಿಸ್ಟರೆಕ್ಟಮಿ (ಗರ್ಭಾಶಯದ ಕೊಯ್ತೆಗೆತ) ಮಾಡಬಹುದು. ಬೇರೆ ಗಡ್ಡೆಗಳಿದ್ದರೆ ಅವುಗಳನ್ನೂ ಅದೇ ಉದರದರ್ಶಕದ ಸಹಾಯದಿಂದ ತೆಗೆದುಹಾಕಬಹುದು. ಸೋಂಕು ಒಳನುಗ್ಗಿ ಅಂಗ ಅಂಗಾಂಶಗಳನ್ನು ಒಂದಕ್ಕೊಂದು ಅಂಟಿಸಿದ್ದರೂ ಅವುಗಳನ್ನು ಈ ಸಾಧನದ ಬಳಕೆಯಿಂದ ಬಿಡಿಸಬಹುದು. ಕುಟುಂಬ ಯೋಜನಾ ಕ್ರಮಗಳನ್ನು ಕೈಗೊಂಡಾಗ ಈಗ ಉಪಯೋಗಿಸುವ ''ಫ್ಯಾಲೋಪ್'' ಉಂಗುರಗಳಿಗಿಂತ ಫಿಲ್ಶಿ, ಕೇಂಬ್ರಿಜ್ ಕ್ಲಿಪ್ಪುಗಳೂ ಬರುತ್ತಿವೆ.

ಪುರುಷರಿಗಾಗಿಯೂ ಕೆಲವು ಕುಟುಂಬ ಯೋಜನಾ ಕ್ರಮಗಳು ಬರಲಿವೆ. ಸ್ತ್ರೀಯರಿಗೆ ಅಳವಡಿಸುವಂತೆ ಪುರುಷರ ವಾಸ್ ಡೆಫರೆನ್ಸ್ ನಾಳದಲ್ಲಿಯೂ ಸೈಲಾಸ್ಟಿಕ್ ಸಾಧನಗಳನ್ನು ಅಳವಡಿಸುವುದರಲ್ಲಿದ್ದಾರೆ ಸಂಶೋಧಕರು. ವೀರ್ಯಾಣು ಉತ್ಪಾದನೆಯನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸುವ ವಿಧಾನಗಳೂ ಬರಲಿವೆ. ತನ್ನ ಗಂಡನ ವೀರ್ಯಾಣುಗಳಿಗೆ ಸ್ತ್ರೀಯಲ್ಲಿ ರೋಧ ವಸ್ತುಗಳನ್ನು ಉಂಟುಮಾಡುವ ಪ್ರಯೋಗಗಳೂ ನಡೆಯುತ್ತಿವೆ.

''ಆಮ್ನಿಯೋ ಫ್ಯೂಶನ್'' ಈ ದಶಕದ ಹೊಸ ಆವಿಷ್ಕಾರವೆನ್ನಬಹುದು. ಎಷ್ಟೋ ಗರ್ಭಸ್ಥ ಮಕ್ಕಳು ಹೆರಿಗೆಯ ಸಮಯದಲ್ಲಿ ಮಲಮಿಶ್ರಿತ ಗರ್ಭಜಲವನ್ನು ಉಸಿರಿನೊಡನೆ ಎಳೆದುಕೊಂಡು ಜೀವ ಕಳೆದುಕೊಳ್ಳುತ್ತಿದ್ದಾರೆ. ಇದನ್ನು ತಪ್ಪಿಸಲು ಗರ್ಭಕೋಶದ ಒಳಗೆ ಕಂಠದ್ವಾರ ಒಂದು ಸಣ್ಣ ನಳಿಕೆಯನ್ನು ತೂರಿಸಿ, ಅದರ ಮೂಲಕ ಸೂಕ್ತ ಲವಣ ದ್ರಾವಣವನ್ನು ನಿಧಾನವಾಗಿ ಸಾಗಿಸಿದಾಗ, ಎಷ್ಟೋ ಮಕ್ಕಳು ಸುಭದ್ರಸ್ಥಿತಿಯಲ್ಲಿ ಹುಟ್ಟುತ್ತಾರೆ.

ಒಟ್ಟಿನಲ್ಲಿ, ಕೋಟಿಗಟ್ಟಲೆ ಹಣವನ್ನು ವ್ಯಯಮಾಡಿ ಕೆಲವೇ ಸ್ತ್ರೀಯರಿಗೆ ಉಪಯೋಗವಾಗುವ 'ಸಂಕೀರ್ಣ ಸಂಶೋಧನೆ'ಗಳಿಗಿಂತ ಸರಳವಾಗಿದ್ದು, ಹೆಚ್ಚಿನವರ ಜೀವ, ಆರೋಗ್ಯಗಳನ್ನು ಉಳಿಸುವ ಸಾಧನ ಸಲಕರಣೆಗಳೂ ನಮಗೆ ಇಂದು ಬೇಕಾಗಿವೆ. ಮುಂದೆ ಈ ನಿಟ್ಟಿನಲ್ಲಿ ಸಂಶೋಧನಾ ಚಟುವಟಿಕೆಗಳು ಹೆಚ್ಚುತ್ತವೆಂದು ಆಶಿಸೋಣ.

**ಡಾ|| ಲೀಲಾವತಿ ದೇವದಾಸ್**
ನಂ. 70, ಕೆ.ಜಿ.ಎಸ್. ಲೇ ಔಟ್, ವಿಜಯನಗರ, ಬೆಂಗಳೂರು - 40



ಕಾರ್ಗಿಲ್‌ನಲ್ಲಿ ವೀರಮರಣ ಹೊಂದಿದ ಮುದ್ದೆ ಬಿಹಾಳ ತಾಲ್ಲೂಕಿನ ದಾವಲಸಾಬ ಕಂಬಾರ ಅವರ ಕುಟುಂಬಕ್ಕೆ ಅಖಿಲ ಭಾರತ ವಿದ್ಯಾರ್ಥಿ ಫೆಡರೇಷನ್ ಸಂಗ್ರಹಿಸಿದ ಹಣದಲ್ಲಿ ೯,೦೦೦ ರೂ. ಗಳನ್ನು ರಾಜ್ಯ ಅಧ್ಯಕ್ಷ ಶೌಕತ ಅಲಿ ಆಲೂರ ಅವರು ೨೦-೭-೯೯ರಂದು ತಹಸೀಲ್ದಾರರ ಸಮ್ಮುಖದಲ್ಲಿ ಅವರ ತಾಯಿ ಚಾಂದಭಿ ಅವರಿಗೆ ಸಲ್ಲಿಸಿದರು.

# ಟೆಲಿಕಾಂ ಹಗರಣದ ಒಳತೋಟಿ

ತಾವೇ ಒಪ್ಪಿಕೊಂಡ ಕರಾರಿನಂತೆ ಟೆಲಿಕಾಂ ಖಾಸಗೀ ಕಂಪೆನಿಗಳು ಸರ್ಕಾರಕ್ಕೆ ಲೈಸೆನ್ಸ್ ಶುಲ್ಕವನ್ನು ಕೊಟ್ಟಿಲ್ಲ. ತಾವು ನೆನೆಸಿದಷ್ಟು ವ್ಯವಹಾರ ಕುದುರಿ ಆದಾಯ ಬಂದಿಲ್ಲವಾಗಿ ಕೊಡಲಾಗಿಲ್ಲವೆಂದೂ, ಇದೇ ಕರಾರಿನ ಸೂತ್ರಕ್ಕೆ ಕಟ್ಟುಬಿದ್ದರೆ ತಾವು ದಿವಾಳಿಯಾಗುವುದಾಗಿಯೂ ಹೇಳುತ್ತಾರೆ. ದೂರ ಸಂಪರ್ಕದ ಉದಾರೀಕರಣ- ಖಾಸಗೀಕರಣದ (ಈ ಎರಡೂ ಪದಗಳನ್ನು ಪರ್ಯಾಯವಾಗಿ ಇತ್ತೀಚೆಗೆ ಉಪಯೋಗಿಸ ಲಾಗುತ್ತಿರುವುದನ್ನು ಗಮನಿಸಬೇಕು) ನೀತಿಯ ಉದ್ದೇಶ ದೇಶದಲ್ಲಿ ದೂರಸಂಪರ್ಕ ವ್ಯವಸ್ಥೆ ತ್ವರಿತವಾಗಿ, ಅತ್ಯಾಧುನಿಕ ತಂತ್ರಜ್ಞಾನವನ್ನು ಮೈಗೂಡಿಸಿಕೊಂಡು, ಸಾಧಿತವಾಗಬೇಕು ಎಂಬುದು. ಸರ್ಕಾರದ ದೂರಸಂಚಾರ ಇಲಾಖೆ ಈ ಕೆಲಸ ಸಾಧಿಸಲು ವಿಫಲವಾಗಿದೆ. ಅದಕ್ಕೆ ಕಾರಣ ಆಡಳಿತಶಾಹೀ, ರಾಜಕೀಯ ಹಸ್ತಕ್ಷೇಪ, ಹೂಡಲು ಬೇಕಾದ ಮಹತ್ಪ್ರಮಾಣದ ಬಂಡವಾಳದ ಕೊರತೆ, ಎಲ್ಲಕ್ಕಿಂತ ಮಿಗಿಲಾಗಿ ಏಕಸ್ವಾಮ್ಯ ರಚನೆ ಇವುಗಳೆಲ್ಲದರ ಒಟ್ಟಾರೆ ಪರಿಣಾಮ - ಖಾಸಗಿಯಲ್ಲಿ ಸ್ಪರ್ಧೆ ಉಂಟಾಗುತ್ತದೆ, ಬಂಡವಾಳದ ಹೊಳೆ ಹರಿದುಬರುತ್ತದೆ. ಪರದೇಶದ ಮುಂಚೂಣಿ ದೂರಸಂಪರ್ಕ ಕಂಪೆನಿಗಳು ಆಧುನಿಕ ತಂತ್ರಜ್ಞಾನವನ್ನು ತರುತ್ತವೆ, ಬಳಕೆದಾರರಿಗೆ ಸೇವೆಯ ಬೆಲೆ ಕಡಿಮೆಯಾಗಿ ಗುಣಮಟ್ಟ ಹೆಚ್ಚುತ್ತೆ ಎಂಬಿತ್ಯಾದಿ ನಂಬಿಕೆಗಳು.

ನೆನಸಿದಷ್ಟು ಪ್ರಮಾಣದ ವ್ಯವಹಾರ ಏಕೆ ಆಗಲಿಲ್ಲ ? ತಿಳಿದ ತಜ್ಞರು ಆಗಲೇ ಹೇಳಿದ್ದರು, ಇಷ್ಟೊಂದು ಹಿರಿಯ ಪ್ರಮಾಣದ ವ್ಯವಹಾರವನ್ನು ನಿರೀಕ್ಷಿಸುವುದು ಭ್ರಮೆ ಎಂದು. ಯಾವುದೇ ದೇಶದ ದೂರಸಂಪರ್ಕದ ಹರಹು ಮತ್ತು ತಾಂತ್ರಿಕಮಟ್ಟ, ಆ ದೇಶದ ಆರ್ಥಿಕ ರಂಗದ ಪ್ರಮಾಣ, ಅದರ ಕೈಗಾರಿಕೆ ಮತ್ತು ತಾಂತ್ರಿಕತೆ ಇತ್ಯಾದಿಗಳ ಮಟ್ಟಕ್ಕೆ ಸರಿಸಾಟಿಯಾಗಿರುತ್ತದೆಯೇ ವಿನಾ, ಅದಕ್ಕೂ ಮಿಗಿಲಾಗಿ ಇರಲು ಸಾಧ್ಯವಿಲ್ಲ. ಕಾರಣ ಅಂಥ ಮಟ್ಟದ ದುಬಾರಿಯಾದ ಸಂಪರ್ಕಜಾಲ - ವೈವಿಧ್ಯಗಳಿಂದ ಅಲ್ಲಿಯ ಕೈಗಾರಿಕಾ ಪ್ರಪಂಚದ ವ್ಯವಹಾರದ ವೇಗ ಮತ್ತು ಇನ್ನಿತರ ಸಂಕೀರ್ಣತೆಗೆ ತತ್ಕಾಲದಲ್ಲಿ ಪ್ರಯೋಜನವಿಲ್ಲವಾಗಿ, ಬೇಡಿಕೆ ಬರುವುದಿಲ್ಲ. ಹಾಗೂ ಅಂಥ ಸಂಪರ್ಕಜಾಲವನ್ನು ನೆಯ್ಯಬೇಕಾದರೆ, ಅದು ಲಾಭದಾಯಕವಾಗಬೇಕಾದರೆ, ಅದಕ್ಕೆ ಒಂದು ಮಿಗಿಲಾದ ಪ್ರಮಾಣದಲ್ಲಿ ಬೇಡಿಕೆ ಇರಬೇಕು. ಹಾಗಿಲ್ಲದೆ ಬೇಡಿಕೆ ದೇಶದ ಕೆಲವೇ ಕೆಲವು ಬಹು ಮುಂದುವರಿದ ಉದ್ಯಮಕ್ಕೆ ಮಾತ್ರ ಸೀಮಿತವಾದರೆ, ಕೆಲವು ಸರಳ ಉದಾರೀಕರಣ ನೀತಿಯಿಂದ ಅವರಿಗೆ ಮಾತ್ರ ಅಂಥ ಸಂಪರ್ಕಸೇವೆಗಳನ್ನು ಆಮದು ಮಾಡಿಸಿಕೊಡಬಹುದಿತ್ತು.

ವಿಶ್ವದ ಬಲು ಚತುರ ಸಂಪರ್ಕ ಉದ್ದಿಮೆಯ ಕಂಪೆನಿಗಳ ಜೊತೆಗೂಡಿ ಟೆಂಡರ್‌ನಲ್ಲಿ ಭಾಗವಹಿಸಿದವರಿಗೆ, ಇಲ್ಲಿ ತಾವು ಅಂದಾಜು ಮಾಡುವಷ್ಟು ಪ್ರಮಾಣದ ವ್ಯವಹಾರ ಸದ್ಯಕ್ಕೆ ಇಲ್ಲವೆಂಬುದು ತಿಳಿಯದಷ್ಟು ದಡ್ಡರೆ ಇವರೆಲ್ಲಾ ? ಹೌದು, ದಡ್ಡರಾಗಿದ್ದೆವು ಎಂದೂ ಹೇಳಿಕೊಳ್ಳುತ್ತಿದ್ದಾರೆ. ಇದರ ಹಿಂದಿನ ಮರ್ಮವನ್ನು ಬೇರೆಯಾಗಿಯೇ ಆರ್ಥಿಕ ನೀತಿಯ ವಿಶಾಲವಾದ ಹರಹಿನ ಕಟುವಿಮರ್ಶೆಯ ಭಾಗವಾಗಿ ಚರ್ಚಿಸಬೇಕಾದುದಿದೆ. ಸದ್ಯಕ್ಕೆ ಎಲ್ಲ ಕಂಪೆನಿಗಳಿಗೂ,

> ***ನಮ್ಮ ಆಡಳಿತ ಕಾಲದಲ್ಲಿ ಹಗರಣಗಳೇ ಇಲ್ಲ ಎಂದು ಪ್ರಧಾನಿ ವಾಜಪೇಯಿ ಹೇಳಿಕೊಳ್ಳುತ್ತಾರೆ, ಕಾಂಗ್ರೆಸ್ ಆಡಳಿತದ ಹಗರಣಗಳನ್ನು ನೆನಪಿಸಿ. ಆದರೆ 50,000 ಕೋಟಿ ರೂ. ನಷ್ಟವಾಗುವಂಥ ಹಗರಣ ಅವರ ಸರಕಾರದಲ್ಲಿ ನಡೆದಿದೆ. ಈ ಹಗರಣದ ನೆಲೆ ಸೆಲೆ ಏನಿರಬಹುದೆಂದು ಜನತೆ ತಿಳಿಯುವುದು ಒಳ್ಳೆಯದು.***

ನಿಜವಾಗಿಯೂ, ಈಗಾಗಲೇ ಒಂದೇ ರೀತಿಯಾಗಿ ನಷ್ಟವಾಗಿದೆಯೇ ಎಂಬ ವಿಚಾರಣೆಯೂ ಆಗಿಲ್ಲ. ಕಾರಣ ಕೆಲವು ಕಂಪೆನಿಗಳು ಲಾಭ ಸಂಪಾದಿಸಿರುವುದು ನಿಜ. ಇದು ಬಲು ಶ್ರೀಮಂತ ಉದ್ದಿಮೆದಾರರ ಹಾಗೂ ಮಧ್ಯಮ ಮತ್ತು ಉದಯೋನ್ಮುಖ ಉದ್ದಿಮೆಗಾರರ ಬಂಡವಳಿಗರ ನಡುವಿನ ಆಂತರಿಕ ಬಿಕ್ಕಟ್ಟು ಮತ್ತಷ್ಟು ವಿಷಮವಾಗುತ್ತಿರುವ ಕುರುಹು ಎಂದು ಸಂಕ್ಷೇಪವಾಗಿ ಹೇಳಿ, ಮುಂದುವರೆಯುವ.

ಈಗ ಸರ್ಕಾರ ಕೊಡಲು ಹೊರಟಿರುವ ಪರಿಹಾರದ ಸ್ವರೂಪವೇನು ? ಮುಂದಿನ ವ್ಯವಹಾರದ ಪ್ರಮಾಣ ಇಂತಿಷ್ಟೇ ಎಂದು ಅಂದಾಜು ಮಾಡಲು ಸಾಧ್ಯವಿಲ್ಲ. ಆದುದರಿಂದ ಈ ಲೈಸೆನ್ಸ್ ಶುಲ್ಕ ಪದ್ಧತಿಯನ್ನು ಕೈಬಿಡುವುದು. ಯಾವುದೇ ಹೊಸ ಕಂಪೆನಿ ದೂರಸಂಪರ್ಕ ವ್ಯವಹಾರ ನಡೆಸಬೇಕಾದರೆ ಹಾಲೀ ಇರುವ ಸರ್ಕಾರೀ ದೂರ ಸಂಪರ್ಕ ಇಲಾಖೆಯ ರಾಷ್ಟ್ರ ವಿಶಾಲವಾದ ಜಾಲವನ್ನು ಬಳಸಿಕೊಳ್ಳಲೇಬೇಕು. ಇದಕ್ಕಾಗಿ ಹೊಸ ಪರಿಹಾರದಲ್ಲಿ, ಖಾಸಗೀ ಕಂಪೆನಿ ಶೇ. 15ರಷ್ಟು ತಮ್ಮ ಆದಾಯವನ್ನು ಸರ್ಕಾರಕ್ಕೆ ಕೊಡುತ್ತಾ ಬರುವುದು. ಶೇ. 15 ಅಂತ ಹೇಗೆ ಯಾವ ಆಧಾರದ ಮೇಲೆ ತೀರ್ಮಾನಿಸಿದರು ಎನ್ನುವುದು ತಿಳಿಯದು. ಹಿರಿಯ ಬಂಡವಳಿಗರ ಕಂಪೆನಿಗಳು ಈ ಜಗಳದಲ್ಲಿ ಪ್ರಮುಖರಾಗಿಲ್ಲವೆನ್ನುವುದನ್ನು ಗಮನಿಸಬೇಕು. ಅವರಿಗೆ ಗೊತ್ತು, ಈ ವ್ಯವಹಾರ ಕಾಲಾನುಕಾಲದಲ್ಲಿ ಲಾಭದಾಯಕ, ಪ್ರಾರಂಭದಲ್ಲೇ ಅತಿ ಲಾಭವನ್ನು ತರುವ ದಂಧೆ ಇದಲ್ಲ ಎಂದು. ಇದರ ತಕ್ಷಣದ ಪರಿಣಾಮ, ಹಳೆಯ ಲೈಸೆನ್ಸ್ ಶುಲ್ಕವಾಗಿ ಸರ್ಕಾರಕ್ಕೆ ಪ್ರಸಕ್ತ ವರುಷ ಬರುವುದೆಂದು ನಿರೀಕ್ಷಿಸಿದ್ದ ಸುಮಾರು 1500 ಕೋಟಿ ಹಣ ಬರುವುದಿಲ್ಲ. ಹಾಗೂ ಆದರ ಕರಾರಿನಂತೆ ಮುಂದಿನ ಹತ್ತಾರು ವರ್ಷಗಳಲ್ಲಿ ಬರಬೇಕಾಗಿದ್ದ ಹತ್ತಾರು ಸಹಸ್ರಾರು ಕೋಟಿ ರೂಪಾಯಿಗಳೂ ಬರುವುದಿಲ್ಲ.

ಇನ್ನು ಶೇ. 15ರಂತೆ ಆದಾಯದ ವಿಷಯ. ಕಂಪೆನಿಗಳು ಆದಾಯ ಬರಲೀ ಬಿಡಲೀ, ಇಂತಿಷ್ಟಾದರೂ ಕೊಡಲೇಬೇಕೆಂಬ ಕಡ್ಡಾಯವಿಲ್ಲ. ಅವರು ಅಸಮರ್ಪಕ ವ್ಯವಹಾರ ನಡೆಸಿ, ನಷ್ಟವನ್ನೇ ಅನುಭವಿಸಬಹುದು. ನಷ್ಟವನ್ನೇ ತೋರಿಸಬಹುದೂ ಕೂಡ. ಕಾರಣ ಇದರ ಲೆಕ್ಕಪತ್ರವಿಡುವ ಪದ್ಧತಿ, ತಾಂತ್ರಿಕವಾಗೂ, ಆಡಳಿತಾತ್ಮವಾಗೂ ತೊಡಕಿನದು. ಅವರು ಅತಿ ನೂತನ ತಂತ್ರಜ್ಞಾನವನ್ನು ತರುವರೆಂಬ, ತರಲೇಬೇಕೆಂಬ ನಿರ್ಬಂಧ ಇಲ್ಲ. ಕಾರಣ ಈ ಕಂಪೆನಿಗಳ ಜೊತೆ, ಮುಂಚಿನ ಕರಾರಿನಲ್ಲಿ ಪಾಲುದಾರರಾಗಿದ್ದ ಪರದೇಶೀ ಕಂಪೆನಿಗಳು ಕಳಚಿಕೊಳ್ಳುತ್ತಿವೆ. ಕಳಚಿಕೊಳ್ಳಲು ಅವಕಾಶವನ್ನೂ ನೀಡಿಯಾಗಿದೆ. ಒಟ್ಟಾರೆ ಸರ್ಕಾರ ಈ ವ್ಯವಹಾರದಿಂದ, ಸಾರ್ವಜನಿಕ ವಲಯದ ಒಂದು ಲಾಭದಾಯಕ ಕಾರುಬಾರನ್ನು, ಯಾವ ಜವಾಬ್ದಾರಿಯನ್ನೂ ಹೊರಿಸದೆ, ಖಾಸಗಿಯವರಿಗೆ ಬಿಟ್ಟುಕೊಟ್ಟಂತಾಗುತ್ತದೆ ಹಾಗೂ ಅವು ರೋಗಿಷ್ಠವಾದಾಗ, ಸಾರ್ವಜನಿಕ ಹಿತದೃಷ್ಟಿಯಿಂದ ಆ ಕಂಪೆನಿಗಳ ವಹಿವಾಟನ್ನು ಪರಿಹಾರಧನ ಕೊಟ್ಟು ಸರ್ಕಾರವೇ ವಹಿಸಿಕೊಳ್ಳಬೇಕಾಗಬಹುದು.

ಈ ಹಗರಣಕ್ಕೆ ಸ್ವಲ್ಪ ಹಿಂದೆ ನಡೆದ ಒಂದು ಮಹತ್ತರ ಬದಲಾವಣೆಯನ್ನು ಇಲ್ಲಿ ಗಮನಕ್ಕೆ ತೆಗೆದುಕೊಳ್ಳಬೇಕು. ಸರ್ಕಾರದ ಕ್ಷೇತ್ರದ ದೂರಸಂಪರ್ಕ ಮತ್ತು ವಿದೇಶೀ ಸಂಚಾರ ನಿಗಮ ಎರಡು ಬಹಳ ಮುಖ್ಯವಾಗಿ ಅವಲಂಬಿಸಿದ್ದ ಆದಾಯ ಅಂತರ್ದೇಶೀಯ ಮತ್ತು ಅಂತರರಾಷ್ಟ್ರೀಯ ಕರೆಗಳಿಂದ. ಇಲ್ಲಿ ವಿಶ್ವ ವಾಣಿಜ್ಯ ಘಟಕದ ಹೆಸರಿನಲ್ಲಿ, ಅಮೆರಿಕದ ಹೆದರಿಕೆ- ಬೆದರಿಕೆ- ಒತ್ತಾಯಕ್ಕೆ ಮಣಿದು, ಈಗಷ್ಟೇ ಶೇ. 35ರಷ್ಟು ಈ ಕರೆಗಳ ದರವನ್ನು ಇಳಿಸಲಾಯ್ತು. ಇದನ್ನು ದೂರಸಂಪರ್ಕ ನಿಯಂತ್ರಣ ಪ್ರಾಧಿಕಾರದ [Telecom Regulating Authority (TRA)] ತೀರ್ಪಿನಂತೆ ಹೊರಿಸಲಾಯ್ತು. ಇದು ಮಹತ್ತರವಾದ ಆದಾಯದ ಕಡಿತವಾಗಿತ್ತಾದರೂ, ಖಾಸಗೀ ಸಂಸ್ಥೆಗಳು ಕೊಡುವ ಲೈಸೆನ್ಸ್ ಶುಲ್ಕದಿಂದ ಸ್ವಲ್ಪಮಟ್ಟಿಗೆ ಭರಿಸಬಹುದಾಗಿತ್ತು. ಇತ್ತೀಚಿನ ಬೆಳವಣಿಗೆಯಿಂದಾಗಿ, ಸರ್ಕಾರದ ಬಹುಮುಖ್ಯ ಆದಾಯ ವಹಿವಾಟು ಈ ಎರಡೂ ಸಂಸ್ಥೆಗಳೂ ತೀವ್ರ ನಷ್ಟವನ್ನು ಅನುಭವಿಸುವಂತಾಗುತ್ತದೆ. ಹಾಗೂ ಖಾಸಗೀ ಸಂಸ್ಥೆಗಳು, ಸಾರ್ವಜನಿಕ ವಲಯದಲ್ಲಿ ಲಾಭದಾಯಕವಾದ ಹೊಸ ಸೇವೆಗಳನ್ನೂ, ಸೆಲ್ಯುಲಾರ್ ಸರ್ವೀಸ್, ಮುಂತಾದವುಗಳನ್ನು ಕೈಗೊಳ್ಳುವುದನ್ನು ವಿರೋಧಿಸಿವೆ. ಹಾಗಾಗಿ ಹೊಸ ಆದಾಯವನ್ನು ಸಂಪಾದಿಸುವುದೂ ದೂರಸಂಪರ್ಕ ಇಲಾಖೆಗೆ ಸಾಧ್ಯವಾಗದಾಗಿದೆ. ಇದರ ಪರಿಣಾಮ ಕೇವಲ ಹಣಕಾಸಿನದಲ್ಲ.

ಈಗಿನ ಪರಿಸ್ಥಿತಿಯಲ್ಲಿ ವಿದೇಶೀ ಕಂಪೆನಿಗಳು ಅವುಗಳ ಬಂಡವಾಳ, ತಂತ್ರಜ್ಞಾನ ಹಿರಿಯ ಪ್ರಮಾಣದಲ್ಲಿ ಬರದೇ ಹೋಗಬಹುದು. ಖಾಸಗೀ ಸಂಸ್ಥೆಗಳು ದೂರಸಂಪರ್ಕದ ವಿಸ್ತರಣೆಯ ತಮ್ಮ ಪಾಲಿನ ಜವಾಬ್ದಾರಿಯನ್ನು ನಿರ್ವಹಿಸ ಲಾರದೇ ಹೋಗಬಹುದು. ಸರ್ಕಾರಿ ವಲಯದ ಸಂಸ್ಥೆಗಳ ಆದಾಯ ಕಮ್ಮಿಯಾಗಿ, ವಿಸ್ತರಣೆಯ ಕೆಲಸವನ್ನು ಸಾಧಿಸಲು ಅಸಮರ್ಥವಾಗಬಹುದು. ಗ್ರಾಮಾಂತರ ಪ್ರದೇಶದ ಸಂಪರ್ಕ ವ್ಯವಸ್ಥೆಯ ಬೆಳವಣಿಗೆ ಕುಂಠಿತವಾಗುವುದಂತೂ ಖಂಡಿತವೆನಿಸು ತ್ತದೆ. ಇಂದು ದೂರಸಂಚಾರ ಇಲಾಖೆ ಕೇಳಿದಾಗ ಟೆಲಿಫೋನ್ ನೀಡಬಲ್ಲ ಮಜಲಿಗೆ ಮುಟ್ಟಿದೆ. ಸಾಧಾರಣವಾಗಿ ಕೈಗಾರಿಕಾ ಕ್ಷೇತ್ರದಲ್ಲಿ ಪ್ರಗತಿ ಹಿಂದೆ ಬಿದ್ದಿದ್ದು, ಟೆಲಿಫೋನಿಗೆ ಬೇಡಿಕೆ ತೀರಾ ಕಡಿತವಾಗಿದೆ. ಹಾಗಾಗಿ, ಖಾಸಗೀ ಕ್ಷೇತ್ರದಲ್ಲಿ ಈ ವ್ಯವಹಾರ ನಡೆಸಲು ಅವಕಾಶವೇ ಇಲ್ಲವಾಗಿದೆ

**ಪಾರ್ಥಸಾರಥಿ**

ಇನ್ನೊಂದು ಮುಖ. ಕಳೆದ ಮೂವತ್ತು ವರ್ಷಗಳಲ್ಲಿ, ಸರ್ಕಾರೀ ಹಣವನ್ನು ಬಳಸಿ, ಖಾಸಗೀ ಕೈಗಾರಿಕೆಗಳನ್ನು ಪ್ರಾರಂಭಿಸಿ, ಅದರ ಆದಾಯವನ್ನೆಲ್ಲಾ ಬೇರೆಲ್ಲಿಗೋ ಸಾಗಿಸಿ, ಕೈಗಾರಿಕೆಯನ್ನು ರೋಗಿಷ್ಠವೆಂದು ಸಾರಿ, ಮತ್ತಷ್ಟು ಸರ್ಕಾರೀ ಹಣವನ್ನು ಪಡೆಯುವ ಕಲೆ (ಅಮಿತಾಬಚ್ಚನ್ ಇದರಲ್ಲಿ ತೀರಾ ಇತ್ತೀಚಿನ ಕಲಾಪ್ರವೀಣ) ಮತ್ತು ಆ ಉದ್ಯಮವನ್ನು ಸರ್ಕಾರಕ್ಕೇ ವಹಿಸಿಬಿಡುವುದು ಒಂದು ಮಾಮೂಲಿ ಪದ್ಧತಿಯಾಗಿತ್ತು. ಇನ್ನು ಮುಂದೆ ಸರ್ಕಾರೀ ಉದ್ಯಮಗಳನ್ನು ಬೇಕೆಂತಲೇ ರೋಗಿಷ್ಠವಾಗಿಸಿ, ಖಾಸಗಿಯವರಿಗೆ ಒಪ್ಪಿಸುವ ಕಾರ್ಯಕ್ರಮ, ಎಡ ಪಕ್ಷದವರನ್ನು ಬಿಟ್ಟು ಮಿಕ್ಕೆಲ್ಲಾ ಪಕ್ಷದವರ ಮುಂದೆಯೂ ಇದೆಯಷ್ಟೆ! ವಿಮಾನ, ರೈಲ್ವೆ ಇಲಾಖೆಗಳು, ಬಂದರು ನಿಗಮಗಳು ಈ ಹಾದಿಯಲ್ಲಿ ಸಾಗುತ್ತಿರುವುದು ಸ್ಪಷ್ಟ. ಈಗ ಬಹಳ ಕಷ್ಟಪಟ್ಟು ಅನೇಕ ಅಂಕು-ಡೊಂಕು ಮಾರ್ಗಗಳಿಂದ, ದೂರ ಸಂಪರ್ಕ ಇಲಾಖೆಯ ಖಾಸಗೀಕರಣಕ್ಕೆ ಮೊದಲ ಹೆಜ್ಜೆಯಿಟ್ಟಂತಾಗಿದೆ ಎನಿಸುತ್ತದೆ. ನೇರವಾಗಿ ಹರಾಜು ಹಾಕಿದರೆ ಬಹಳ ಬೆಲೆ ತೆರಬೇಕಾಗುತ್ತದೆ. ಅದಕ್ಕೆಂದೇ ಸರ್ಕಾರೀ ಟೆಲಿಕಾಂ ವಲಯಕ್ಕೆ ರೋಗ ಬರಸದೆ ಬೇರೆ ದಾರಿಯಿಲ್ಲ.

ಈ ಹಗರಣಕ್ಕೆ ಇನ್ನೊಂದು ಮಗ್ಗುಲು ಇದೆ. ಸರ್ಕಾರ ಈಗ ತೆಗೆದುಕೊಳ್ಳುತ್ತಿರುವ ಕ್ರಮ ತೆಗೆದುಕೊಳ್ಳದಿದ್ದರೆ, ಆಗುವ ತೀವ್ರ ಪರಿಣಾಮ- ಅವರೇ ಹೇಳುವಂತೆ- ಸುಮಾರು 10,000 ಕೋಟಿ ರೂ. ವಿದೇಶೀ ಬಂಡವಾಳ ನಿಂತುಹೋಗುತ್ತದೆ. ವಿದೇಶೀ ಉದ್ಯಮಗಳು ಮಿಕ್ಕ ಉದ್ಯಮಗಳಿಗೂ ಬರದೇ ಹೋಗುತ್ತವೆ. ಈಗಾಗಲೇ ಚರ್ಚಿಸಿದ ಕಾರಣಗಳಿಂದಾಗಿ, ಈ ಹೇಳಿಕೆ ಎಷ್ಟು ಪೊಳ್ಳು ಎಂದು ಸ್ಪಷ್ಟವಾದೀತು. ಈ ಹತ್ತು ಸಾವಿರ ಬಂಡವಾಳದಲ್ಲಿ ಶೇ. 80ರಷ್ಟು ವಿದೇಶೀ ಕಂಪೆನಿಗಳದ್ದು. ಇದು ಇನ್ನು ಬಂದೇ ಬರುವುದೆಂಬ ನಿರೀಕ್ಷೆಯಷ್ಟೆ. ಅವರು ಈ ಕರಾರಿನ ಸಿಕ್ಕಿನಿಂದ ಬಿಡಿಸಿಕೊಳ್ಳುವ ಹವಣಿನಲ್ಲಿದ್ದಾರೆ. ಅವರಿಗೆ ಈ ಸಹಾಯ ಮಾಡಲು ಅಮೆರಿಕದ ಒತ್ತಾಯ ತೆರೆಮರೆಯಲ್ಲಿ ಅತೀವವಾಗಿ, ಚುನಾವಣೆಯ ಪ್ರಕ್ರಿಯೆ ಮುಗಿಯುವವರೆಗೂ ಕಾಯಲು ಆಗದಂತೆ ಸರ್ಕಾರ ಪೇಚಿಗೆ ಸಿಕ್ಕಿಕೊಂಡಿರಬೇಕು. ಬರುವ ಸಿಯಾಟಲ್‌ನ ಡಬ್ಲ್ಯೂಟಿಓ ಸಭೆಗೆ ಮುಂಚೆ ಟೆಲಿಕಾಂ ಖಾಸಗೀಕರಣ ಸಾಧಿಸುವ ಮಾತು ಕೊಟ್ಟು ಆಗಿದೆ. ಇದು ಎಲ್ಲಾ ಪಕ್ಷಗಳಿಗೆ ಗೊತ್ತಿದೆ. ನಿಜಸಂಗತಿ ಹೇಳಲಾರದೆ ಎಲ್ಲರೂ ಕೇವಲ ಮುಸುಕಿನಲ್ಲಿ ಗುದ್ದಾಟವಾಡುತ್ತಿದ್ದಾರೆ.

ಟೆಲಿಕಾಂ ಪ್ರಕರಣದಲ್ಲಿ ಲಂಚದ ಸಾಧ್ಯತೆಯನ್ನು ತಳ್ಳಿಹಾಕುವುದು ಕಷ್ಟ. ಅದು ಚುನಾವಣೆಗೂ ಬಂಡವಾಳ! ಆದರೆ ಈ ಹಗರಣ ಮುಂದೊಡ್ಡಿರುವ ಮೂಲ ಸಮಸ್ಯೆ - ಲಾಭ ಮಾಡುತ್ತಿರುವ ಸರ್ಕಾರದ ಉದ್ಯಮಗಳನ್ನೂ ಖಾಸಗಿಯವರಿಗೆ ಬಿಟ್ಟುಕೊಡಬೇಕೇ ? ಡಬ್ಲ್ಯೂಟಿಓ ಹೀಗೆ ಹೇಳುತ್ತದೆ ಎಂಬ ಕಾರಣ ಸಾಕೇ ? ಇಲ್ಲಿ ನಮ್ಮ ಸ್ವಾಯತ್ತತೆಯ ಪ್ರಶ್ನೆ ಎಷ್ಟು ? ಇಂದು ದೇಶದಲ್ಲೇ ಸಾಕಷ್ಟು ತಂತ್ರಜ್ಞಾನ, ಸಂಪರ್ಕ ಜಾಲದ ಸರಕುಗಳು ತುಂಬಿವೆ. ಹೀಗಿದ್ದೂ ಸರ್ಕಾರ ಗ್ರಾಮೀಣ ಸಂಪರ್ಕ ವ್ಯವಸ್ಥೆಯ ಪ್ರಗತಿಯನ್ನು ಏಕೆ ಸಾಧಿಸಲಿಲ್ಲ ? ದೂರ ಸಂಪರ್ಕ ಇಲಾಖೆಯ ಒಳಗೇ ವಿದೇಶಿ-ಸ್ವದೇಶೀ ಸಮರ್ಥಕರ ನಡುವೆ ತೀವ್ರ ಪೈಪೋಟಿ ನಡೆಯುತ್ತಿದೆ ಎಂಬ ಗುಮಾನಿಯಿದೆ. ವಿಷಯ ತೀರಾ ತಾಂತ್ರಿಕ ಜಟಿಲತೆಯನ್ನು ಪಡೆದಿದ್ದು, ರಾಜಕೀಯ ವ್ಯಕ್ತಿಗಳಾದ ಮಂತ್ರಿಗಳನ್ನೂ ತಪ್ಪುದಾರಿಗೆ ಇವರು ಎಳೆಯುತ್ತಾರೆ ಎಂಬ ಮಾತೂ ಇದೆ. ತಂತ್ರಜ್ಞಾನದ ಇಲಾಖೆಗಳಿಗೆ ಸಾಕಷ್ಟು ತಾಂತ್ರಿಕ ಜ್ಞಾನವಿರುವವರನ್ನು ಮಂತ್ರಿಗಳಾಗಿ ನಿಗದಿ ಮಾಡಲು ಎಷ್ಟು ರಾಷ್ಟ್ರೀಯ ಪಕ್ಷಗಳು ಸಿದ್ಧವಿವೆ? ಅಥವಾ ದೂರಸಂಚಾರ, ರೈಲ್ವೆ ಮುಂತಾದ ಸಾರ್ವಜನಿಕ ಸೇವೆಯ ಇಲಾಖೆಗಳನ್ನೂ ಸ್ವಾಯತ್ತ ಸಂಸ್ಥೆಗಳಾಗಿ, ಪಕ್ಷ ರಾಜಕೀಯದ ಮುಷ್ಟಿಯಿಂದ ಬಿಡಿಸಲು ಸಿದ್ಧರಿದ್ದಾರೆಯೇ ? ಇವೆಲ್ಲಾ ಈ ಚುನಾವಣೆಯಲ್ಲಿ ಚರ್ಚಿಸುವ ವಿಷಯವಾಗುವಷ್ಟು ನಮ್ಮ ಪ್ರಜಾಪ್ರಭುತ್ವ ಪ್ರಬುದ್ಧವಾಗಿಲ್ಲವೆ ?

ಸರ್ಕಾರೀ ವಲಯದ ದೂರಸಂಚಾರ ಇಲಾಖೆ ತನ್ನ ಕಡೆಯಿಂದ ಕೊಡಬೇಕಾದ ಖಾಸಗೀವಲಯದ ಪರವಾಗಿ ವಿನಾಯಿತಿ ಸುಧಾರಣೆಗಳನ್ನೆಲ್ಲಾ ನೀಡುತ್ತಾ ಬಂದಿದ್ದರೂ, ಖಾಸಗೀ ಕಂಪೆನಿಗಳು ತಮ್ಮ ಕಡೆಯಿಂದ ಒಪ್ಪಿಕೊಂಡ ಯಾವ ಸಲಹೆಗಳನ್ನಾಗಲೀ ಸುಧಾರಣೆಗಳನ್ನಾಗಲೀ ಕಾರ್ಯಗತಗೊಳಿಸಿಲ್ಲ.

ಪ್ರಸ್ತುತ ದೆಹಲಿಯ ಉಚ್ಚ ನ್ಯಾಯಾಲಯ ಸರ್ಕಾರದ ತರಾತುರಿಯ ಬಗ್ಗೆ ಆಶ್ಚರ್ಯ ವ್ಯಕ್ತಪಡಿಸಿದೆ. ಪರಿಹಾರ ಸಾಧುವಾದುದೇ ಆದರೆ ಲೋಕಸಭೆಯ ಒಪ್ಪಿಗೆ ಇಲ್ಲದೆ ಇದ್ದು ಟೆಲಿಕಾಂ ನೀತಿಯನ್ನು ಬದಲಾಯಿಸಲಾಗದು ಎಂದು ಅಭಿಪ್ರಾಯಪಟ್ಟಿದೆ. ಹೊಸ ಟೆಲಿಕಾಂ ನೀತಿಯಲ್ಲಿ ಹೊಸ ಕಂಪನಿಗಳು, ಹೊಸ ವ್ಯವಹಾರ, ಒಪ್ಪಂದಗಳಿಗೆ, ಆದಾಯ ಹಂಚಿಕೆ ಮಾದರಿಯನ್ನು ಅಳವಡಿಸಿಕೊಳ್ಳಲಾಗಿದೆ. ಈಗ ಇದನ್ನೇ ಹಿಂದಿನ ಕರಾರಿಗೆ ಸಿಕ್ಕಿಕೊಂಡವರಿಗೂ ಅನ್ವಯಿಸಬೇಕೆಂಬುದು ಇಂದಿನ ಉದ್ದೇಶ. ಮುಂದಿನ ಲೋಕಸಭೆ ಈ ಬದಲಾವಣೆಗೆ ಒಪ್ಪಿಗೆ ಕೊಡುವ ಸಾಧ್ಯತೆಯೂ ಇದೆ. ಒಟ್ಟಿನಲ್ಲಿ ಹೇಳುವುದಾದರೆ ಈ ಹಗರಣ ಒಂದು ವರ್ಗಕ್ಕೆ ಸೀಮಿತವಾದ ಒಳಜಗಳ. ಆದರೆ ಹಗರಣದ ಲಾಭ ಪಡೆದ ಭಾಜಪ ಕೂಟವು ಸಾರ್ವಜನಿಕ ಹಣದ ಬಗ್ಗೆ ಅಲಕ್ಷ್ಯ ತೋರುತ್ತಿದೆ. ಅವರೇ ಅಧಿಕಾರದಲ್ಲಿರುವವರು. ವಿಶಾಲವಾದ ಜನಸಮುದಾಯ ಈ ಸಂದರ್ಭದಲ್ಲಿ ಮಾಧ್ಯಮಗಳೂ, ಆಡಳಿತ ಪಕ್ಷಗಳೂ ಉಂಟುಮಾಡುವ ಅನಗತ್ಯ ಕಾವಿನಿಂದ ಮರುಳಾಗದೆ ತಾವು ಯಾರಿಗೆ ವೋಟು ಕೊಡಬೇಕೆಂದು ತೀರ್ಮಾನಿಸಬೇಕಾಗಿದೆ. ಲೂಟಿಗೆ ವೋಟು ಸಾಧ್ಯವೆ?

**-ಕೈಗಾರಿಕೆಗಳ ಉತ್ಪಾದನಾ ವೆಚ್ಚ ಮತ್ತು ಮಾರಾಟದ ಬೆಲೆ ಸಂಸ್ಥೆಯ ವರದಿ**

ಹಿನ್ನೆಲೆ ಚಿತ್ರ : ಔಟ್‌ಲುಕ್ ಕೃಪೆ

---

(೧೯ನೇ ಪುಟದಿಂದ ಮುಂದುವರಿದಿದೆ)

ವಾಣಿಜ್ಯಶಾಸ್ತ್ರವನ್ನು ಕಲಿಯುವುದರಿಂದ ಭವಿಷ್ಯದಲ್ಲಿ ತೊಂದರೆಯಾಗುತ್ತದೆ ಎನ್ನುವ ಮನೋಭಾವನೆ ವಿದ್ಯಾರ್ಥಿಗಳಲ್ಲಿ ಹಾಗೂ ಪೋಷಕರಲ್ಲಿ ಮೂಡಿದೆ. ಗ್ರಾಮೀಣ ಭಾಗಗಳಲ್ಲಿ ಈ ಭಾವನೆ ಮೂಡಲು ವಾಣಿಜ್ಯಶಾಸ್ತ್ರದ ಪಠ್ಯಕ್ರಮದಲ್ಲಿ ದೋಷಗಳೇನಾದರೂ ಇವೆಯೇ ಅಥವಾ ಬೇರಾವುದಾದರೂ ಕಾರಣಗಳಿವೆಯೇ ಎನ್ನುವುದಕ್ಕೆ ಕಾರಣಗಳನ್ನು ಕಂಡುಕೊಳ್ಳಬೇಕಾಗಿದೆ. ಇಂದಿನ ಅಗತ್ಯಗಳನ್ನು ಪೂರೈಸಲು ಪಠ್ಯಕ್ರಮವನ್ನು ಬದಲಿಸಿಕೊಳ್ಳುವುದು ಅಗತ್ಯ.

**ಖಾಸಗಿ ವ್ಯವಸ್ಥಾಪಕ ಮಂಡಳಿಗಳ ಪಾತ್ರ :** ಪದವಿ ಹಂತದ ವಿಜ್ಞಾನ ಮತ್ತು ವಾಣಿಜ್ಯಶಾಸ್ತ್ರ ವಿಷಯಗಳಿಗೆ ಸಂಬಂಧಪಟ್ಟಂತೆ ಇಷ್ಟೊಂದು ಜ್ವಲಂತ ಸಮಸ್ಯೆಗಳಿರುವಾಗ ಖಾಸಗಿ ವ್ಯವಸ್ಥಾಪಕ ಮಂಡಳಿಗಳು ವಹಿಸುತ್ತಿರುವ ಪಾತ್ರವೇನು ? ಈ ಸಮಸ್ಯೆಗಳ ಅರಿವಂತೂ ಖಂಡಿತ ಅವಕ್ಕೆ ಇದೆ. ಕಾರಣ, ಅರ್ಧ ಸಮಸ್ಯೆಗಳನ್ನು ಹುಟ್ಟುಹಾಕಿರುವುದು ಈ ವ್ಯವಸ್ಥಾಪಕ ಮಂಡಳಿಗಳೇ ! 1987ರಿಂದೀಚೆಗೆ ಪ್ರಾರಂಭವಾದ ಯಾವ ಕಾಲೇಜಿಗೂ, ಪಠ್ಯ ವಿಷಯಕ್ಕೂ ಅನುದಾನ ನೀಡುವುದಿಲ್ಲವೆನ್ನುವ ರಾಜ್ಯ ಸರ್ಕಾರದ ನೀತಿಯನ್ನೇ ಸದುಪಯೋಗ ಮಾಡಿಕೊಂಡು ವಂತಿಗೆ ಬರುವಂಥ ವಿಷಯಗಳನ್ನೇ ಪ್ರಧಾನವಾಗಿ ಕಾಲೇಜುಗಳಲ್ಲಿ ಪ್ರಾರಂಭಿಸಲಾಗುತ್ತಿದೆ. ಉದಾಹರಣೆಗೆ, ಬೆಂಗಳೂರು

> ದುಡಿಮೆಯನ್ನು ಆಧಾರವಾಗುಳ್ಳ ಜ್ಞಾನಕ್ಕಿಂತ ಹೆಚ್ಚು ಹರಿತವಾದ ಆಯುಧ ಬೇರೊಂದಿಲ್ಲ
>
> **ಮ್ಯಾಕ್ಸಿಮ್ ಗೋರ್ಕಿ**

ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿ ಬರುವ ಬಹುತೇಕ ಕಾಲೇಜುಗಳ ಖಾಸಗಿ ವ್ಯವಸ್ಥಾಪಕ ಮಂಡಳಿಗಳು ಕಂಪ್ಯೂಟರ್ ವಿಜ್ಞಾನ, ಎಲೆಕ್ಟ್ರಾನಿಕ್ಸ್, ಸಿರಿಕಲ್ಚರ್, ಬಿಬಿಎಂ, ಬಿಎಚ್‌ಎಂ, ಎಂಬಿಎ, ಎಂಸಿಎ ಮುಂತಾದ ಕೋರ್ಸುಗಳಿಗೆ ಜೋತುಬೀಳುತ್ತಿವೆ. ವಿಶ್ವವಿದ್ಯಾಲಯ ಹಾಗೂ ರಾಜ್ಯ ಸರ್ಕಾರಗಳು ಪೂರ್ವಾಪರ ಯೋಚನೆ ಮಾಡದೆ ಇಂತಹ ಕೋರ್ಸುಗಳನ್ನು ಪ್ರಾರಂಭಿಸಲು ವ್ಯವಸ್ಥಾಪಕ ಮಂಡಳಿಗಳಿಗೆ ಅನುಮತಿ ನೀಡುತ್ತಿರುವುದರಿಂದ ಇಂತಹ ಕೋರ್ಸುಗಳು ನಾಯಿಕೊಡೆಗಳಂತೆ ತಲೆ ಎತ್ತಿವೆ. ಇಂಥ ಅನೇಕ ಕಾಲೇಜುಗಳಲ್ಲಿ ಮಂಜೂರಾದ ಸೀಟುಗಳು ಭರ್ತಿಯಾಗುತ್ತಿಲ್ಲವೆನ್ನುವುದು ಜನಜನಿತವಾಗಿದ್ದೂ ವಿಶ್ವವಿದ್ಯಾಲಯ ಮತ್ತು ಸರ್ಕಾರ ಮತ್ತೆ ಮತ್ತೆ ಬಿಬಿಎಂ ಕೋರ್ಸಿಗೆ ಅನುಮತಿ ನೀಡುತ್ತಿದೆ. ಹೀಗೆ ಮಂಜೂರಾದ ಕಾಲೇಜುಗಳನ್ನೇ ಕೆಲವು ಆಡಳಿತ ಮಂಡಳಿಗಳು ಮಾರಿಕೊಳ್ಳುತ್ತಿವೆ ಎಂಬ ಪುಕಾರು ಕೇಳಿಬರುತ್ತಿದೆ. ವಿಶ್ವವಿದ್ಯಾಲಯ ಮತ್ತು ಸರ್ಕಾರ ಈ ನಿಟ್ಟಿನಲ್ಲಿ ವ್ಯಾಪಕವಾದ ತನಿಖೆ ನಡೆಸಿದರೆ ನಿಜಾಂಶವೇನು ಎಂದು ಸಾರ್ವಜನಿಕರಿಗೆ ತಿಳಿಯುತ್ತದೆ. ಪದವಿ ಶಿಕ್ಷಣದ ಘನತೆ ಸ್ವಲ್ಪವಾದರೂ ಹೆಚ್ಚುತ್ತದೆ.

**ಮುಂದೆ :** ಮೇಲೆ ಕಾಣಿಸಿದ ಎಲ್ಲ ಸಮಸ್ಯೆಗಳ ಮತ್ತೊಂದು ಮುಖ ಈಗಾಗಲೇ ಅನೇಕ ವರ್ಷಗಳಿಂದ ಖಾಯಂ ಆಗಿ ಕಾಲೇಜುಗಳ ವಿಜ್ಞಾನ ಹಾಗೂ ವಾಣಿಜ್ಯ ಶಾಸ್ತ್ರದ ಅಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿರುವವರ ಪಾಡೇನು ಎಂಬುದು. ಕಾಲೇಜುಗಳಲ್ಲಿ ಕಾರ್ಯಭಾರ ಕಡಿಮೆಯಾಗುವುದರಿಂದ ಅವರನ್ನು ಕೆಲಸದಿಂದ ತೆಗೆದುಹಾಕಲು ಬರುತ್ತದೆಯೇ ? ಆದ್ದರಿಂದಲೇ ರಾಜ್ಯ ಸರ್ಕಾರ ಮತ್ತು ವಿಶ್ವವಿದ್ಯಾಲಯಗಳು ಕೂಡಲೇ ಕಾರ್ಯಪ್ರವೃತ್ತವಾಗಿ ಈ ಸಮಸ್ಯೆಗಳನ್ನು ಬಗೆಹರಿಸಬೇಕು. ಕನಿಷ್ಠ ಪಕ್ಷ ಯಾವುದೇ ಅನುದಾನಿತ ಕಾಲೇಜಿನಲ್ಲಿ ಅನುದಾನರಹಿತ ಕೋರ್ಸುಗಳು ಇಲ್ಲದಂತೆ ವ್ಯವಸ್ಥೆಯಾಗಬೇಕು. ವಿಶ್ವವಿದ್ಯಾಲಯಗಳು ವಿವಿಧ ಕೋರ್ಸುಗಳಿಗೆ ಹೊಸ ಸ್ವರೂಪ ನೀಡಬೇಕು. ಇಂಥ ಕ್ರಮಕ್ಕೆ ಸರ್ಕಾರ ಯಾವ ಅಡಚಣೆಯನ್ನೂ ಒಡ್ಡದೆ ನವೀಕೃತ ಕೋರ್ಸುಗಳಿಗೆ ಮಾನ್ಯತೆ ನೀಡಿ ಕಾಲೇಜುಗಳಿಗೆ ಅನುದಾನವನ್ನು ನೀಡಬೇಕು. ಆಗ ಮಾತ್ರ ರಾಜ್ಯದಲ್ಲಿ ಉನ್ನತ ಶಿಕ್ಷಣ ಜೀವಂತವಾಗಿರಲು ಸಾಧ್ಯ.

**ಟಿ. ವೆಂಕಟೇಶ ಮೂರ್ತಿ**
ನಂ. 108, 14 'ಪಿ' , 'ಸ್ಕೈಲೈನ್ ಸುರಭಿ', ವಿದ್ಯಾಪೀಠ ರೋಡ್,
ಬನಶಂಕರಿ 3ನೇ ಹಂತ, ಬೆಂಗಳೂರು - 560 085

# ಕದ್ರಿ ಗೋಪಾಲನಾಥ್ - ಅದ್ಭುತ, ರಮಣೀಯ ಸಂಗೀತಗಾರ

***ವಿದೇಶಿ ವಾದ್ಯಗಳನ್ನು ನಮ್ಮ ಸಂಗೀತದ ಚೌಕಟ್ಟಿಗೆ ಅಳವಡಿಸಿಕೊಳ್ಳುವುದು ನವೀನತೆಯ ಸ್ವಾಗತಾರ್ಹ ಆವಿಷ್ಕಾರವೆಂದು ವೀಣೆ ಶೇಷಣ್ಣನವರು ಹೇಳುತ್ತಿದ್ದರಂತೆ. ಆ ಮಾರ್ಗದಲ್ಲಿ ಒಬ್ಬ ಅಪೂರ್ವ ಸಿದ್ಧಹಸ್ತರು ಮಂಗಳೂರಿನ ಸ್ಯಾಕ್ಸೊಫೋನ್ ಗೋಪಾಲನಾಥ್.***

ಸುಮಾರು ಹತ್ತು ವರ್ಷದ ಹಿಂದಿನ ಮಾತು. ಸನ್ಮಾನ್ಯ ಶಿವರಾಮ ಕಾರಂತರು ಒಂದು ದತ್ತಿ ಉಪನ್ಯಾಸವನ್ನು ಬೆಂಗಳೂರಿನ ಗಾಂಧಿ ಭವನದಲ್ಲಿ ನೀಡಿದ ಸಂದರ್ಭ. ವಿಷಯ: ಭಾರತೀಯ ಸಂಸ್ಕೃತಿ. ಅದರಲ್ಲಿ ಚೈತನ್ಯಶೀಲವಾದ್ದು ಯಾವುದು ? ಪೇಲವವಾದ್ದು

## ಪಶು-ಶಿಶು-ಫಣಿ

ಯಾವುದು ಎಂಬುದನ್ನು ಗುರುತಿಸುತ್ತಾ ಕರ್ನಾಟಕ ಸಂಗೀತ ಮತ್ತು ಯಕ್ಷಗಾನಗಳನ್ನು ಉದಾಹರಿಸಿದರು. ಕಲಾವಿದನು ವೈಯಕ್ತಿಕವಾಗಿ ಸೃಜನಶೀಲತೆಯನ್ನು ತನ್ನ ಮಾಧ್ಯಮದ ಮುಖೇನ ಪ್ರಕಟಪಡಿಸುವ ಸಾಧ್ಯತೆ ಇದ್ದಾಗ ಮಾತ್ರ ಅದು ಚೈತನ್ಯಶೀಲ ಎನಿಸಿಕೊಳ್ಳುತ್ತದೆಂದು ಅವರು ವ್ಯಾಖ್ಯಾನಿಸಿದರು. ಅದು ಸಂಸ್ಕೃತಿಯ ಯಾವುದೇ ಪ್ರಕಾರಕ್ಕೂ, ಯಾವಾಗಲೂ ಅನ್ವಯವಾಗುತ್ತದೆಂದು ಸಹ ಹೇಳಿ ಕೆಲವು ನಿದರ್ಶನಗಳನ್ನು ಕೊಟ್ಟರು. ಅಂದು ಅವರು ಹೇಳಿದ ಪ್ರಕಾರ ಕರ್ನಾಟಕ ಸಂಗೀತ ಪೇಲವವಾದ್ದು ಮತ್ತು ಯಕ್ಷಗಾನ ಚೈತನ್ಯಶೀಲವಾದ್ದು. ಏಕೆಂದರೆ ಕರ್ನಾಟಕ ಸಂಗೀತ ನಿಗದಿತವಾದ ಸ್ವರೂಪವುಳ್ಳದ್ದು; ಅದನ್ನು ಪಳಗಿಸಿಕೊಂಡು ಪ್ರಕಟಿಸುವುದಷ್ಟೇ ಸಂಗೀತಗಾರನ ಹಿರಿಮೆ. ಅವನು ಆಚೆ-ಈಚೆ ಸ್ವೇಚ್ಛೆಯಾಗಿ ಸಂಚರಿಸಿ ತನ್ನ ಸೃಜನಶೀಲ ಕೌಶಲ್ಯವನ್ನು ವಿಸ್ತರಿಸಿಕೊಳ್ಳುವ ಅವಕಾಶವಿಲ್ಲ. ಎಲ್ಲಾ ಲೆಕ್ಕಾಚಾರದ ವಿಷಯ. ಆದರೆ ಯಕ್ಷಗಾನವು ಹಾಗಲ್ಲ. ಅಲ್ಲಿ ವೈಯಕ್ತಿಕ ಪ್ರತಿಭೆಗೆ ಮುಕ್ತ ಅವಕಾಶವಿದೆ.

ಮಾನ್ಯ ಕಾರಂತರು ಅಂದು ಮಾಡಿದ ಒಂದು ವಿಮರ್ಶೆ ಹೀಗಿತ್ತು: ಒಬ್ಬ ಸಂಗೀತಗಾರನು ಬಲವಾಗಿ ತೊಡೆ ತಟ್ಟಿಕೊಳ್ಳುತ್ತಾ 'ಜಗದೋದ್ಧಾರನ ಆಡಿಸಿದಳು ಯಶೋದೆ' ಹಾಡುವಾಗ ಸೃಜನಶೀಲತೆ ಎಲ್ಲಿದೆ ? ಅವರ ಗುರು ಹೇಳಿಕೊಟ್ಟಂತೆ ಈತ ಹಾಡುತ್ತಾನೆ. ಇವನ ಶಿಷ್ಯ ನಾಳೆ ಹಾಗೇ ಹಾಡುತ್ತಾನೆ. ವೈಯಕ್ತಿಕ ಪ್ರತಿಭೆ ಎಂಬುದೇನೂ ಇಲ್ಲ. ಆದ್ದರಿಂದ ಕಲಾಪ್ರಕಾರವಾಗಿ ಕರ್ನಾಟಕ ಸಂಗೀತಕ್ಕೆ ಉಚ್ಚಸ್ಥಾನವಿಲ್ಲ.

ಕರ್ನಾಟಕ ಸಂಗೀತವನ್ನು ಹೀಗಳೆಯಬೇಕೆಂದಾಗಲಿ ಯಕ್ಷಗಾನವನ್ನು ಆಟ್ಟಕ್ಕೇರಿಸಬೇಕೆಂದಾಗಲಿ ಕಾರಂತರು ಹಾಗೆ ಹೇಳಿದ್ದರೆಂದು ಭಾವಿಸಲಾಗದು. ಚಲನಶೀಲತೆ ಮತ್ತು ಪ್ರತಿಭೆಯಿಂದ ಸಂಸ್ಕೃತಿ ಹೇಗೆ ವಿಕಾಸವಾಗುತ್ತದೆಂದು ವಿವರಿಸುವುದು ಅವರ ಉದ್ದೇಶವಾಗಿತ್ತು. ಇದೇ ಆಗಸ್ಟ್ ೮ರಂದು ಬೆಂಗಳೂರಿನ ಮಲ್ಲೇಶ್ವರ ಸಂಗೀತ ಸಭೆಯಲ್ಲಿ ಕದ್ರಿ ಗೋಪಾಲನಾಥ್ ಸ್ಯಾಕ್ಸೋಫೋನ್ ನುಡಿಸಿದ್ದನ್ನು ಕೇಳಿದಾಗ ಕಾರಂತರ ಮಾತುಗಳು ಪದೇ ಪದೇ ಗುಣಿಗುಣಿಸುತ್ತಿದ್ದುವು. ಕದ್ರಿಯವರ ಸುಶ್ರಾವ್ಯ ಮಧುರ ಸಂಗೀತವು ಒಂದು ನಿರ್ಮಿತ ಚೌಕಟ್ಟಿನಲ್ಲಿ ಸುಮ್ಮನೆ ಮರುಹುಟ್ಟು ಪಡೆದದ್ದೆಂಬ ಭಾವ ಖಂಡಿತ ಯಾರಲ್ಲಿಯೂ ಮೂಡುವಂತಿರಲಿಲ್ಲ. ಆ ಕಲಾಪ್ರಕಾರದಲ್ಲಿ ಪ್ರವೇಶ ಪಡೆಯದಿದ್ದವರ ಪ್ರತಿಕ್ರಿಯೆ ಬೇರೆಯೇ ಇರು



ತ್ತದೇನೋ; ಆದರೆ ಕರ್ನಾಟಕ ಸಂಗೀತದ ಅ, ಆ, ಇ, ಈ ಬಲ್ಲವರು ಕದ್ರಿಯವರ ಸೃಷ್ಟಿ ಪ್ರಕ್ರಿಯೆಯನ್ನು ಗಮನಿಸದೆ ಇರುವಂತಿರಲಿಲ್ಲ. ಅಂ, ಅಃ ತನಕ ಬಲ್ಲವರು ಏನು ಹೇಳಬಹುದಿತ್ತೋ ಪ್ರಸ್ತುತ ಲೇಖಕನಿಗೆ ತಿಳಿದಿಲ್ಲ.

ಕದ್ರಿಯವರು ಅಂದು ನುಡಿಸಿದ ಹಲವು ಕೀರ್ತನೆಗಳಲ್ಲಿ 'ಎಂದುರೋ ಮಹಾನುಭಾವುಲು', 'ರಘುವಂಶ ಸುಧಾಂಬುಧಿ' ಮತ್ತು 'ಮೋಕ್ಷಮು ಗಲದಾ' ಎಂಬ ಮೂರು ಕೃತಿಗಳು ಸೇರಿದ್ದುವು. ಅವು ಮೂರೂ ಬೇರೆ ಬೇರೆ ಭಾವಗಳನ್ನು ಬಿತ್ತರಿಸುವಂಥವು. ಮನದಾಳದಿಂದ ಹೊಮ್ಮಿದ ಗೌರವವನ್ನು ವಿನಯದಿಂದ ಸಮರ್ಪಿಸುವುದು, ಸಂತೃಪ್ತಿಯನ್ನು ಹೊರಸೂಸುವುದು ಮೊದಲ ಕೃತಿಯ ಭಾವ. ಗಾಂಭೀರ್ಯ, ಸಾರ್ವಭೌಮತ್ವಗಳನ್ನು ಗತ್ತಿನಿಂದ ಮೆರೆಸುವುದು ಎರಡನೆಯದರ ಭಾವ. ಮೂರನೆಯದು ಆಂತರ್ಯದ ತುಮುಲ, ದೈನ್ಯ ಮತ್ತು ಮಹತ್ವಾಕಾಂಕ್ಷೆಯ ಬಲವತ್ತರವಾದ ಒತ್ತಡಗಳನ್ನು ಒಳಗೊಂಡಿದೆ. ಇವಿಷ್ಟೇ ಆ ಕೃತಿಗಳ ಭಾವವೆಂದು ತಾತ್ಪರ್ಯವಲ್ಲ. ಅವಕ್ಕೆ ಬೇರೆ ಆಶಯಗಳೂ ಇವೆಯೆಂಬುದು ಆ ಕೃತಿಗಳನ್ನು ಸಂಗೀತಗಾರರು ನಿರ್ವಹಿಸುವಾಗ ಮೂಡಿಬರುತ್ತದೆ. ಸಾಂಪ್ರದಾಯಿಕ ಅರ್ಥದಲ್ಲಿ ಮೋಕ್ಷಕ್ಕಾಗಿ ಹಾತೊರೆಯದಿದ್ದವರೂ ಕದ್ರಿಯವರು 'ಮೋಕ್ಷಮು ಗಲದಾ' ನುಡಿಸಿದಾಗ, ಆ ರಾಗದ ಆಲಾಪನೆಯಲ್ಲಿ ಭಾವದ ಅಂತಸ್ಸತ್ವವನ್ನು ಚಿಮ್ಮಿಸಿದಾಗ, ಒಂದು ರೀತಿಯ ಪರಿಪೂರ್ಣತೆಯ ಹಾದಿಯನ್ನು ತುಳಿಯ ಹೊರಟಿದ್ದೇವೇನೋ ಎಂಬ ಭೂಮಿಕೆಯಲ್ಲಿದ್ದಂತೆ ತೋರುತ್ತಿತ್ತು. ಅದು ಕದ್ರಿಯವರ ವೈಯಕ್ತಿಕ ಸೃಜನಶೀಲತೆಯ ಸಾಮಗ್ರಿಯಿಂದಲ್ಲದೆ ಬೇರಾವುದರಿಂದ ಪ್ರೇರಿತವಾಗಿದ್ದಿರಲು ಸಾಧ್ಯ ? ಕಚೇರಿಯ ಕೊನೆಯಲ್ಲಿ ಸಂಗೀತಸಭೆಯ ಕಾರ್ಯದರ್ಶಿಯವರು ಹೇಳಿದಂತೆ ಅದು ಅದ್ಭುತ, ಅವಿಸ್ಮರಣೀಯ ಅನುಭವ ನೀಡುವಂತಹ ಕಲಾಸೃಷ್ಟಿಯಾಗಿತ್ತು.

ಈ ಸಂಗೀತದ ಇನ್ನೊಂದು ಮಗ್ಗುಲು ತಂತ್ರ ಮತ್ತು ಚಮತ್ಕಾರವೋ ಎಂಬ ರೀತಿಯಲ್ಲಿ ಪ್ರತಿಪಾದಿಸಲಾಗುತ್ತದೆ. ಕಲ್ಪನಾ ಸ್ವರಗಳ ಪ್ರಸ್ತಾರ ಹಲವು ವೇಳೆ ಹೇಗೆ ರೂಪಿತವಾಗುತ್ತದೆಂದರೆ ಮೂಲಕೃತಿಯ ಭಾವಕ್ಕೂ ಈ ಚಮತ್ಕಾರ - ಲೆಕ್ಕಾಚಾರಗಳ ಬಿಗಿ ಪ್ರದರ್ಶನಕ್ಕೂ ಸಂಬಂಧವೇ ಇಲ್ಲವೇನೋ ಎಂಬಂತೆ. ಅಲ್ಲಿ ಭಾವಕ್ಕಿಂತಲೂ ಅಬ್ಬರವೇ ಜಾಸ್ತಿಯಾಗಿಬಿಡುವ ಸಂದರ್ಭಗಳು ಇಲ್ಲದಿಲ್ಲ. ಕದ್ರಿ ಗೋಪಾಲನಾಥರು 'ಮೋಕ್ಷಮು ಗಲದಾ' ಕೃತಿಯನ್ನು ಕೊಂಡೊಯ್ದುದು ಆ ಹಂತಕ್ಕೆ. ಇದರಲ್ಲಿ ಅವರಿಗೆ ಸರಿಸಾಟಿಯಾಗಿ ನಿಂತವರು ಪಿಟೀಲು ವಾದಕಿ ಶ್ರೀಮತಿ ಕನ್ಯಾಕುಮಾರಿ. ಎಲ್ಲಿ ಕದ್ರಿಯೋ ಅಲ್ಲಿ ಕನ್ಯಾಕುಮಾರಿ ಇರಲೇಬೇಕೆಂಬ ಪ್ರತೀತಿ ಈಗಾಗಲೇ ಕರ್ನಾಟಕ ಸಂಗೀತದ ವಲಯದಲ್ಲಿ ಹಬ್ಬಿದೆ. ಅವರಿಬ್ಬರ ತಾಳಮೇಳ ಅಂತಹದ್ದು. ಮೈಕಿನವರ ಜೊತೆ ತಕರಾರು ಮಾಡುತ್ತಲೇ ಆಕೆ ಕದ್ರಿಯವರಿಗೆ ಸಮನಾಗಿ ಮಿಂಚುತ್ತಿದ್ದರು.

ಸಂಗೀತಶಾಸ್ತ್ರವನ್ನು ಆಳವಾಗಿ ಅಭ್ಯಸಿಸುವವರು ಕದ್ರಿ ಕಚೇರಿಯನ್ನು ಹೇಗೆ ಮಾಪನ ಮಾಡಿದರೂ ಸರಿಯೆ, ಅದನ್ನು ಸವಿದ ನಾಲ್ಕುನೂರು ಮಂದಿ ಒಂದು ಸುಂದರ ಸಂಜೆಯ ಅನುಭವ ಪಡೆದದ್ದು ಗೌಣವಲ್ಲ.

○○

# ಯಾವುದು ಗ್ರಹ ? ಯಾವುದು ನಕ್ಷತ್ರ ?

ಇದು ತಲೆ ಎತ್ತಿ ಆಕಾಶ ನೋಡಿದವರಿಗೆ ಮೂಡುವ ಮೊದಲ ಪ್ರಶ್ನೆ. ಇದಕ್ಕೆ ಉತ್ತರ ಪಡೆಯುವ ಅವಕಾಶ ಸೆಪ್ಟೆಂಬರ್ ತಿಂಗಳಲ್ಲಿದೆ. ಕೇವಲ ಉತ್ತರ ಮಾತ್ರವಲ್ಲ, ಗ್ರಹಗಳ ಚಲನೆ ಕುರಿತ ಇತರ ವಿಶ್ಲೇಷಣೆಗಳ ವೀಕ್ಷಣೆಗೂ ಅವಕಾಶವಿದೆ.

ಸೆಪ್ಟೆಂಬರ್ ತಿಂಗಳಲ್ಲಿ ವೃಶ್ಚಿಕ (ಕಳೆದ ತಿಂಗಳು ಗಣಪತಿ ಎಂದು ಕರೆದಿದ್ದೆವಲ್ಲವೇ ?) ರಾಶಿಯದೇ ಸೊಬಗು. ತುಲಾ

ಡಾ॥ ಬಿ. ಎಸ್. ಶೈಲಜ

(ಗಣಪತಿಯ ಕಿರೀಟ ಎಂದು ಕರೆದಿದ್ದೆವು) ರಾಶಿಯಲ್ಲಿದ್ದ ಕೆಂಪು ಮಂಗಳ ಗ್ರಹ, ಈ ತಿಂಗಳಲ್ಲಿ ಸೊಂಡಿಲಿಗೇ ಜಾರಿದೆ. ಅಂದರೆ ವೃಶ್ಚಿಕ ರಾಶಿಯ ಜ್ಯೇಷ್ಠಾ ನಕ್ಷತ್ರದ ಸಮೀಪವೇ ಕಾಣುವುದು. ಆಕಾಶ ಶುಭ್ರವಾಗಿದ್ದಾಗ ದಕ್ಷಿಣ ದಿಕ್ಕಿಗೆ ತಿರುಗಿ ನಿಂತು ಸ್ವಲ್ಪ ತಲೆ ಎತ್ತಿ ನೋಡಿ. ಎರಡು ಕೆಂಪು ಚುಕ್ಕಿಗಳು ಜೋಡಿ ಹಕ್ಕಿಗಳಂತೆ ಕಾಣುವುವು. ಒಂದು ಮಾತ್ರ ಮಿನುಗುತ್ತಿದೆ. ಅದು ಜ್ಯೇಷ್ಠಾ; ಇನ್ನೊಂದು ಮಂಗಳ- ಮಿನುಗದೇ ಪ್ರಕಾಶಿಸುತ್ತದೆ. ಜ್ಯೇಷ್ಠಾ ನಕ್ಷತ್ರದ ಪಾಶ್ಚಾತ್ಯ ಹೆಸರು - ಅಂಟಾರೆಸ್. ಅಂದರೆ Antiares. ಆರೆಸ್‌ಗೆ ಪ್ರತಿಸ್ಪರ್ಧಿ ಎಂದು. ಆರೆಸ್ ಎಂಬುದು ಗ್ರೀಕರ ಯುದ್ಧದೇವತೆಯ ಹೆಸರು. ಅದೇ ಮಂಗಳದ ಹೆಸರು. ಈ ನಕ್ಷತ್ರಕ್ಕೆ ಮಂಗಳದ ಪ್ರತಿಸ್ಪರ್ಧಿ ಎಂದೇಕೆ ಹೆಸರು ಎಂದು ವಿವರಿಸಲು ಈಗ ಆಕಾಶ ನೋಡಿದರೆ ಸಾಕು.

ಇನ್ನೆರಡು ಗ್ರಹಗಳು ಗುರು ಮತ್ತು ಶನಿ ಸೂರ್ಯಾಸ್ತದ ಒಂದೆರಡು ಗಂಟೆಗಳ ನಂತರ ಒಂದಾದಮೇಲೊಂದು ಉದಯಿಸುತ್ತವೆ. ಗುರುತಿಸಲು ಪ್ರಯತ್ನಿಸಿ. ಉತ್ತರ ತಿಂಗಳ ಕೊನೆಗೆ ಸಿಗುತ್ತದೆ

ಆಕಾಶ ಶುಭ್ರವಾಗಿದ್ದಾಗ ಚಂದ್ರನೂ ಇಲ್ಲದಾಗ ಆಕಾಶಗಂಗೆಯನ್ನು ಗುರುತಿಸಿ. ಧನುರಾಶಿಯಿಂದ ಉತ್ತರದ ರಾಜಹಂಸ (ಸಿಗ್ನಸ್) ವನ್ನೂ ದಾಟಿಹೋಗುವ ಇದು ಬರುವ ತಿಂಗಳ ಹೊತ್ತಿಗೆ ಪಶ್ಚಿಮದಂಚಿಗೆ ಸರಿಯುತ್ತದೆ

ಉತ್ತರ ದಿಕ್ಕಿಗೆ ತಿರುಗಿ. ನೆತ್ತಿಯಿಂದ ಸ್ವಲ್ಪ ಉತ್ತರಕ್ಕಿರುವ ನಕ್ಷತ್ರಪುಂಜವೇ ಹರ್‌ಕ್ಯುಲೆಸ್. ಗ್ರೀಕರ ಮಹಾವೀರನ ಹೆಸರು ಅದು. ಆ ನಕ್ಷತ್ರಗಳ ಹಂಚಿಕೆಯಲ್ಲಿ ಚಿಟ್ಟೆಯ ಆಕೃತಿ ಕಾಣಬಹುದು. ಏನನ್ನು ಬೇಕಾದರೂ ಕಲ್ಪಿಸಿಕೊಳ್ಳಬಹುದು. ದಿವಂಗತ ಆರ್. ಎಲ್. ನರಸಿಂಹಯ್ಯನವರು ಇಲ್ಲಿ ಭೀಮನನ್ನೇ

ಮಂಗಳ- ಈ ಮೂರರ ವಿನ್ಯಾಸವನ್ನು ಗಮನಿಸಿ. ದುರ್ಬೀನು, ದೂರದರ್ಶಕ ಇರುವವರು 17ರಂದು ಚಂದ್ರನಿಂದ ಸುಮಾರು ಅರ್ಧ ಡಿಗ್ರಿ ದಕ್ಷಿಣಕ್ಕೆ ಯುರೇನಸನ್ನು ನೋಡಬಹುದು. ಯಾವ ಚುಕ್ಕೆ ಗ್ರಹ ಎಂಬುದನ್ನು ಪತ್ತೆ ಹಚ್ಚುವ ವಿಧಾನ ಖಾತ್ರಿಯಾಗಿದ್ದರೆ




ಕಲ್ಪಿಸಿಕೊಂಡರು. ಹನುಮಾನನೂ ಆಗಬಹುದಲ್ಲವೇ ? ಗದೆ ಹಿಡಿದು ಸದಾ ಜಾಗೃತನಾಗಿ ಬಾಲ ಎತ್ತಿಕೊಂಡು ನಿಂತ ಈ ರಾಮನಬಂಟನಿಗೆ ಆಕಾಶದಲ್ಲೊಂದು ಸ್ಥಾನ ಏಕಿರಬಾರದು ?

ಹರ್‌ಕ್ಯುಲೆಸ್ ಪಶ್ಚಿಮಕ್ಕಿರುವುದು ಬೂಟೀಸ್ (ಸಹದೇವ ಎಂದೂ ಹೆಸರಿಸಿದ್ದಾರೆ). ಅಲ್ಲಿಯ ಇನ್ನೊಂದು ಕೆಂಪು ನಕ್ಷತ್ರವೇ ಸ್ವಾತಿ- ಆರ್ಕ್ಟ್ಯುರಸ್.

ನಮ್ಮ ಮಾರ್ಗದರ್ಶಿ ಚಂದ್ರ ತಿಂಗಳ ಮೊದಲವಾರ ಬೆಳಗಿನ ಪಾಳಿಯಲ್ಲಿದ್ದಾನೆ. ಸೆಪ್ಟೆಂಬರ್ 1ರಂದು ಚಂದ್ರನ ಸಮೀಪ ಕಾಣುವ ಗ್ರಹವೇ ಶನಿ. ಎರಡರಂದು ಪಕ್ಕದ ರೋಹಿಣಿ ಯೊಡನೆ ಕಣ್ಣುಮುಚ್ಚಾಲೆ. ಭೂಮಿಯ ಮೇಲೆ ಕೆಲವು ಭಾಗಗಳಿಂದ ರೋಹಿಣಿ ಚಂದ್ರನ ಹಿಂದೆ ಕಣ್ಮರೆಯಾಗಿ ಹೊರ ಬರುವುದನ್ನು ಕಾಣಬಹುದು. ಈ ಆಟ್ಟಾದನೆ ಪುನಃ 30ರಂದೂ ನಡೆಯಲಿದೆ. ಸೆಪ್ಟೆಂಬರ್ 7ರಂದು ಚಂದ್ರ, ಶುಕ್ರ ಜೋಡಿ.

ಒಂಭತ್ತರ ಅಮಾವಾಸ್ಯೆಯ ''ರಜಾ'' ದ ನಂತರ ಚಂದ್ರ ಸಂಜೆಯ ಪಾಳಿಗೆ ಬರುವುದು ಹನ್ನೊಂದನೇ ತಾರೀಖಿನ ನಂತರ. 15 ಮತ್ತು 16 ಈ ದಿನಗಳಲ್ಲಿ ಚಂದ್ರ, ಜ್ಯೇಷ್ಠಾ ಮತ್ತು

23ರಂದು ಸಂಜೆ 5ಗಂಟೆಗೆ ಸೂರ್ಯ ವಿಷುವದ್ ಬಿಂದುವನ್ನು ದಾಟಿದಾಗ ವೈಜ್ಞಾನಿಕವಾಗಿ ದಕ್ಷಿಣಾಯನ ಆರಂಭ. ಅಂದು ಹಗಲು ರಾತ್ರಿಗಳೆರಡೂ ದಿನವನ್ನು ಸಮನಾಗಿ ಹಂಚಿಕೊಳ್ಳುತ್ತವೆ

'ಹುಣ್ಣಿಮೆ' ಎಂಬುದು ಖಗೋಳ ವಿಜ್ಞಾನದ ಪ್ರಕಾರ ಒಂದು ಕ್ಷಣ. ದಿನವಲ್ಲ. 25ರ ಸಂಜೆ 4 ಗಂ. 21 ನಿ.ಕ್ಕೆ ಈ ಕ್ಷಣ.

26ರಂದು ಚಂದ್ರನ ಜೊತೆಗೂಡುವ ಗ್ರಹವೇ ಗುರು. ತಿಂಗಳ ಆದಿಭಾಗದಲ್ಲಿ ನೀವು ಗುರುವನ್ನು ಹುಡುಕಲು ಪ್ರಯತ್ನಿಸಿದ ಪರೀಕ್ಷೆಯ ಫಲಿತಾಂಶ ಅಂದು ದೊರಕೀತು. ಹಾಗೆಯೇ 28ರಂದು ಚಂದ್ರನ ಒಡನಾಡಿಯಾಗುವುದು ಶನಿಗ್ರಹ. ನಿಮ್ಮ ಪರೀಕ್ಷಾ ಪತ್ರಿಕೆಯ ಎರಡನೇ ಪ್ರಶ್ನೆಯ ಉತ್ತರಕ್ಕೆ ಅಂದು ಉತ್ತರ ಲಭ್ಯ.

ಡಾ॥ ಬಿ. ಎಸ್. ಶೈಲಜ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್
ಶ್ರೀ ಟಿ. ಚೌಡಯ್ಯ ರಸ್ತೆ, ಬೆಂಗಳೂರು - 560 001



# ಗಿರೀಶ ಕಾರ್ನಾಡ

ಗಿರೀಶ ಕಾರ್ನಾಡರು ಉತ್ತಮ ನಾಟಕಕಾರರಲ್ಲೊಬ್ಬರು ಎಂಬ ವಿಚಾರ ಎಲ್ಲರಿಗೂ ಗೊತ್ತಿರುವ ವಿಷಯವೇ. ಈ ಲೇಖನ ಅವರ ನಾಟಕಗಳನ್ನು ಕುರಿತಾದ ಅಧ್ಯಯನವಲ್ಲ. ಬದಲಾಗಿ ಅವರ ಸಾಮಾಜಿಕ ಹಾಗೂ ರಾಜಕೀಯ ಕಳಕಳಿ, ಬದ್ಧತೆಗಳ ಕುರಿತಾಗಿ; ಸಮಾಜದಲ್ಲಿ ಯಾವುದೇ ಬಗೆಯ ಸಂದಿಗ್ಧ ಪರಿಸ್ಥಿತಿ ಒದಗಿದಾಗಲೂ ಅವರು ಹೇಗೆ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ ಎಂಬುದರ ವಿಷಯವಾಗಿ.

ಸ್ವಾತಂತ್ರ್ಯೋತ್ತರ ಭಾರತದಲ್ಲಿ ಲೇಖಕ ಮತ್ತು ಅವನ ಸಾಮಾಜಿಕ ಜವಾಬ್ದಾರಿಗಳು ಕುರಿತಾದ ಚರ್ಚೆಗಳು ಸಾಕಷ್ಟು ನಡೆದಿವೆ. ನಡೆಯುತ್ತಲೇ ಇರಬೇಕಾದ ಚರ್ಚೆ ಇದು. ಲೇಖಕನ ವ್ಯಕ್ತಿತ್ವ ಈ ರೀತಿಯ ಸಾಮಾಜಿಕ ಬದ್ಧತೆಗಳು, ರಾಜಕೀಯ ನಿಲುವುಗಳು ಇಲ್ಲದೆ ಅಸಂಪೂರ್ಣ. ಲೇಖಕ ತನ್ನ ಸುತ್ತಲ ಜನತೆಯ ನೋವು, ಏಕಾಕಿತನ, ಅಸಹಾಯಕತೆ ಇವುಗಳೆಲ್ಲದರ ಭಾಗವಾಗುತ್ತಾನೆ. ಲೇಖಕನ ಬದ್ಧತೆ ಬದುಕಿಗೆ ಮಾತ್ರ, ಭವಿಷ್ಯಕ್ಕೆ ಮಾತ್ರ; ಯಾವ ವ್ಯವಸ್ಥಿತ ರಾಜಕೀಯ ಪಕ್ಷಕ್ಕೂ ಅಲ್ಲ. ಯಾವ ರಾಜಕೀಯ ಸಿದ್ಧಾಂತದ ವಕ್ತಾರನೂ ಅಲ್ಲ ಒಬ್ಬ ಲೇಖಕ. ಹೀಗಾಗಿ ಲೇಖಕನೊಬ್ಬ ಸ್ವ ಇಚ್ಛೆಯಿಂದಲೇ ಏಕಾಕಿಯಾಗಿರುತ್ತಾನೆ.

ಗಿರೀಶರು ಎಂದೂ ಕೂಡ ವೈಯಕ್ತಿಕ ಮಟ್ಟದಲ್ಲಿ ವಿವಾದಗಳನ್ನು ಎತ್ತಿಯೂ ಇಲ್ಲ ಅಥವಾ ಅಂಥ ವಿವಾದಗಳಲ್ಲಿ ಭಾಗವಹಿಸುವುದೂ ಇಲ್ಲ. ಈ ದೃಷ್ಟಿಯಲ್ಲಿ ಒಂದು ಬಗೆಯ ಅಂತರವನ್ನು ಕಾಪಾಡಿಕೊಂಡು ಬಂದಿದ್ದಾರೆ. ಗಿರೀಶ್ ಒಂದು ಬಗೆಯ ನಿರ್ಲಿಪ್ತತೆಯಲ್ಲಿ ಬದುಕಬಲ್ಲರು. ಹಾಗೆಂದ ಮಾತ್ರಕ್ಕೆ 'ಅಂದರಿಕು ಮಂಚಿವಾಡು' ಎಂಬ ಅರ್ಥವಲ್ಲ. ಅನವಶ್ಯಕವಾಗಿ ಕಸಿವಿಸಿಗಳು, ಚಡಪಡಿಕೆಗಳು ಉಂಟುಮಾಡುವ ಸಂಬಂಧಗಳಿಂದ ದೂರವಿದ್ದುಬಿಡುತ್ತಾರೆ ಎಂದು ಮಾತ್ರ.

ಗಿರೀಶರ ಬಗ್ಗೆ ಹೆಮ್ಮೆಯುಂಟಾಗುವುದು ಅವರು ಅತ್ಯಂತ ವಿವಾದಾಸ್ಪದ, ಅಪ್ರಿಯ ವಿಷಯಗಳ, ಸಂದರ್ಭಗಳ ಕುರಿತಾಗಿ ತಾಳುವ ನಿಲುವುಗಳಿಂದ. ಅವರು ತೋರುವ ದಿಟ್ಟತನ ಹಾಗೂ ತೆಗೆದುಕೊಳ್ಳುವ ರಿಸ್ಕ್‌ಗಳಿಂದ. ಈ ವಿಷಯಗಳು ಕೋಮುವಾದ, ಭಾಷೆ, ಸಾಹಿತ್ಯ ಯಾವುದೇ ಇರಬಹುದು. ಸುಮಾರು ಹತ್ತು ವರ್ಷಗಳಿಂದ ಈಚೆಗೆ ಈ ಎಲ್ಲ ವಿಷಯವೂ ಒಂದಲ್ಲ ಒಂದು ರೀತಿ ನಮ್ಮನ್ನು ಕಾಡಿವೆ. ನಮ್ಮ ಬದುಕನ್ನು ಕದಡಿವೆ. ಈ ದೇಶದ ಭವಿಷ್ಯದ ಕುರಿತಾಗಿ ಗಂಭೀರವಾಗಿ ಚಿಂತಿಸುವವರೆಲ್ಲರ ಮಾನಸಿಕ ಸಮತೋಲ ತಪ್ಪಿಸಿದೆ. ಹಾಗಿರುವಾಗ ಅಂತರರಾಷ್ಟ್ರೀಯ ಖ್ಯಾತಿಯ ಲೇಖಕ, ಚಿತ್ರ ನಿರ್ದೇಶಕ ಎಂದು ಹೆಸರು ಮಾಡಿರುವ ಗಿರೀಶರು ಇವೆಲ್ಲದರಿಂದ ದೂರವಿದ್ದು, ಸಂಭಾವಿತನಾಗಿ, 'ಗೌರವಾನ್ವಿತ ಸತ್ಪಜೆ' ಯಾಗಿ ಇದ್ದುಬಿಡಬಹುದಿತ್ತು. ವರ್ಷಕ್ಕೋ, ಎರಡು ವರ್ಷಕ್ಕೋ ಒಂದು ನಾಟಕವನ್ನೋ, ಒಂದು ಚಿತ್ರವನ್ನೋ ನೀಡುತ್ತ ಆರಾಮವಾಗಿ, ತೃಪ್ತಜೀವನ ನಡೆಸಿಬಿಡಬಹುದಿತ್ತು. ಆದರೆ ಹಾಗೆ ಮಾಡದೆ ಕಠಿಣ ನಿಲುವುಗಳನ್ನು ತಾಳಿದ್ದಾರೆ.

* * *

1990ರಲ್ಲಿ ಬಿ.ಜೆ.ಪಿ. ಪಕ್ಷವು ಎಲ್. ಕೆ. ಅಡ್ವಾನಿ ಅವರ ನೇತೃತ್ವದಲ್ಲಿ ರಥಯಾತ್ರೆ ಕೈಗೊಂಡಿತು. ಅಯೋಧ್ಯಾ ದುರಂತಕಾಂಡದ ಪ್ರಥಮ ಅಧ್ಯಾಯ ಅದು. ಇಡೀ ದೇಶದಲ್ಲಿ ಕೋಮುವಾದದ ವಿಷಗಾಳಿ ಹಬ್ಬಿತ್ತು. 'ಮಂದಿರ ವಿರೋಧಿ- ದೇಶದ್ರೋಹಿ', 'ಹಿಂದೂ ವಿರೋಧಿ' ಎಂದು ಈ ರಥಯಾತ್ರೆಯನ್ನು ವಿರೋಧಿಸುವವರನ್ನೆಲ್ಲ ನಿಂದಿಸುತ್ತ, ಬೆದರಿಸುತ್ತ ಕೆಲವೊಮ್ಮೆ ಅಂಥವರ ಮೇಲೆ ಹಲ್ಲೆ ನಡೆಸುತ್ತಿದ್ದ ಕಾಲ ಅದು. ಆಗ ಈ ಶಕ್ತಿಗಳ ವಿರುದ್ಧ ದನಿ ಎತ್ತುವುದು ಎಂದರೆ ನಿಜವಾದ ಎದೆಗಾರಿಕೆಯೇ ಹೌದು. ಹಾಗಿದ್ದಾಗ ಗಿರೀಶರು ತಮ್ಮ ನಿಲುವನ್ನು ಸ್ಪಷ್ಟಮಾತುಗಳಲ್ಲಿ, ಕೃತಿಯಲ್ಲಿ ತೋರಿದರು. ಟಿ.ವಿ. ಸಂದರ್ಶನವೊಂದರಲ್ಲಿ ಬಿ.ಜೆ.ಪಿಯನ್ನು ಧೈರ್ಯವಾಗಿ ಖಂಡಿಸಿದರು. ಮೆರವಣಿಗೆಗಳಲ್ಲಿ ಭಾಗವಹಿಸಿದರು. ಇವೆಲ್ಲದರ ಫಲವಾಗಿ ಅವರ ಮನೆಯ ಮೇಲೆ ಕಲ್ಲು ಬಿದ್ದು ಗಾಜು ಪುಡಿಪುಡಿಯಾಯಿತು. ಬೆದರಿಕೆಯ ಪತ್ರಗಳು, ದೂರವಾಣಿ ಕರೆಗಳು ಬಂದವು. ಪುಂಡಾಟಿಕೆ ಮತ್ತು ಅಶ್ಲೀಲತೆ ಅವುಗಳ ಸಾರಾಂಶ.

1992ರಲ್ಲಿ ಈ ದುರಂತದ ಎರಡನೆ ಹಾಗೂ ಅಂತಿಮ ಅಧ್ಯಾಯವಾಗಿ ಮಸೀದಿ ಕೆಡವಲಾಯಿತು. 'ರಾಷ್ಟ್ರದ ಸ್ವಾಭಿಮಾನ'ವನ್ನು ಕಾಪಾಡಿದ ಹೆಮ್ಮೆಯಲ್ಲಿ ಸಂಘ ಪರಿವಾರ ಬೀಗಿತು. ಪೇಜಾವರ ಸ್ವಾಮಿಗಳಂಥ ಧರ್ಮಗುರುಗಳು ಕೆಡವಲ್ಪಟ್ಟ ಸ್ಥಳದಲ್ಲಿ ಹನುಮಂತ, ಗಣಪತಿ ವಿಗ್ರಹಗಳು ಪತ್ತೆಯಾದುವೆಂದು ಘೋಷಿಸಿ ಸಂಭ್ರಮಿಸಿದರು. ಹೀನ ರಾಜಕೀಯ ಮತ್ತು ಹಿಂಸಾತ್ಮಕ ಧರ್ಮಗಳ ನಡುವಿನ ಅನೈತಿಕ ಸಂಬಂಧ ಗರಿಷ್ಠ ಮಟ್ಟವನ್ನು ತಲುಪಿದ ದಿನಗಳು ಅವು. ಒಂದೇ ಹೊಡೆತಕ್ಕೆ ಮಸೀದಿಯನ್ನಷ್ಟೇ ಅಲ್ಲ, ಈ ರಾಷ್ಟ್ರದ ಭವಿಷ್ಯದ ಕನಸುಗಳನ್ನೆಲ್ಲ ನುಚ್ಚುನೂರು ಮಾಡಿದ ಘಟನೆ ಅದು. ದೇಶಾದ್ಯಂತ ಪ್ರಗತಿಪರ ಲೇಖಕರು, ಕಲಾವಿದರು, ಚಿಂತಕರು ಈ ಭಯಂಕರ ಅನಾಹುತದ ಬಗ್ಗೆ ಪ್ರತಿಭಟನೆ ವ್ಯಕ್ತಪಡಿಸಿದರು. ಅವ್ಯಾಹತವಾಗಿ ಕಾರ್ಯಕ್ರಮಗಳನ್ನು ನಡೆಸಿ ಈ ಹೇಯಕೃತ್ಯವನ್ನು ಖಂಡಿಸಿದರು. ಇಂಥವರಲ್ಲಿ ಪ್ರಮುಖ ಪಾತ್ರ ವಹಿಸಿದವರು ಗಿರೀಶರು.

* * *

ಹುಬ್ಬಳ್ಳಿಯ ಈದ್ಗಾ ಮೈದಾನದಲ್ಲಿ ರಾಷ್ಟ್ರಧ್ವಜ ಹಾರಿಸಿದರೆ ಮಾತ್ರ ಈ ದೇಶದ ಮುಸ್ಲಿಮರು ತಮ್ಮ ದೇಶಭಕ್ತಿ, ರಾಷ್ಟ್ರನಿಷ್ಠೆ ರುಜುವಾತುಪಡಿಸಿದಂತೆ ಎಂಬ ವಾದ ಸಂಘ ಪರಿವಾರದ್ದು. ಪ್ರತಿವರ್ಷದ ಸ್ವಾತಂತ್ರ್ಯೋತ್ಸವದಂದು ಹುಬ್ಬಳ್ಳಿಯಲ್ಲಿ ಈದ್ಗಾ ಮೈದಾನದಲ್ಲಿ ರಾಷ್ಟ್ರಧ್ವಜ ಹಾರಿಸುವ ಸಡಗರ ಈ ಪರಿವಾರಕ್ಕೆ. ಆಗ ಗಿರೀಶರು ಸಾರ್ವಜನಿಕವಾಗಿ ನೀಡಿದ ಒಂದು ಹೇಳಿಕೆ ಅತ್ಯಂತ ಗಮನಾರ್ಹವಾಗಿದೆ, ಎಲ್ಲ ಕಾಲಕ್ಕೂ ಪ್ರಸ್ತುತವಾಗಿದೆ. ''ಯಾರ ಕಣ್ಣಿನಲ್ಲಿಯೂ, ಯಾರಿಗೂ ನಾನೊಬ್ಬ ದೇಶಪ್ರೇಮಿ ಎಂದು ಸಾಬೀತುಗೊಳಿಸುವ ಅವಶ್ಯಕತೆ ಇಲ್ಲ. ಮುಸ್ಲಿಮರಿಗೂ ಇರಬೇಕಾಗಿಲ್ಲ. ಈದ್ಗಾ ಮೈದಾನದಲ್ಲಿ ರಾಷ್ಟ್ರಧ್ವಜ ಹಾರಿಸಿಬಿಟ್ಟರೆ ಮುಸಲ್ಮಾನ ತನ್ನ ರಾಷ್ಟ್ರನಿಷ್ಠೆ ಪ್ರಕಟಿಸಿದಂತೆ ಎಂದು ಹೇಳುವುದು ಕೋಮುವಾದದ ಅತ್ಯಂತ ಅಸಹ್ಯಕರ ಮುಖ.'' ಆ ಕಾಲದಲ್ಲಿ, ಅಪಾಯ ದಂಚಿನಲ್ಲಿ ನಿಂತು ಮಾತನಾಡುವ ರೀತಿ ಅದು.

* * *

ದುರದೃಷ್ಟವಶಾತ್ ಇದೇ ಸುಮಾರಿಗೆ ದೂರದರ್ಶನವು ಹತ್ತು-ಹದಿನೈದು ನಿಮಿಷಗಳ ಉರ್ದು ವಾರ್ತೆಗಳನ್ನು ಪ್ರಸಾರ ಮಾಡಲಾರಂಭಿಸಿತು. ಆಗ ಗಿರೀಶರೂ ಸೇರಿದ ಹಾಗೆ ನಾವೊಂದಷ್ಟು ಜನ ಒಂದು ಪತ್ರಿಕಾ ಹೇಳಿಕೆ ನೀಡಿ 'ಈ ಉರ್ದು ವಾರ್ತಾಪ್ರಸಾರದ ಆವಶ್ಯಕತೆಯನ್ನು ಪ್ರಶ್ನೆ ಮಾಡಿದ್ದೆವು. ಉರ್ದು ವಾರ್ತೆ ಪ್ರಸಾರ ಮಾಡುವುದರ ಮೂಲಕ ಉರ್ದು ಮಾತನಾಡುವವರಿಗೆ –ಅಂದರೆ ಮುಸಲ್ಮಾನರಿಗೆ – ಕನ್ನಡ ಬರುವುದಿಲ್ಲ ಎಂಬ ಅರ್ಥವೂ ಸೇರಿರುವುದರಿಂದ ಅನವಶ್ಯಕವಾಗಿ ಒಂದು ಬಗೆಯ ಪ್ರತ್ಯೇಕತೆಯನ್ನು ನಾವೇ ನಿರ್ಮಾಣ ಮಾಡಿದ ಹಾಗೆ ಆಗಲಿಲ್ಲವೆ ಎಂದು ಪ್ರಶ್ನಿಸಿದ್ದೆವು. ಹೀಗೆ ಅಲ್ಪಸಂಖ್ಯಾತರಿಗೆ ಅವರದೇ ಭಾಷೆಯ ವಾರ್ತೆ ಬೇಕಾದರೆ ಈ ರಾಜ್ಯದಲ್ಲಿ ಅಲ್ಪಸಂಖ್ಯಾತರಾದ ತಮಿಳರಿಲ್ಲವೆ, ತೆಲುಗು ಜನಗಳಿಲ್ಲವೆ ಎಂದೂ ಕೇಳಿದೆವು. ಇದೆಲ್ಲಕ್ಕಿಂತ ಮುಖ್ಯವಾಗಿ ಉರ್ದು ವಾರ್ತೆ ಬೇಕು ಎಂದು ಯಾರು ಕೇಳಿದ್ದರು ಎಂದು ಕೂಡ ನಮ್ಮ ಅಚ್ಚರಿ ವ್ಯಕ್ತಪಡಿಸಿದ್ದೆವು.

ಹೀಗೆ ಹೇಳಿಕೆ ನೀಡಿದ ಆಸುಪಾಸಿನಲ್ಲಿಯೇ ಬೇರೆ ಕೋಮುಶಕ್ತಿಗಳ ಚಿತಾವಣೆಯಿಂದಾಗಿ ರಾಜ್ಯ ಹತ್ತಿ ಉರಿಯಲಾರಂಭಿಸಿತು. ನಮ್ಮ ದುರದೃಷ್ಟವೆಂದರೆ ನಮ್ಮ ಹೇಳಿಕೆಯನ್ನು ಹೀಗೆ ಕೋಮುವಾದದ ಪ್ರಚೋದನೆಯಲ್ಲಿ ತೊಡಗಿದ್ದ ಶಕ್ತಿಗಳೂ ದುರ್ಲಾಭ ಪಡೆದುಕೊಂಡುದು. ನಮ್ಮ ಹೇಳಿಕೆ ಈ ಎಲ್ಲ ಗಲಭೆ ಆರಂಭವಾಗುವುದಕ್ಕೆ ಮುನ್ನವೆ, ಈ ಪ್ರಮಾಣದಲ್ಲಿ ಗಲಭೆಗಳಾಗುತ್ತವೆ ಎಂಬ ಕಲ್ಪನೆಯೆ ಇರದಿದ್ದ ಸಮಯದಲ್ಲಿ ನೀಡಿದ್ದು. ನಂತರ ಜರುಗಿದ ಅನಾಹುತದಿಂದಾಗಿ ಪ್ರಗತಿಪರ ವ್ಯಕ್ತಿಗಳು ಹಾಗೂ ಸಂಘಟನೆಗಳು ನಮ್ಮನ್ನೂ ಈ ಗಲಭೆಗಳೊಡನೆ ಸೇರಿಸಿ ಮಾತನಾಡುವಂತಾಯಿತು. ಗಿರೀಶ್ ಅವರಿಗೆ ಪ್ರಿಯರಾದ ಕಲಾವಿದರು, ಪತ್ರಕರ್ತರು, ಜಾತ್ಯಾತೀತ ಶಕ್ತಿಗಳು ಅನುಮಾನದಿಂದ, ಕೋಪದಿಂದ ಅವರ ಈ ನಿಲುವಿಗೆ ಪ್ರತಿಕ್ರಿಯಿಸಿದರು. ಆದರೂ ಗಿರೀಶ್ ತಮ್ಮ ನಿಲುವು ಬದಲಾಯಿಸಲಿಲ್ಲ. ಇಲ್ಲಿ ಜಾತಿ, ಕೋಮುಗಳಿಗೆ ಸಂಬಂಧಪಟ್ಟ ಯಾವುದೂ ಇರಲಿಲ್ಲ. ಇಲ್ಲಿ ಇದ್ದುದು ಭಾಷೆಯ ಪ್ರಶ್ನೆ, ಸಂಸ್ಕೃತಿಯ ಪ್ರಶ್ನೆ. ಭಾಷೆಯ ಬಗ್ಗೆ ಕಳಕಳಿ ಇದ್ದವರೆಲ್ಲ, ಭಾಷೆಯ ಮೂಲಕ ಜನತೆಯನ್ನು ಒಗ್ಗೂಡಿಸುವ ಕುರಿತಾಗಿ ಕಳಕಳಿ ಇದ್ದವರೆಲ್ಲ, ದೂರದರ್ಶನದ ಮೂರ್ಖ ನಿಲುವನ್ನು ವಿರೋಧಿಸಲೇ ಬೇಕಾಗಿತ್ತು.

ಸಾರ್ವಜನಿಕ ಜೀವನದಲ್ಲಿ ನಿಲುವುಗಳನ್ನು ತೆಗೆದುಕೊಳ್ಳುವುದು ಎಂದರೆ ಜನಪ್ರಿಯತೆಯನ್ನು

ಜಿ. ಕೆ. ಗೋವಿಂದ ರಾವ್

ಕಳೆದುಕೊಳ್ಳಲು ತಯಾರೂ ಆಗಿರಬೇಕೆಂದು ಅರ್ಥ. ಇದನ್ನು ಚೆನ್ನಾಗಿ ಗ್ರಹಿಸಿದವರು ಹಾಗೆಯೇ ನಡೆದುಕೊಳ್ಳುವವರು ಗಿರೀಶರು.

* * *

ತೀರ್ಥಹಳ್ಳಿಯಲ್ಲಿ ಗಿರೀಶರು 'ಕಾನೂರು ಹೆಗ್ಗಡತಿ' ಚಿತ್ರೀಕರಣದಲ್ಲಿ ಸಂಪೂರ್ಣ ತಲ್ಲೀನರಾಗಿಬಿಟ್ಟಿದ್ದರು. ಆ ಸಮಯದಲ್ಲಿ ಒಂದು ಕ್ಷಣ ಅವರು ಬಿಡುವಿನಲ್ಲಿ ಕೂತಿದ್ದಾಗ ನಾನು ಆನೇಕಲ್ಲಿನಲ್ಲಿ ಸಮುದಾಯದ ಗೆ. ಗುಂಡಣ್ಣ ಅವರ ಮೇಲೆ ಕೋಮುಶಕ್ತಿಗಳು ನಡೆಸಿದ ಹಲ್ಲೆಯ ಬಗ್ಗೆ ಹೇಳಿದೆ. ಆಗಿನ ಅವರ ಪ್ರತಿಕ್ರಿಯೆಯನ್ನು ನಾನು ಮರೆಯುವಂತೆಯೇ ಇಲ್ಲ. 'ಬಹುದೊಡ್ಡ ಪ್ರಮಾಣದಲ್ಲಿ ಆನೇಕಲ್ಲಿನಲ್ಲಿಯೇ ಪ್ರತಿಭಟನಾ ಸಭೆ ನಡೆಸೋಣ; ನಾನೂ ಭಾಗವಹಿಸುತ್ತೇನೆ' ಅಂದರು.

ಅಷ್ಟರೊಳಗಾಗಿ ಜ್ಞಾನಪೀಠ ಪ್ರಶಸ್ತಿಯೂ ಬಂದಿತ್ತು ಅವರಿಗೆ. ಹೀಗೆ ಪ್ರಶಸ್ತಿ, ಗೌರವಗಳು, ಕೀರ್ತಿಗಳು, ಹೆಚ್ಚುತ್ತಿದ್ದಂತೆ ಜನಗಳಿಂದ ದೂರವಾಗುವ, ಅಪರೂಪವಾಗಿ ಕಾಣಿಸಿಕೊಳ್ಳುವ, ಮಾತನಾಡಿದರೂ ಆಶೀರ್ವಚನದ ರೀತಿ ಒಂದೆರಡು ನಾಜೂಕು ಮಾತುಗಳನ್ನು ಆಡಿ ಮತ್ತೆ ಮಾಯವಾಗಿಬಿಡುವ ಹೊಸದೊಂದು ಪಂಚತಾರಾ ಜೀವನ ಶೈಲಿಯನ್ನೇ ಅಳವಡಿಸಿಕೊಂಡು ಬಿಡುವುದು ವಾಡಿಕೆ. ಆದರೆ ಗಿರೀಶರು ಇದಕ್ಕೆ ಸಂಪೂರ್ಣ ಅಪವಾದ. ಹೇಳಿದಂತೆಯೇ ಆನೇಕಲ್ಲಿಗೆ ಎಲ್ಲರೊಟ್ಟಿಗೆ ಬಸ್ಸಿನಲ್ಲಿ ಬಂದರು. ಊರತುಂಬ ಪ್ರತಿಭಟನಾ ಮೆರವಣಿಗೆಯಲ್ಲಿ ಭಾಗವಹಿಸಿದರು. ಅಲ್ಲಿಯ ಜನಕ್ಕಂತೂ ಆಶ್ಚರ್ಯ, ಹೆಮ್ಮೆ- ಗಿರೀಶರು ತಮ್ಮ ಊರಿಗೆ ಬಂದಿದ್ದಾರೆ, ತಮ್ಮೊಡನೆ ಇದ್ದಾರೆ ಎಂದು.



ಇದೇ ರೀತಿ ತಮ್ಮ ನಾಟಕಗಳ ಉತ್ಸವದ ಆರಂಭದ ದಿನದಂದೇ, ಮಂತ್ರಿ ಮಹೋದಯರುಗಳೆಲ್ಲ ಆಹ್ವಾನಿತರಾಗಿ ಬಂದಿದ್ದ ವೇಳೆಯಲ್ಲಿ, ಕಲಾಕ್ಷೇತ್ರದ ಹೊರಗೆ ಮೈಸೂರಿನ ರಂಗಾಯಣದ ಕಲಾವಿದರುಗಳ ಜೊತೆ ತಾವೂ ಕೂತು ಅವರುಗಳ ಬೇಡಿಕೆಯ ಪರವಾದ ಧರಣಿಯಲ್ಲಿ ಭಾಗವಹಿಸಿದರು. ಪರಿಣಾಮವೆಂದರೆ, ಮಂತ್ರಿಗಳು, ಅಧಿಕಾರಿಗಳು ಪ್ರತಿಯೊಬ್ಬರೂ ತಮ್ಮ ಭಾಷಣದಲ್ಲಿ ಈ ವಿಷಯ ಪ್ರಸ್ತಾಪಿಸಿದ್ದಷ್ಟೇ ಅಲ್ಲ, ಶೀಘ್ರವಾಗಿ ಬೇಡಿಕೆಗಳನ್ನು ಪರಾಮರ್ಶಿಸಲಾರಂಭಿಸಿದರು. ಸಮಸ್ಯೆ ಪರಿಹರಿಸಿದಲ್ಲವೆಂಬುದು ಇತ್ತೀಚಿನ ವರದಿ.

* * *

ಗಿರೀಶರ ಕುರಿತಾಗಿ ಅನೇಕ ಟೀಕೆಗಳು ಬಂದಿವೆ. ಉದಾಹರಣೆಗೆ 'ಅವರು ಕೊಂಕಣಿಗಳು', 'ಆದರೂ ಕೊಂಕಣಿ ಭಾಷೆಗೆ ಅವರ ಕೊಡುಗೆ ಏನೂ ಇಲ್ಲ', 'ಕನ್ನಡ ಭಾಷೆ ಗೊತ್ತಿಲ್ಲ', 'ಜ್ಞಾನಪೀಠಕ್ಕೆ ಅರ್ಹರಲ್ಲ', 'ಬೆಂಗಳೂರಿಗೆ ಆಗೊಮ್ಮೆ ಈಗೊಮ್ಮೆ ದರ್ಶನ ನೀಡಿ ದೆಹಲಿ, ಲಂಡನ್, ನ್ಯೂಯಾರ್ಕ್ ಎಂದು ತಿರುಗಾಡುವ ಒಂದು ಬಗೆಯ ದಂತಗೋಪುರದ ಲೇಖಕ' ಇತ್ಯಾದಿ ಏನೆಲ್ಲಾ ಟೀಕೆಗಳು; ಕೆಲವು ಅಸೂಯೆಯಿಂದ, ಕೆಲವು ಅಜ್ಞಾನದಿಂದ, ಮತ್ತೆ ಕೆಲವು ನಮ್ಮೊಡನಿದ್ದೂ ನಮ್ಮಂತಾಗಲಿಲ್ಲವೆಂಬ ಕ್ರೋಧದಿಂದ' ಹುಟ್ಟಿದವು. ಇವಕ್ಕೆಲ್ಲ ಗಿರೀಶರದು ಒಂದು ರೀತಿಯ ಶ್ರೀಮಂತ ಉದಾಸೀನ. ಅತ್ಯಂತ ತೀವ್ರವಾಗಿ ಈ ಟೀಕೆಗಳ ಕುರಿತಾಗಿ ಪ್ರಶ್ನಿಸಿದಾಗ ಅವರು ಹೇಳುವುದು ಇಷ್ಟೆ: 'ಪ್ರಜಾ ಪ್ರಭುತ್ವದಲ್ಲಿ ಅಭಿಪ್ರಾಯ ವ್ಯಕ್ತಪಡಿಸುವ ಹಕ್ಕು ಅವರಿಗಿದೆ. ಅದಕ್ಕೆ ನಾನು ಪ್ರತಿಕ್ರಿಯಿಸಬೇಕೆಂದೇನೂ ಇಲ್ಲ.'' ಅಷ್ಟೇ.

* * *

ಮುಂಬೈನ ಶಿವಸೇನೆಯ ನಾಯಕ ಬಾಳ ಠಾಕ್ರೆ ಸುಪ್ರಸಿದ್ಧ ಮರಾಠಿ ಲೇಖಕ ಪು.ಲ. ದೇಶಪಾಂಡೆ ಅವರನ್ನು ಅಕಾರಣವಾಗಿ 'ಹೀಯಾಳಿಸಿ ಅಪಮಾನಾಸ್ಪದ ರೀತಿಯಲ್ಲಿ ಬೈದ'. ಅಷ್ಟೇ ಸಾಲದೆಂಬಂತೆ ದೇಶಪಾಂಡೆ ಅವರಿಗೆ ಬಿ.ಜೆ.ಪಿ.-ಸೇನೆ ರಾಜ್ಯ ಸರ್ಕಾರ ನೀಡಿದ್ದ 'ಮಹಾರಾಷ್ಟ್ರ ಭೂಷಣ' ಪದವಿಯನ್ನು 'ತಾನೇ ಪು.ಲ.ನ ಮುಖಕ್ಕೆ ಎಸೆಯಿರಿ ಎಂದು ಹೇಳಿದೆ' ಎಂಬ ಅರ್ಥದಲ್ಲಿ ಮಾತನಾಡಿದ. ಅಂಥ ದಿನಗಳು ಅವು. 1997ನೇ ಇಸವಿ, ಜನವರಿ ತಿಂಗಳಲ್ಲಿ ಎಪ್ಪತ್ತನೆ ಅಖಿಲ ಭಾರತೀಯ ಮರಾಠಿ ಸಾಹಿತ್ಯ ಸಮ್ಮೇಳನ ಜರುಗಿ ಗಿರೀಶರು ಉದ್ಘಾಟನಾ ಭಾಷಣ ಮಾಡಲು ಆಹ್ವಾನಿತರಾದರು. ಶಿವಸೇನೆಯ ವರ್ತನೆಯಿಂದ 'ವಾತಾವರಣ ಸಂತಪ್ತವಾಗಿತ್ತು.' ಅಂಥ ಸಂದರ್ಭದಲ್ಲಿ ಗಿರೀಶರಿಗೆ ಎರಡು ಮಾರ್ಗಗಳಲ್ಲಿ ಒಂದನ್ನು ಆಯ್ಕೆ ಮಾಡಿಕೊಳ್ಳಬೇಕಾಗಿತ್ತು: ಅ) ಪರೋಕ್ಷವಾಗಿಯಾಗಲಿ, ಅಪರೋಕ್ಷವಾಗಿಯಾಗಲಿ ಪು.ಲ. ದೇಶಪಾಂಡೆ ಪ್ರಸಂಗವನ್ನೇ ಎತ್ತಿಕೊಳ್ಳದೆ ಸಾಂಪ್ರದಾಯಿಕ 'ಗೂಡಿಗೂಡಿ' ಭಾಷಣ ಮಾಡುವುದು; ಅಥವಾ ಆ) ತಮ್ಮ ಎಲ್ಲ ನಂಬಿಕೆಗಳು, ಸಾಹಿತ್ಯಿಕ ಮೌಲ್ಯಗಳು, ಸಂಸ್ಕೃತಿಗೆ ಒದಗಿರುವ ಅಪಾಯಗಳು, ನಾವು ಬದುಕುತ್ತಿರುವ ಭಯಂಕರ ವಾತಾವರಣ ಇವುಗಳ ಬಗ್ಗೆ ಮಾತನಾಡುತ್ತ, ಅಂದಿನ ಸಂದರ್ಭವನ್ನು ರೂಪಕವಾಗಿ ಬಳಸಿಕೊಂಡು ಇಡೀ ರಾಷ್ಟ್ರದ ಬದುಕಿನ ಕುರಿತಾದ ವ್ಯಾಖ್ಯಾನ ಮಾಡುವುದು. ಗಿರೀಶರು ಎರಡನೆಯ ಮಾರ್ಗವನ್ನು ಬಳಸಿದರು. ಭಾಷಣದ ಉದ್ದಕ್ಕೂ ಅವರು ವ್ಯಕ್ತಿ, ವ್ಯಕ್ತಿ ಸ್ವಾತಂತ್ರ್ಯ, ಸಂಸ್ಕೃತಿ ವಿಕಾಸ ಇವುಗಳನ್ನು ಕುರಿತು ಮಾತನಾಡಿದರು. ಹೀಗೆ ಮಾತನಾಡುತ್ತಲೇ ಅವರು 'ಸೈನಿಕ' 'ಸೈನಿಕೀ ಮನೋವೃತ್ತಿ' ಎಂಬ ಮಾತುಗಳನ್ನು ಬಳಸಿದರು. ವ್ಯಕ್ತಿ ಜೀವನದಲ್ಲಿ ಪ್ರಶ್ನೆ ಮಾಡದೆ ಸೈನಿಕನಂತೆ ವಿಧೇಯತೆಯನ್ನು ಪ್ರದರ್ಶಿಸುವುದು, ಸೈನಿಕಶಿಸ್ತು ಕಾಪಾಡಿಕೊಳ್ಳುವುದು, ಇವೆಲ್ಲಾ ಸಂಸ್ಕೃತಿಗೆ, ಮನುಷ್ಯ ವಿಕಾಸಕ್ಕೆ, ಸೃಜನಶೀಲತೆಗೆ ಪೂರಕವಾಗಲಾರದು ಎಂದು ಹೇಳಿದರು. ಆ ದಿನಗಳಲ್ಲಿ 'ಸೈನಿಕ' ಎಂಬ ಶಬ್ದಕ್ಕೆ 'ಶಿವಸೈನಿಕ' ಎಂಬ ಅರ್ಥದಲ್ಲೇ ಶ್ರೋತೃಗಳು, ಪತ್ರಿಕೆಗಳೂ ಅರ್ಥೈಸಿದರು-ಸಹಜವಾಗಿ. ಹೀಗಾಗಿ ದೇಶಪಾಂಡೆಯವರ ವಿಷಯದಲ್ಲಿ ಶಿವಸೇನೆ ನಡೆದುಕೊಂಡ ಬಗ್ಗೆ ತತ್‌ಕ್ಷಣದ ಶಕ್ತ ಪ್ರತಿಕ್ರಿಯೆಯೂ ಆಗುವುದರ ಜೊತೆಗೆ, ಭಾಷಣ ಎಲ್ಲ ಕಾಲಕ್ಕೂ ಪ್ರಸ್ತುತವಾಗುವ ಸಾಂಸ್ಕೃತಿಕ ಮಹತ್ವದ ದಾಖಲೆಯೂ ಆಗಿದೆ.

ಅವರು ಹೇಳುತ್ತಾರೆ ; ''.....ವೈಚಾರಿಕತೆ ; ಸೃಷ್ಟಿಶೀಲತೆಗಳು ದಬ್ಬಾಳಿಕೆಯ ಅಸ್ತಿತ್ವವನ್ನೇ ಪ್ರಶ್ನಿಸುತ್ತವಾದ್ದರಿಂದ ಅವುಗಳ ಜೊತೆಗೆ ಸಂಧಾನ ಮಾಡುವುದು ಅದಕ್ಕೆ ಅಸಾಧ್ಯವಾಗುತ್ತದೆ. ಅನಿವಾರ್ಯವಾಗಿ ಹೊರಗಿನ ವೈರಿಗಳ ಕಡೆಗೆ ಬೆರಳು ತೋರಿಸಿ ಸಮರ್ಥಿಸಲಾದ ಹಿಂಸೆ ಕೊನೆಗೆ ತನ್ನ ಸಮಾಜದ ವಿರುದ್ಧವೇ ಹೊರಳುತ್ತದೆ. ಮತ್ತು ಅಲ್ಲಿಯ ಪತ್ರಕರ್ತರು, ಲೇಖಕರು, ಕಲಾಕಾರರು, ಬುದ್ಧಿವಾದಿಗಳು, ಸಾಮಾಜಿಕ ಕಾರ್ಯಕರ್ತರು ಇವರನ್ನೇ ನಾಶಗೊಳಿಸಲು ಯತ್ನಿಸುತ್ತದೆ.''

ಕನ್ನಡಿಗರಿಗೆ, ಅದೂ ಈ ವರ್ಷ ಟಿಪ್ಪೂವಿನ 200ನೇ ವರ್ಷದ ವರ್ಧಂತಿ ಆಚರಣೆಯ ಸಂದರ್ಭದಲ್ಲಿ ಎದ್ದಿರುವ ವಿವಾದದ ಸಮಯದಲ್ಲಿ, ವಿಶೇಷವಾಗಿ ಟಿಪ್ಪುವನ್ನು 'ದೇಶದ್ರೋಹಿ, ಹಿಂದೂದ್ವೇಷಿ, ಕನ್ನಡ ದ್ವೇಷಿ' ಎಂದು ವರ್ಣಿಸಿ ದೊಡ್ಡ ರಾದ್ಧಾಂತವನ್ನೇ ಮಾಡುತ್ತಿರುವ ಹಿಂದೂರಾಷ್ಟ್ರವಾದಿಗಳು ಗಮನಿಸಬೇಕಾದ ಕೆಲವು ಮಾತುಗಳನ್ನು ಆಡಿದ್ದಾರೆ:

''ಆಧುನಿಕ ಕರ್ನಾಟಕದಲ್ಲಿ..... ಬುದ್ಧಿವಾದಿ ಪರಂಪರೆಯೇ ಇಲ್ಲ. ಕಳೆದ ಎರಡು ಮೂರು ಶತಮಾನಗಳಲ್ಲಿ.... ಮರಾಠಿ ವಿಚಾರವಂತರಿಗೆ ಸರಿಸಾಟಿಯಾಗಿ ನಿಲ್ಲಬಲ್ಲ ಒಬ್ಬ ವಿಚಾರವಂತನಾದರೂ ಕನ್ನಡದಲ್ಲಿ ಹುಟ್ಟಲ್ಲ'' ಎನ್ನುತ್ತಾರೆ. ಮುಂದುವರೆದು ''ಆದರೆ ವಿಜಯನಗರದ ಪತನವಾದ ನಂತರ ನಾಲ್ಕುನೂರು ವರ್ಷಗಳಲ್ಲಿ ರಾಷ್ಟ್ರೀಯ ಮಹತ್ವದ ಒಬ್ಬನೆ ಒಬ್ಬ ರಾಜಕೀಯ ವಿಚಾರವಂತ ನಮ್ಮ ಕಣ್ಣಿಗೆ ಬೀಳುತ್ತಾನೆ. ಅವನೆಂದರೆ ಟಿಪ್ಪು ಸುಲ್ತಾನ್. ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ಬ್ರಿಟಿಷರ ದೇಶಾವರಿ ನಗೆಯ ಹಿಂದೆ ಎಂಥ ಸಾಮ್ರಾಜ್ಯವಾದಿ ಮಹತ್ವಾಕಾಂಕ್ಷೆ ಅಡಗಿದೆ ಎಂಬುದನ್ನು ಖಚಿತವಾಗಿ ಕಂಡುಕೊಂಡ ರಾಜಕಾರಣಿ ಟಿಪ್ಪು... ಮೈಸೂರನ್ನು ಹೊಸ ಆರ್ಥಿಕ ತಳಹದಿಯ ಮೇಲೆ ಪುನರ್ರಚಿಸುವ ಯತ್ನ ಕೂಡ ಮಾಡಿದ. ಅದಕ್ಕಾಗಿ ಭಾರಿ ಬೆಲೆ ತೆತ್ತ...''

ಈ ಮಾತುಗಳು ಸಾಧ್ಯವಾಗುವುದು ಸತ್ಯ ಪಕ್ಷಪಾತಿಗೆ. ಭವಿಷ್ಯದ ಕನಸಿರುವವನಿಗೆ. ಮನುಷ್ಯನ ಕಳಕಳಿ ಸಾಧ್ಯವಾದವನಿಗೆ.

ಗಿರೀಶರಿಗೆ ಇವು ಸಾಧ್ಯ. ಎಂದೇ ಅವರು ನಮಗೆ ಹತ್ತಿರವಾಗುವುದು.

ಜಿ. ಕೆ. ಗೋವಿಂದ ರಾವ್

ನಂ. 161, 1ನೇ ಮಹಡಿ, 36ನೇ 'ಎ' ಕ್ರಾಸ್, 7ನೇ ಬ್ಲಾಕ್, ಜಯನಗರ, ಬೆಂಗಳೂರು - 82

# ಆಕ್ರಮಣಕಾರರಿಗೆ ಸಿಂಹಸ್ವಪ್ನವಾಗಿದ್ದ ಜಮಾಲಬಾದ್ ದುರ್ಗ

ಒಂದು ಕಾಲದಲ್ಲಿ ಅನೇಕ ಚಾರಿತ್ರಿಕ ಘಟನೆಗಳಿಗೆ ಕಾರಣವಾದ ಸ್ಥಳಗಳು ಇಂದು ಮೂಲೆಗುಂಪಾಗಿವೆ. ಅಂತಹ ಕೆಲವು ಸ್ಥಳಗಳಲ್ಲಿ ಐತಿಹಾಸಿಕ ಕುರುಹುಗಳಿವೆ. ಅವು ಗತಕಾಲದ ಮೂಕ ಸಾಕ್ಷಿಗಳಾಗಿವೆ. ಅವುಗಳಿಂದ ಒಂದು ಸ್ಥಳದ ವಿಶೇಷತೆಯನ್ನು ಅರಿಯುವುದು ತುಸು ಕಷ್ಟದ ವಿಚಾರವೇ ಸರಿ. ಈ ಮಾದರಿಯ ಅನೇಕ ತಾಣಗಳು ನಮ್ಮ



ರಾಜ್ಯದಲ್ಲಿವೆ. ಅಂತಹ ಒಂದು ಜೀರ್ಣಾವಸ್ಥೆಯಲ್ಲಿರುವ ತಾಣ ಜಮಾಲಾಬಾದ್ ಅಥವಾ ಜಮಾಲಗಢ್ ದುರ್ಗ.

ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿಯಿಂದ ಉತ್ತರಕ್ಕೆ ಸುಮಾರು ೬ ಕಿ.ಮೀ. ದೂರ ಕ್ರಮಿಸಿದರೆ ಸಿಗುತ್ತದೆ ಈ ಕಿಲ್ಲೆ. ರಸ್ತೆಯಿಂದಲೇ ಗೋಚರಿಸುತ್ತದೆ ಒಂದು ಬೃಹತ್ ಗಜರೂಪದ ಗ್ರಾನೈಟ್ ಬೆಟ್ಟ. ಈ ಗಿರಿ ಕುದುರೆಮುಖ ಪರ್ವತಕ್ಕೆ ಗೌರವ ಸಲ್ಲಿಸುತ್ತಿರುವಂತೆ ಭಾಸವಾಗುತ್ತದೆ. ಇದರ ಮೇಲಿದೆ ಪಾಳುಬಿದ್ದ ಕೋಟೆ.

ಮುಂಚೆ, ಈ ಕೋಟೆಯಿರುವ ಜಾಗದಲ್ಲಿ ನರಸಿಂಹಗಢ್‌ಯೆಂಬ ಕೋಟೆಯೊಂದರ ಅವಶೇಷಗಳಿದ್ದವು. ಆ ಕೋಟೆಯನ್ನು ಕಟ್ಟಿದ್ದು ನರಸಿಂಹನ ಆಳ್ವಿಕೆಯಲ್ಲಿ. ಅವನು ಬಹುಶಃ ತುಳುನಾಡಿನ ಸಾಮಂತನಾಗಿದ್ದನೆಂದು ತೋರುತ್ತದೆ. ಕದಂಬರ ಪ್ರಾಬಲ್ಯ ಕ್ಷೀಣಿಸಿದಾಗ ಈತ ಪ್ರವರ್ಧಮಾನಕ್ಕೆ ಬಂದಿರಬೇಕು. ಬೆಟ್ಟದ ಬುಡದಲ್ಲಿದ್ದ ಊರಿಗೂ ಈತನ ಹೆಸರೇ ಇತ್ತು. ಅವನು ವಾಸವಾಗಿದ್ದ ಎನ್ನಲಾದ ಅರಮನೆಯ ಭಗ್ನಾವಶೇಷಗಳೂ ಈಗ ಇಲ್ಲ.

ಟಿಪ್ಪುಸುಲ್ತಾನ ಒಮ್ಮೆ ಮಂಗಳೂರಿನಿಂದ ಮೈಸೂರಿಗೆ ವಾಪಸ್ಸಾಗುತ್ತಿದ್ದಾಗ ಈ ಗಿರಿಯನ್ನು ಕಂಡ. ಬ್ರಿಟಿಷರ ವಿರುದ್ಧದ ತನ್ನ ಸೈನ್ಯದ ಕಾರ್ಯಾಚರಣೆಗಳಿಗೆ ಇದು ಸೂಕ್ತವಾದ ಸ್ಥಳವೆಂದು ಮನಗಂಡು, ಹಿಂದಿನ ದುರ್ಗದ ಭಗ್ನಾವಶೇಷಗಳಿದ್ದ ಜಾಗದಲ್ಲಿ ಹೊಸ ಕಿಲ್ಲೆಗೆ ಬುನಾದಿ ಹಾಕಿದ. ಬಿರುಸಿನಿಂದ ನಿರ್ಮಾಣ ಕಾರ್ಯ ಶುರುವಾಯಿತು. ೧೭೯೪ ರಲ್ಲಿ ಕೆಲಸ ಮುಗಿಯಿತು. ಕೋಟೆಗೆ ತನ್ನ ತಾಯಿ ಜಮಾಲಬೀ ಹೆಸರನ್ನೇ ಇಟ್ಟ. ಇಲ್ಲಿ ೪೦೦ ಸೈನಿಕರ ರಕ್ಷಣಾ ತುಕಡಿಯೊಂದನ್ನು ಇರಿಸಿದ.

ಮೈಸೂರಿನ ನಾಲ್ಕನೇ ಮಹಾಯುದ್ಧ ೧೭೯೯ರಲ್ಲಿ ಆರಂಭವಾಯಿತು. ಕೊಡಗಿನ ರಾಜನಿಂದ ಜಮಾಲಗಢ್

**ಮ. ಶ್ರೀ. ಮುರಳಿಕೃಷ್ಣ**

ಮೇಲೆ ದಾಳಿ ನಡೆಯಿತು. ಬೆಟ್ಟದ ಬುಡದಲ್ಲಿದ್ದ ಊರು ಧ್ವಂಸವಾಯಿತು. ಬ್ರಿಟಿಷರಿಗೆ ಈ ದುರ್ಗದ ಪ್ರಾಮುಖ್ಯತೆಯ ಅರಿವಿತ್ತು. ಅವರೂ ಸಹ ಇದರ ಮೇಲೆರಗಿದರು. ಕಿಲ್ಲೆ ಬ್ರಿಟಿಷರ ವಶವಾಯಿತು. ಆದರೆ ಈ



ಘಟನೆ ಜರುಗಿದ ಸ್ವಲ್ಪ ಅವಧಿಯಲ್ಲೇ ಇದು ತಿಮ್ಮನಾಯಕನೆಂಬುವನ ಅಧೀನಕ್ಕೆ ಬಂದಿತು. ನಂತರ, ಬ್ರಿಟಿಷರು ಕುಮಾರ ಹೆಗ್ಗಡೆಯ ಸಹಯೋಗದಿಂದ ಮೂರು ತಿಂಗಳ ಕಾಲ ಕಿಲ್ಲೆಯ ಮೇಲೆ ಆಕ್ರಮಣ ನಡೆಸಿದರು. ಕೊನೆಗೆ ಜೂನ್ ೧೮೦೦ರಲ್ಲಿ ವಿಜಯ ಪತಾಕೆಯನ್ನು ಹಾರಿಸಿದರು.

ಸುಮಾರು ೫೫೫ ಮೀಟರ್ (೧೭೮೮ ಅಡಿ-ಸಮುದ್ರ ಮಟ್ಟದಿಂದ) ಎತ್ತರವಿರುವ ಈ ಬೆಟ್ಟವನ್ನು ಹತ್ತಲು ಪೂರ್ವ ದಿಕ್ಕಿನಲ್ಲಿ ಕಡಿದಾದ ಮೆಟ್ಟಿಲುಗಳಿವೆ. ತಾಂತ್ರಿಕ ಕೌಶಲ್ಯತೆಯಿಂದ ಕೆತ್ತಲಾಗಿದೆ. ಅಲ್ಲಲ್ಲಿ, ಕೆಲವು ಜಾಗಗಳಲ್ಲಿ ಮೆಟ್ಟಿಲುಗಳು ಇಲ್ಲ. ಅವರೋಹಣ ಮಾಡುವಾಗ ಸುಸ್ತಾಗುವುದು ಸಹಜ. ಸುಮಾರು ಒಂದೂವರೆ ಎರಡು ಗಂಟೆಗಳ ಅವಧಿಯಲ್ಲಿ ಗಿರಿಯ ತುದಿ ತಲುಪಬಹುದು.

ಮೊದಲಿಗೆ ಶಿಥಿಲಾವಸ್ಥೆಯಲ್ಲಿರುವ ಕೋಟೆಯ ಗೋಡೆಗಳು ಕಾಣಿಸುತ್ತವೆ. ಸ್ವಲ್ಪ ದೂರ ಸಾಗಿದ ನಂತರ ದ್ವಾರಗಳು ಸಿಗುತ್ತವೆ. ಕೋಟೆಯ ಒಳಗಡೆ ಎರಡು ಕೆರೆಗಳು ಹಾಗೂ ಒಂದು ಚಿಕ್ಕ ಸಿಹಿ ನೀರಿನ ಸೆಲೆಯಿದೆ. ಒಂದು ಕಾವಲು ಗೋಪುರದ ಮೇಲೆ ಯೂರೋಪಿನಲ್ಲಿ ತಯಾರಾದ ಕಬ್ಬಿಣದ ತೋಪುವೊಂದಿದೆ.

ಗಿರಿಯ ಶಿಖರ ತಲುಪಿದಾಗ, ದಣಿದ ಅವಯವಗಳಿಗೆ ಬೀಸುವ ಕುಳಿರ್ಗಾಳಿ ನೀಡುವ ಸ್ಪರ್ಶಸುಖ ಆಹ್ಲಾದಕರ. ಅಲ್ಲಿ ಅರಳುವ ಕಾನನ ಕುಸುಮಗಳ ದೃಶ್ಯ ನಯನಾನಂದಕರ. ಮೋಡ ಕವಿದ, ಅಸ್ಪಷ್ಟ ವಾತಾವರಣವಿರದಿದ್ದರೆ, ಪಶ್ಚಿಮದಲ್ಲಿ ಅರಬ್ಬಿ ಸಮುದ್ರ ಗೋಚರಿಸುತ್ತದೆ. ಪೂರ್ವದಲ್ಲಿ ಕುದುರೆಮುಖ ಶಿಖರದ ದರ್ಶನ ಲಭ್ಯ.

ಈಗ ಹೆಚ್ಚಾಗಿ ಕುದುರೆಮುಖ ಶಿಖರಕ್ಕೆ ಲಗ್ಗೆ ಹಾಕುವ ಚಾರಣಿಗರು ಜಮಾಲಗಢ್‌ಗೆ ಭೇಟಿ ನೀಡುತ್ತಾರೆ. ಬೆಟ್ಟದ ಬುಡದಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯವರ ಫಲಕವೊಂದಿದೆ. ಹೆಚ್ಚು ಪ್ರಚಾರಕ್ಕೆ ಬಾರದಿರುವ ಈ ಸ್ಥಳವನ್ನು ಜನಪ್ರಿಯ ಪ್ರವಾಸಿ ತಾಣವನ್ನಾಗಿ ಮಾಡುವುದರಲ್ಲಿ ಪ್ರವಾಸ ಇಲಾಖೆಯವರು ಗಮನ ಹರಿಸಬೇಕು. ಸಕಾಲದಲ್ಲಿ ದುರಸ್ತಿ ಕಾರ್ಯ ನಡೆಸಿ, ಉಳಿದಿರುವ ಕೋಟೆಯ ಅವಶೇಷಗಳನ್ನು ಜತನ ಮಾಡಬೇಕು.

ಮ. ಶ್ರೀ. ಮುರಳಿಕೃಷ್ಣ
ನಂ.೧೦೦, ೨ನೇ 'ಎ' ಕ್ರಾಸ್, ಗವೀಪುರಂ ಬಡಾವಣೆ
ಬೆಂಗಳೂರು - ೫೬೦ ೦೧೯



*ಗಂಡ* : ಏನೇ ಇದೂ? ಸಾರಿಗೆ ಉಪ್ಪು ಹೆಚ್ಚಾಯ್ತಲ್ಲ...

*ಹೆಂಡತಿ* : ಸಾರಿಗೆ ಉಪ್ಪು ಹೆಚ್ಚಾಯ್ತೋ, ಉಪ್ಪಿಗೆ ಸಾರು ಹೆಚ್ಚಾಯ್ತೋ ಅಂತ ಸರಿಯಾಗಿ ಹೇಳಿ.

# ಸಂವಿಧಾನಕ್ಕೆ ಕಾಯಕಲ್ಪ ಯಾವ ದಿಕ್ಕಿನಲ್ಲಿ ?

ಭಾರತದ ಸಂವಿಧಾನ ಈ ದೇಶದ ಆಡಳಿತದ ಗೊತ್ತು ಗುರಿಗಳನ್ನು ಚಿತ್ರಿಸಿರುವ ಒಂದು ಅಗಾಧ ದಾಖಲೆ. ಶಾಸಕಾಂಗ, ರಾಜ್ಯಾಂಗ ಮತ್ತು ನ್ಯಾಯಾಂಗಗಳು ಸಂವಿಧಾನದ ಪರಿಮಿತಿಯಲ್ಲಿ ತಮ್ಮ ತಮ್ಮ ಕರ್ತವ್ಯಗಳನ್ನು ಪಾಲಿಸಬೇಕಾದ್ದು ಮತ್ತು ಅಧಿಕಾರ ಬಳಸಬೇಕಾದ್ದು ಒಂದು ಕಟ್ಟಳೆ. ಹೀಗಿದ್ದೂ ಕೂಡ ಈ ಅಂಗಗಳ ನಡುವೆ ಕೆಲವೊಮ್ಮೆ ತಿಕ್ಕಾಟಗಳು ನಡೆದಿರುವುದನ್ನು ನಾವು ನೋಡಿದ್ದೇವೆ. ಬಹುಮುಖ್ಯವಾಗಿ ಚರ್ಚಿತವಾಗಿರುವ ವಿಷಯವೆಂದರೆ, ಸಂವಿಧಾನಕ್ಕೆ ತಿದ್ದುಪಡಿ ತರುವ ಅಧಿಕಾರ ಪಾರ್ಲಿಮೆಂಟಿಗೆ ಸಂವಿಧಾನದತ್ತವಾಗಿದೆಯೆ ಅಥವಾ ಇಲ್ಲವೆ ಎಂಬುದು. ಈ ಬಗ್ಗೆ ಸರ್ವೋಚ್ಚ ನ್ಯಾಯಾಲಯವು ಕೊಟ್ಟ ಮೊದಲಿನ ತೀರ್ಮಾನಗಳು ನಂತರದ ತೀರ್ಮಾನಗಳಲ್ಲಿ ಮಾರ್ಪಾಟಾಗಿವೆ.

1951ರಲ್ಲಿ ಶಂಕರೀಪ್ರಸಾದ್ ಸಿಂಗ್ ಪ್ರಕರಣ, ನಂತರ 1965ರಲ್ಲಿ ಸಜ್ಜನ್ ಸಿಂಗ್ ಪ್ರಕರಣ - ಇವುಗಳಲ್ಲಿ ಸರ್ವೋಚ್ಚ ನ್ಯಾಯಾಲಯ ಸಂವಿಧಾನವನ್ನು ತಿದ್ದುಪಡಿ ಮಾಡುವ ಅಧಿಕಾರ ಪಾರ್ಲಿಮೆಂಟಿಗೆ ಸಂವಿಧಾನದತ್ತವಾಗಿದೆಯೆಂದು ತೀರ್ಪು ನೀಡಿದರೆ, 1967ರಲ್ಲಿ ಗೋಲಕನಾಥ್ ಪ್ರಕರಣದಲ್ಲಿ 11 ನ್ಯಾಯಾಧೀಶರ ನ್ಯಾಯಪೀಠ 6-5ರ ಬಹುಮತದಿಂದ ಸಂವಿಧಾನದ ಭಾಗ-3ರಲ್ಲಿರುವ ಮೂಲಭೂತ ಹಕ್ಕುಗಳನ್ನು ತಿದ್ದುಪಡಿ ಮಾಡುವ ಅಧಿಕಾರ ಪಾರ್ಲಿಮೆಂಟ್‌ಗೆ ಸಂವಿಧಾನದತ್ತವಾಗಿಲ್ಲ ಎಂಬ ತೀರ್ಪು ನೀಡಿ ಹೊಸ ವಿವಾದಕ್ಕೆ ದಾರಿ ಮಾಡಿತ್ತು. ನಂತರ 13 ನ್ಯಾಯಾಧೀಶರ ನ್ಯಾಯಪೀಠ 1973ರ ಸ್ವಾಮಿ ಕೇಶವಾನಂದ ಭಾರತಿ ಪ್ರಕರಣದಲ್ಲಿ ಸಂವಿಧಾನವನ್ನು ತಿದ್ದುಪಡಿ ಮಾಡುವ ಅಧಿಕಾರ ಅನುಚ್ಛೇದ 368ರ ಅಡಿಯಲ್ಲಿ ಪಾರ್ಲಿಮೆಂಟಿಗೆ ಸಂವಿಧಾನದತ್ತವಾಗಿದೆ ಎಂದು ತೀರ್ಪು ನೀಡಿದರೂ, ಸಂವಿಧಾನದ 'ಮೂಲ ಲಕ್ಷಣ' ಗಳನ್ನು ಬದಲಾಯಿಸುವಂತಹ ತಿದ್ದುಪಡಿಗಳನ್ನು ತರಲು ಪಾರ್ಲಿಮೆಂಟಿಗೆ ಅಧಿಕಾರವಿಲ್ಲವೆಂದು ಹೇಳಿತು. ಸಂವಿಧಾನದ ಸಾರ್ವಭೌಮತ್ವ, ಗಣತಂತ್ರ ಹಾಗೂ ಪ್ರಜಾಪ್ರಭುತ್ವದ ವ್ಯವಸ್ಥೆ, ಶಾಸಕಾಂಗ, ರಾಜ್ಯಾಂಗ, ನ್ಯಾಯಾಂಗಗಳ ಅಧಿಕಾರಗಳ ಪ್ರತ್ಯೇಕತೆ, ಧರ್ಮನಿರಪೇಕ್ಷತೆ, ಫೆಡರಲ್ ವ್ಯವಸ್ಥೆ, ಇವು ಸಂವಿಧಾನದ ಪ್ರಮುಖ ಲಕ್ಷಣಗಳೆಂದು ನ್ಯಾಯಾಲಯ ಗುರುತಿಸಿತು. ನಂತರ 1980ರ ಮಿನರ್ವ ಮಿಲ್ಸ್‌ನ ಪ್ರಕರಣದಲ್ಲಿ ಸಂವಿಧಾನದ ಮೂಲ ಲಕ್ಷಣಗಳನ್ನು ತಿದ್ದುಪಡಿ ಮಾಡುವ ಅಧಿಕಾರ ಪಾರ್ಲಿಮೆಂಟ್‌ಗೆ ಇಲ್ಲ ಎಂದು ಮತ್ತೊಮ್ಮೆ ಸ್ಪಷ್ಟಪಡಿಸಿ ಸರ್ವೋಚ್ಚ ನ್ಯಾಯಾಲಯ ಸ್ವಾಮಿ ಕೇಶವಾನಂದ ಭಾರತಿಯ ಪ್ರಕರಣದಲ್ಲಿ ಸಂವಿಧಾನದ ಮೂಲ ಲಕ್ಷಣಗಳನ್ನು ತಿದ್ದುಪಡಿ ಮಾಡುವ ಅಧಿಕಾರ ಪಾರ್ಲಿಮೆಂಟ್‌ಗೆ ಇಲ್ಲ ಎಂದು ಕೊಟ್ಟ ತೀರ್ಪನ್ನು ಅನುಕರಿಸಿತು.

ಸಂವಿಧಾನದ ಸಾರ್ವಭೌಮತೆ ಮತ್ತು ಪಾರ್ಲಿಮೆಂಟಿಗೆ ಸಂವಿಧಾನವನ್ನು ತಿದ್ದುಪಡಿ ಮಾಡುವ ಸೀಮಿತ ಅಧಿಕಾರದ ಬಗ್ಗೆ ತೀರ್ಪಿದ್ದರೂ ಕೂಡ ಕೆಲವು ರಾಜಕೀಯ ಪಕ್ಷಗಳು ಸಂವಿಧಾನದ ಮೂಲ ಲಕ್ಷಣಗಳನ್ನು ಬದಲಾಯಿಸುವಂತಹ ವ್ಯವಸ್ಥೆಯ ಬಗ್ಗೆ ಚರ್ಚಿಸುವುದನ್ನು ಕೇಳುತ್ತಿದ್ದೇವೆ. ಅಧ್ಯಕ್ಷೀಯ ಮಾದರಿ ಸರ್ಕಾರ ಈಗ ದೇಶಕ್ಕೆ ಅಗತ್ಯವಾಗಿದೆ ಎಂದು ಇಂದಿರಾ ಕಾಂಗ್ರೆಸ್‌ನ ಕೆಲವು ಧುರೀಣರು ಎಂಬತ್ತರ ದಶಕದಲ್ಲಿ ಗುಲ್ಲೆಬ್ಬಿಸಿದ್ದು, ಅಂದಿನ ರಾಜಕೀಯ ಪರಿಸ್ಥಿತಿಯಲ್ಲಿ ಕೇಂದ್ರೀಕೃತ ಅಧಿಕಾರದ ಬಗ್ಗೆ ಇವರಿಗಿದ್ದ ದಾಹವನ್ನು ಪರಿಚಯಿಸಿತು.

> *ದೇಶದ ಜನರ ಸ್ವಾತಂತ್ರ್ಯವನ್ನು ಕೆಲವೇ ಕೆಲವು ಅಧಿಕಾರಿಗಳು ಸಂಪೂರ್ಣವಾಗಿ ನಿಯಂತ್ರಿಸುವಂತೆ ಬಿಡ ಲಾಗದು. ಸ್ವಾತಂತ್ರ್ಯದ ಕಲ್ಪನೆ ಮತ್ತು ಜನತೆಯ ಸ್ವಾತಂತ್ರ್ಯ- ಇವೆರಡನ್ನು ಕುರಿತಂತೆ ನಮ್ಮ ಗಟ್ಟಿ ಅಭಿಪ್ರಾಯಗಳನ್ನು ಎಳ್ಳಷ್ಟೂ ಬದಲಿಸಿಕೊಳ್ಳಲು ಸಾಧ್ಯವಿಲ್ಲ. ಸರ್ಕಾರವು ತನ್ನನ್ನು ತಾನು ರಾಷ್ಟ್ರೀಯವೆಂದು ಬಣ್ಣಿಸಿಕೊಂಡ ಮಾತ್ರಕ್ಕೆ ಎಲ್ಲ ವಿಧದ ಅಧಿಕಾರಗಳನ್ನೂ ಅದಕ್ಕೆ ಕೊಡಲಾಗದು. ಕಾರ್ಯಾಂಗದ ಚಟುವಟಿಕೆಗಳನ್ನು ಪ್ರಜಾಪ್ರಭುತ್ವವಾದಿ ಶಾಸಕಾಂಗವು ನಿಯಂತ್ರಿಸಬೇಕಾದ್ದು ಸಹಜವಾಗಿದೆ. ನಿರಂಕುಶ ಕಾರ್ಯಾಂಗವಿದ್ದರೆ ಪ್ರಜಾಪ್ರಭುತ್ವವಾದಿ ಶಾಸಕಾಂಗ ಹೇಗೆ ತಾನೆ ಸಾಧ್ಯವಾದೀತು ?*
>
> ***ಪಂಡಿತ ಹೃದಯನಾಥ ಕುಂಜ್ರು**, 1949ರ ಫೆಬ್ರವರಿ 17ರಂದು ಸಂವಿಧಾನ ರಚನಾ ಸಭೆಯಲ್ಲಿ.*

1974ರಲ್ಲಿ ಅಂದಿನ ಪ್ರಧಾನಿ ಇಂದಿರಾ ಗಾಂಧಿಯವರು ಲೋಕಸಭೆಗೆ ಚುನಾಯಿತರಾಗಿದ್ದುದನ್ನು ಅಲಹಾಬಾದ್ ಉಚ್ಚನ್ಯಾಯಾಲಯ ಅನೂರ್ಜಿತಗೊಳಿಸಿದ ಹಿನ್ನೆಲೆಯಲ್ಲಿ ಕಾಂಗ್ರೆಸ್ ಪಕ್ಷ ಪಾರ್ಲಿಮೆಂಟ್‌ನಲ್ಲಿ ತನ್ನ ಬಹುಮತದ ದುರ್ಬಳಕೆ ಮಾಡಿ ಪ್ರಧಾನಮಂತ್ರಿಯವರ ಚುನಾವಣೆ ನ್ಯಾಯಾಲಯಗಳ ವ್ಯಾಪ್ತಿಗೆ ತರಕೂಡದೆಂಬ ಸಂವಿಧಾನದ ತಿದ್ದುಪಡಿ ಮಾಡಿದ್ದಿತು. ಮತ್ತೆ ಸರ್ವೋಚ್ಚ ನ್ಯಾಯಾಲಯ ಇದನ್ನು ನ್ಯಾಯಬಾಹಿರವೆಂದು ತೀರ್ಪು ನೀಡಿದ್ದುದನ್ನು ನಾವು ನೆನೆಸಿಕೊಳ್ಳಬಹುದು. ಅಂದಿನ ಬಂಡವಾಳಶಾಹಿ ಬಿಕ್ಕಟ್ಟು, ಇದರ ಹಿಂದೆಯೇ ಇಡೀ ದೇಶವನ್ನೇ ವ್ಯಾಪಿಸಿದ ಜನತೆಯ ಆಂದೋಲನ, ತುರ್ತು ಪರಿಸ್ಥಿತಿಯ ಘೋಷಣೆ, ಪ್ರಜಾಪ್ರಭುತ್ವದ ಹಕ್ಕುಗಳ ಚ್ಯುತಿ, ಸಂವಿಧಾನದ ಮೂಲಭೂತ ಹಕ್ಕುಗಳ ಅಮಾನತ್ತು ಇತ್ಯಾದಿ ಈಗ ಚರಿತ್ರೆಯಾಗಿದೆ.

**ಮುರಳಿಧರ್**

ಬಂಡವಾಳಶಾಹಿ ವರ್ಗ ತನ್ನ ಬಿಕ್ಕಟ್ಟನ್ನು ಬಗೆಹರಿಸಿಕೊಳ್ಳಲು ಜನತೆಯ ಹಕ್ಕುಗಳನ್ನು ದಮನ ಮಾಡುವುದನ್ನು ಭಾರತದಲ್ಲಿ ಮಾತ್ರವಲ್ಲ, ಇತರೇ ಬಂಡವಾಳಶಾಹಿ ದೇಶಗಳಲ್ಲೂ ಕಾಣುತ್ತೇವೆ. ಇತ್ತೀಚಿನ ವರ್ಷಗಳಲ್ಲಿ, ಬಂಡವಾಳಶಾಹಿ ವ್ಯವಸ್ಥೆ ಪ್ರಪಂಚದಾದ್ಯಂತ ಅತ್ಯಂತ ತೀವ್ರಮಟ್ಟದ ಬಿಕ್ಕಟ್ಟನ್ನು ಎದುರಿಸುತ್ತಿದೆ. ಈ ಬಿಕ್ಕಟ್ಟಿಗೆ ಭಾರತ ಹೊರತಲ್ಲ. ಈ ಹಿನ್ನೆಲೆಯಲ್ಲಿ ಫ್ಯಾಸಿಸ್ಟ್ ಶಕ್ತಿಯ ಎಲ್ಲ ಗುಣಗಳನ್ನು ಹೊಂದಿದ ಸಂಘ ಪರಿವಾರದ ರಾಜಕೀಯ ಮುಖವಾದ ಭಾರತೀಯ ಜನತಾ ಪಕ್ಷ ಸಂವಿಧಾನವನ್ನು ಪುನರ್ ಪರಿಶೀಲನೆಗೆ ಒಳಪಡಿಸಬೇಕೆಂಬ ವಿಚಾರ ಪ್ರಸ್ತಾಪಿಸಿದ್ದು ಆ ಪಕ್ಷದ ಒಳಾಲೋಚನೆಗಳಿಗೆ ಹಿಡಿದ ಕನ್ನಡಿ. ''ಒಂದು ದೇಶ, ಒಂದು ಸಂಸ್ಕೃತಿ'' ಎಂಬ ಘೋಷಣೆಯನ್ನು ಕೊಟ್ಟ ಪಕ್ಷ ಸಂವಿಧಾನದಲ್ಲಿ ಅಳವಡಿಕೆಯಾಗಿರುವ ಧರ್ಮನಿರಪೇಕ್ಷತೆ, ಸಮಾಜವಾದ, ಅಲ್ಪ ಸಂಖ್ಯಾತರಿಗೆ ಮತ್ತು ಪರಿಶಿಷ್ಟ ಜಾತಿಯವರಿಗೆ ಕೊಟ್ಟಿರುವ ಸವಲತ್ತು ಇತ್ಯಾದಿಗಳನ್ನು ಅಳಿಸಬೇಕೆಂದು ಹಂಬಲಿಸುತ್ತಿರುವುದನ್ನು ಮತ್ತು ಈ ಅವಕಾಶಕ್ಕಾಗಿ ಕಾಯುತ್ತಿರುವುದನ್ನು ನಾವು ಗಮನಿಸಬಹುದು. ಈ ಜನವೇನಾದರೂ ಅತ್ಯಂತ ಬಹುಮತದಿಂದ ಆರಿಸಿಬಂದಲ್ಲಿ ಸಂವಿಧಾನದ ಮೇಲೆ ದೊಡ್ಡ ಹಲ್ಲೆಯಾಗುವುದರಲ್ಲಿ ಸಂದೇಹವಿಲ್ಲ.

ಚರ್ಚೆಗೆ ಗ್ರಾಸವಾಗಿರುವ ಇತ್ತೀಚಿನ ಇನ್ನೊಂದು ವಿಷಯವೆಂದರೆ ಈಗ ಇರುವ ಬಹುಪಕ್ಷಗಳ ರಾಜಕೀಯ ವ್ಯವಸ್ಥೆಯ ಬದಲು ಎರಡು ರಾಜಕೀಯ ಪಕ್ಷಗಳ ವ್ಯವಸ್ಥೆ ಮೇಲೆಂಬುದು. ಈ ಆಲೋಚನೆ ನಮ್ಮ ಸಂವಿಧಾನದ ರೂಪರೇಷೆಗೆ ವಿರೋಧವಾಗಿದೆಯಲ್ಲದೆ, ಪ್ರಜಾಪ್ರಭುತ್ವದ ವ್ಯವಸ್ಥೆಯ ಸಡಿಲತೆಗೂ ಕಾರಣವಾಗಬಹುದು. ಫೆಡರಲ್ ವ್ಯವಸ್ಥೆಯನ್ನು ಸಂವಿಧಾನದ ಮೂಲ ಲಕ್ಷಣಗಳಲ್ಲೊಂದು ಎಂದು ಪರಿಗಣಿಸಿರುವಾಗ, ಪ್ರಾಂತೀಯ ಆಶೋತ್ತರಗಳನ್ನು ಹೊತ್ತ ಅನೇಕ ರಾಜಕೀಯ ಪಕ್ಷಗಳು ಹುಟ್ಟಿಕೊಂಡಿವೆ ಮತ್ತು ಹುಟ್ಟಿಕೊಳ್ಳುತ್ತಿವೆ. ಮೇಲ್ನೋಟಕ್ಕೆ ರಾಜಕೀಯ ಧ್ರುವೀಕರಣ ಕಂಡುಬಂದರೂ, ಅದು ಕೇವಲ ಅಲ್ಪಕಾಲಿಕವಾಗುತ್ತಿರುವುದನ್ನು ನಾವು ಕಾಣಬಹುದು. 1977ರ ಜನತಾಪಕ್ಷ ಮತ್ತು ಇತ್ತೀಚಿನ ಜನತಾದಳ ಇದಕ್ಕೆ ಉದಾಹರಣೆಗಳು. ವಿವಿಧ ಮತಗಳ, ಸಂಸ್ಕೃತಿಯ ಆಗರವಾಗಿರುವ ನಮ್ಮ ದೇಶದಲ್ಲಿ ''ಒಂದು ದೇಶ-ಒಂದು

(ಮುಂದಿನ ಪುಟಕ್ಕೆ)

# ಬ್ಯಾಂಕಿಂಗ್ ವ್ಯವಸ್ಥೆ ಮತ್ತು ಪುಟಿಯುವ ಚೆಕ್ಕುಗಳು



ಎರಡನೇ ಮಹಾಯುದ್ಧದನಂತರ ಅಮೆರಿಕ ಮತ್ತು ಸೋವಿಯತ್ ಒಕ್ಕೂಟದ ನಡುವಿನ ಶೀತಲ ಯುದ್ಧ ಪರಮಾವಧಿ ಮಟ್ಟವನ್ನು ತಲುಪಿದ್ದಾಗ, ಅಮೆರಿಕ ಸರ್ಕಾರದ ಕೆಲವು ಧುರೀಣರು ಒಂದು ಕುತ್ಸಿತವಾದ ರಹಸ್ಯ ಯೋಜನೆಯನ್ನು ತಯಾರಿಸಿದರು. ಆ ಯೋಜನೆಯ ಪ್ರಕಾರ ಸೋವಿಯೆತ್ ಒಕ್ಕೂಟದ ರೂಬಲ್‌ಗಳ ಎಲ್ಲಾ ಮೌಲ್ಯದ ನೋಟುಗಳನ್ನು ಕೋಟಿ ಕೋಟಿಗಟ್ಟಲೆ ಮುದ್ರಿಸಿ ವಿಮಾನಗಳಿಂದ ರಷ್ಯಾದ ಎಲ್ಲ ಕಡೆಯೂ ಉದುರಿಸುವುದು. ಆಗ ಸಾಚಾನೋಟು ಯಾವುದು, ಖೋಟಾ ನೋಟು ಯಾವುದು ಎಂದು ತೀವ್ರ ಗೊಂದಲ ಉಂಟಾಗಿ ಸೋವಿಯೆತ್ ಒಕ್ಕೂಟದ ಆರ್ಥಿಕ ವ್ಯವಸ್ಥೆ ಕುಸಿದುಬಿದ್ದು, ಜನರು ಯಾವ ವಸ್ತುವನ್ನೂ ಕೊಳ್ಳಲಾಗದೆ ಹಾಹಾಕಾರ ಪಡುವುದಲ್ಲದೆ, ಸರ್ಕಾರ ತರಗೆಲೆಯಂತೆ ಹಾರಿಹೋಗುತ್ತಿತ್ತು. ಆದರೆ ಈ ಹೇಯವಾದ ಯೋಜನೆಯನ್ನು ಬ್ರಿಟಿಷ್ ಸರ್ಕಾರ ಸಾರಾಸಗಟಾಗಿ ತಳ್ಳಿಹಾಕಿದುದರಿಂದ ಯೋಜನೆ ಕಾರ್ಯರೂಪಕ್ಕೆ ಬರಲಿಲ್ಲ.

ಈಗ ನೀವು ಕೇಳಬಹುದು: ರಷ್ಯಾ ಕೂಡ ಅಮೆರಿಕದ ಡಾಲರುಗಳನ್ನು ಹಾಗೆಯೇ ಮುದ್ರಿಸಿ, ಅಮೆರಿಕದ ಮೇಲೆ ಮಳೆಗರೆಯಬಹುದಾಗಿತ್ತಲ್ಲ, ಎಂದು. ಆದರೆ ಅಮೆರಿಕಾದಲ್ಲಿ ಬ್ಯಾಂಕಿಂಗ್ ವ್ಯವಸ್ಥೆ ಬಹು ಆಳವಾಗಿ, ಬಹು ವಿಸ್ತಾರವಾಗಿ ಹರಡಿಕೊಂಡಿರುವುದರಿಂದಲೂ, ಕ್ರೆಡಿಟ್ ಕಾರ್ಡ್ ವ್ಯವಸ್ಥೆಯು ಭದ್ರವಾಗಿ ಬೇರೂರಿರುವುದರಿಂದಲೂ ಈ ತಿರುಗುಬಾಣ ಅಮೆರಿಕದ ಜನಜೀವನದ ಮೇಲೆ ಪರಿಣಾಮ ಬೀರುತ್ತಿರಲಿಲ್ಲ.

ನಮ್ಮ ನೆರೆಯ ದೇಶ ಯಾವುದಾದರೂ ಭಾರತದ ಮೇಲೆ ರೂಪಾಯಿಯ ನೋಟುಗಳ ಮಹಾಪೂರವನ್ನು ಹರಿಸಿದರೆ, ನಮ್ಮ ಆರ್ಥಿಕ ವ್ಯವಸ್ಥೆ ದಿವಾಳಿ ತೆಗೆದು ಎಲ್ಲೆಲ್ಲೂ ಅಲ್ಲೋಲ ಕಲ್ಲೋಲ ಉಂಟಾಗುವುದರಲ್ಲಿ ಸಂದೇಹವಿಲ್ಲ. ಈಗ ಇರುವ ಖೋಟಾ ನೋಟುಗಳ ಹಾವಳಿಯೇ ಸಾಕಷ್ಟು ಗಾಬರಿ ಹುಟ್ಟಿಸುವಂತಹುದಾಗಿದ್ದು ಭಾರತವು, ಎಲ್ಲ ಮುಂದುವರಿದ ದೇಶಗಳಂತೆ, ಬ್ಯಾಂಕಿಂಗ್ ವ್ಯವಸ್ಥೆಯನ್ನು ಭದ್ರಪಡಿಸಿ ಕರೆನ್ಸಿ ನೋಟುಗಳ ಚಲಾವಣೆಯನ್ನು ಗಣನೀಯವಾಗಿ ಕಡಿಮೆ ಮಾಡಬೇಕು. ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಜನರಿಗೆ ನಂಬಿಕೆ ಬರಬೇಕಾದರೆ ಸರ್ಕಾರ ಈಗಿನ ಸವಕಲು ಕಾನೂನನ್ನು ಸಾರಾಸಗಟಾಗಿ ಅಳಿಸಿಹಾಕಬೇಕು.

ಬ್ಯಾಂಕಿಂಗ್ ಕಾಯಿದೆಯನ್ನು ಪುನರ್‌ರಚಿಸಿ, ಬ್ಯಾಂಕುಗಳು ಒಂದು ಕಡೆ ರಣಹದ್ದುಗಳಂತೆ ಅಸಹಾಯಕರನ್ನು ಶೋಷಿಸುವುದನ್ನು ಮತ್ತು ಇನ್ನೊಂದು ಕಡೆ ಬಲಿಷ್ಠರಿಗೆ ಕೊಟ್ಟ ಕೋಟ್ಯಾಂತರ ರೂಪಾಯಿಗಳ ಸಾಲದ ಅಸಲು ಮತ್ತು ಬಡ್ಡಿಯನ್ನು ಮನ್ನಾ ಮಾಡುವುದನ್ನು ತಡೆಯಬೇಕು. ಸಣ್ಣ ಕೈಗಾರಿಕೆಗಳಿಗೆ ಹಾಗೂ ಮನೆ ಕಟ್ಟುವುದಕ್ಕಾಗಿ ಕೊಡುವ ಸಾಲಗಳಿಗೆ ಅತಿ ಕಡಿಮೆ ದರದಲ್ಲಿ ಸರಳ ಬಡ್ಡಿಯನ್ನು ವಿಧಿಸಬೇಕು. ಬ್ಯಾಂಕುಗಳು ಠೇವಣಿದಾರರ ಗೌಪ್ಯವನ್ನು ಕಟ್ಟುನಿಟ್ಟಾಗಿ ಕಾಪಾಡಿಕೊಂಡು ಬರುವಂತೆ ಕಾಯಿದೆ ರೂಪಿಸಿ, ತೆರಿಗೆಗಳನ್ನು ಸರಳಗೊಳಿಸಿ, ತೆರಿಗೆ ಕಾಯಿದೆಯನ್ನು ಉಲ್ಲಂಘಿಸಿದವರಿಗೆ ತೀವ್ರ ಶಿಕ್ಷೆಯನ್ನು ವಿಧಿಸಿದರೆ, ಕಪ್ಪು ಹಣ ಗಣನೀಯವಾಗಿ ಕಡಿಮೆಯಾಗಿ ರೂಪಾಯಿಯ ಮೌಲ್ಯ ಹೆಚ್ಚುವುದರಲ್ಲಿ ಸಂದೇಹವಿಲ್ಲ. ಇಂಥ ಕ್ರಾಂತಿಕಾರಿ ಬದಲಾವಣೆಗಳನ್ನು ತರಲು ಮನಸ್ಸಿಲ್ಲದ ಸರ್ಕಾರ, ಬ್ಯಾಂಕಿಂಗ್ ವ್ಯವಸ್ಥೆಯನ್ನು ಭದ್ರಪಡಿಸುವ ಉದ್ದೇಶದಿಂದ 1989ರ ಏಪ್ರಿಲ್ 1ರಿಂದ ಜಾರಿಗೆ ಬರುವ ಹಾಗೆ ನೆಗೋಷಿಯಬಲ್ ಇನ್‌ಸ್ಟ್ರುಮೆಂಟ್ಸ್ ಕಾಯಿದೆಗೆ ಒಂದು ತಿದ್ದುಪಡಿ ಮಾಡಿತು. ಈ ತಿದ್ದುಪಡಿಯ ಸಾರಾಂಶವೇನೆಂದರೆ,

ಅ) 1. ನೀವು ಇನ್ನೊಬ್ಬ ವ್ಯಕ್ತಿಗೆ ಕೊಡಬೇಕಾದ ಸಾಲವನ್ನು ಪಾವತಿ ಮಾಡುವುದಕ್ಕೆ ಬ್ಯಾಂಕಿನ ನಿಮ್ಮ ಖಾತೆಯ ಮೇಲೆ ಚೆಕ್ ಬರೆದು ಕೊಟ್ಟಿದ್ದು,

2. ಆ ಚೆಕ್ಕನ್ನು ಪಡೆದುಕೊಂಡವರು ಸಕಾಲದಲ್ಲಿ ಅದನ್ನು ಬ್ಯಾಂಕಿಗೆ ಸಲ್ಲಿಸಿದಾಗ, ಆ ಚೆಕ್, ನಿಮ್ಮ ಖಾತೆಯಲ್ಲಿ ಹಣ ಇಲ್ಲವೆಂದು ವಾಪಸ್ ಆದರೆ,

**ಎಸ್. ಆರ್. ಗೌತಮ್**

3. ಹಾಗೆ ವಾಪಸ್ ಆಗಿದೆಯೆಂದು ಬ್ಯಾಂಕಿನಿಂದ ಹಿಂಬರಹ ಬಂದ 15 ದಿವಸಗಳ ಒಳಗೆ ನಿಮ್ಮಿಂದ ಚೆಕ್ ಪಡೆದವರು ನಿಮಗೆ ನೋಟೀಸ್ ಕೊಟ್ಟು ಹಣ ಕೊಡಬೇಕೆಂದು ತಗಾದೆ ಮಾಡಿದ್ದು,

4. ಆ ನೋಟೀಸ್ ತಲುಪಿದ 15 ದಿವಸಗಳ ಒಳಗೆ ಹಣವನ್ನು ನೀವು ಪಾವತಿ ಮಾಡದೆ ಇದ್ದರೆ,

5. ಹಣ ಕೊಡಬೇಕಾದ ವಾಯಿದೆ ಮುಗಿದ ನಂತರ ಒಂದು ತಿಂಗಳ ಒಳಗೆ ನಿಮ್ಮ ಮೇಲೆ ಮೊದಲನೇ ದರ್ಜೆಯ ನ್ಯಾಯಿಕ ದಂಡಾಧಿಕಾರಿಯವರ ನ್ಯಾಯಾಲಯದಲ್ಲಿ ಕ್ರಿಮಿನಲ್ ದೂರನ್ನು ಕೊಡಬಹುದು.

ಆ) 1. ನೀವು ನ್ಯಾಯಾಲಯದಿಂದ ನೋಟೀಸ್ ಬಂದ ಮೇಲೆ ನ್ಯಾಯಾಲಯಕ್ಕೆ ಹಾಜರಾಗಿ ಜಾಮೀನು ಕೊಡಬೇಕು; ಇಲ್ಲವೇ ಜೈಲಿಗೆ ಹೋಗಬೇಕು.

2. ವಿಚಾರಣೆಯ ನಂತರ ನೀವು ತಪ್ಪಿತಸ್ಥರೆಂದು ತೀರ್ಮಾನವಾದರೆ, ಒಂದು ವರ್ಷದವರೆಗೆ ಸಜಾ, ಅಥವಾ ಚೆಕ್ ಮೊತ್ತದ ಎರಡರಷ್ಟು ದಂಡ ಅಥವಾ ಎರಡೂ ಸೇರಿದಂತೆ ಶಿಕ್ಷೆಯನ್ನು ಅನುಭವಿಸಬೇಕು.

ಇಂಥದೊಂದು ತಿದ್ದುಪಡಿಯನ್ನು ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಜನರಿಗೆ ವಿಶ್ವಾಸ ಹೆಚ್ಚಲಿ ಎಂದು ತರಲಾಗಿದೆ. ಈ ತಿದ್ದುಪಡಿಯ ಹೆಚ್ಚಿನ ವಿವರಗಳನ್ನು ಮತ್ತು ಇದರಿಂದ ಯಾವ ರೀತಿಯ ಪರಿಣಾಮ ಉಂಟಾಗಿದೆ ಎಂಬುದನ್ನು ಮುಂದಿನ ಭಾಗದಲ್ಲಿ ನೋಡೋಣ.

ಶ್ರೀ ಎಸ್. ಆರ್. ಗೌತಮ್
ನಂ. 527, 17ನೇ ಕ್ರಾಸ್, 1ನೇ ಬ್ಲಾಕ್, ಆರ್.ಟಿ.ನಗರ
ಬೆಂಗಳೂರು - 560 032

> ಸೃಷ್ಟಿಕಥೆ ಕಟ್ಟು ಕಥೆ; ವಿಲಯ ಕಥೆ ಬರಿಯ ಕಥೆ ।
> ಹುಟ್ಟುಸಾವುಗಳೊಂದೆ ಪುರುಳಿನೆರಡು ದಶೆ ॥
> ನಿತ್ಯ ಪರಿವರ್ತನೆಯ ಚೈತನ್ಯ ನರ್ತನೆಯೆ ।
> ಸತ್ಯ ಜಗದಲಿ ಕಾಣೊ - ಮಂಕುತಿಮ್ಮ
>
> ಡಿವಿಜಿ

*(ಹಿಂದಿನ ಪುಟದಿಂದ)*

**ಸಂವಿಧಾನಕ್ಕೆ ಕಾಯಕಲ್ಪ ಯಾವ ದಿಕ್ಕಿನಲ್ಲಿ ?**

ಸಂಸ್ಕೃತಿ'' ಘೋಷಣೆ ಎಷ್ಟು ಅರ್ಥಹೀನವಾಗುತ್ತದೋ ಎರಡೇ ಪಕ್ಷಗಳ ರಾಜಕೀಯ ವ್ಯವಸ್ಥೆಯ ಪರಿಕಲ್ಪನೆ ಸಹ ಅಷ್ಟೇ ಅರ್ಥಹೀನವಾಗುತ್ತದೆ. ಚುನಾವಣಾ ಆಯೋಗದ ಇತ್ತೀಚಿನ ವರದಿಯ ಪ್ರಕಾರ ನಮ್ಮ ದೇಶದಲ್ಲಿ ಸಿದ್ಧಾಂತದ ಆಧಾರದ ಮೇಲೆ, ಪ್ರಾಂತೀಯ ಆಧಾರದ ಮೇಲೆ, ಮತೀಯ ಆಧಾರದ ಮೇಲೆ ನೋಂದಾಯಿಸಿದಂತಹ 550 ರಾಜಕೀಯ ಪಕ್ಷಗಳಿವೆ. ವಸ್ತುಸ್ಥಿತಿ ಹೀಗಿದ್ದಾಗ ಕೇವಲ ಎರಡು ಪಕ್ಷಗಳ ರಾಜಕೀಯ ವ್ಯವಸ್ಥೆಯ ಬಗ್ಗೆ ಮಾತನಾಡುವುದು ಬಾಲಿಶತನವಾದೀತು. ಆ ವ್ಯವಸ್ಥೆಯಲ್ಲಿ ಸೈದ್ಧಾಂತಿಕ ಭಿನ್ನತೆಗೆ ಅವಕಾಶವಿರುವುದಿಲ್ಲ. ಇವತ್ತು ನಾನು, ನಾಳೆ ನೀನು ಎಂಬ ಕಳ್ಳ ಒಡಂಬಡಿಕೆಯೇ ಅದಕ್ಕೆ ಆಧಾರ. ದುಡಿಮೆ ಮಾಡಿ ಜೀವನ ಹೊರೆಯುವವರ ಪಕ್ಷ ಮತ್ತು ಬೇರೆಯವರ ದುಡಿಮೆಯಿಂದ ಲಾಭ ಪಡೆಯುವವರ ಪಕ್ಷ ಎಂದೇನಾದರೂ ಎರಡು ಪಕ್ಷಗಳನ್ನು ರಚಿಸುವುದಾದರೆ ಆಗ ಮುಸುಕಿನಲ್ಲಿ ರಾಜಕೀಯ ಮಾಡುವ ಪೊಳ್ಳುತನ ಬಯಲಾಗುತ್ತದೆ.

ಬಂಡವಾಳಶಾಹಿ ರಾಜಕೀಯ ಪಕ್ಷಗಳು ತಮ್ಮ ಬಿಕ್ಕಟ್ಟನ್ನು ಪರಿಹರಿಸಿಕೊಳ್ಳುವ ಸಲುವಾಗಿ ಜನತೆಯ ಹಕ್ಕುಗಳನ್ನು ಮೊಟಕು ಮಾಡಲು, ಸಂವಿಧಾನದ ತಿದ್ದುಪಡಿ ಮಾಡಲು ಹೊರಟಲ್ಲಿ ಅದನ್ನು ವಿರೋಧಿಸುವುದು ಜನತೆಗೆ ಪರಮ ಕರ್ತವ್ಯವಾಗುತ್ತದೆ.

ಶ್ರೀ ಮುರಳೀಧರ್
[illegible]
[illegible]

# ಹೀಗೊಬ್ಬ ಜನಸಾಮಾನ್ಯ

ವ್ಯಾಪಾರಿಗಳಿಂದ ಟ್ರಾಫಿಕ್‌ಗೆ ತೊಂದರೆ, ಪಾದಚಾರಿಗಳಿಗೆ ಅಡಚಣೆ, ಮುಖ್ಯವಾಗಿ 'ಸುಂದರ' ಬೆಂಗಳೂರಿನ ಅಂದ ಕೆಡುತ್ತೆ ಅಂತ ಯಾರಾದರೊಬ್ಬರು ಅಧಿಕಾರಿಗೆ ದಿಢೀರನೆ ಜ್ಞಾನೋದಯವಾಗುತ್ತೆ. ದಿಢೀರ್ ಆಜ್ಞೆ ಹೊರಡುತ್ತೆ. ಮಾಮೂಲಿ ತಿನ್ನುವ ಪೋಲೀಸರಿಗೆ ಕೊಂಚ ಕಷ್ಟವೇ ಆದರೂ ಆ ಸಿಟ್ಟೂ ಸೇರಿದಂತೆ ಬಡಪಾಯಿಗಳ ಮೇಲೆ ಹಾಯುತ್ತಾರೆ.

ಯಾವ ಕ್ಷಣದಲ್ಲಾದರೂ ಎತ್ತಿಕೊಂಡು ಓಡಬೇಕು. ಆ ಮಧ್ಯೆ ಲಾರಿ ಏಟಿನಿಂದ ತಪ್ಪಿಸಿಕೊಳ್ಳಬೇಕು. ಪ್ರತಿಕ್ಷಣವೂ ಅನಿಶ್ಚಿತತೆ-ಭಯ ಅವರ ಕಣ್ಣುಗಳಲ್ಲಿ. ಇದರ ಮಧ್ಯೆ ವ್ಯಾಪಾರಾನೂ ಆಗಬೇಕು. ಇಂಥ ಸಂದರ್ಭ ಒದಗಿದ್ದನ್ನು ಬಳಸಿಕೊಂಡು ಒಂದಕ್ಕೆರಡು ಪದಾರ್ಥ ಎತ್ತಿಕೊಂಡು ದುಡ್ಡು ಕೊಡದೆ ತಾವು ಚಾಣಾಕ್ಷರೆಂದೂ, ಇವತ್ತಿನ ಭವಿಷ್ಯದಲ್ಲಿ ಲಾಭವಿದೆ ಎಂತ ಬರೆದಿತ್ತೆಂದೂ ಹಿಗ್ಗುವ ಬಿಳಿ ಕಾಲರಿನ ಕಳ್ಳರಲ್ಲ, ಖದೀಮ ಕಳ್ಳರಿಗೇನೂ ಕಡಿಮೆ ಇಲ್ಲ. ಯಾರದೋ ಗಡ್ಡಕ್ಕೆ ಬೆಂಕಿ ಹಚ್ಚಿ ತಮ್ಮ ಸಿಗಾರು ಅಂಟಿಸಿಕೊಳ್ಳುವುದು ಎಂದರೆ ಇದೇ ಏನೋ ?

* * *

ಅವನು ವ್ಯಾಪಾರ ಮಾಡುತ್ತಿದ್ದ. ಅವತ್ತೇನೋ ಭರ್ಜರಿ ಇತ್ತು ವ್ಯಾಪಾರ. ಅವನೊಳಗೆ ನಾಳೆಗಳ ಕನಸೂ ರಂಗೇರುತ್ತಿತ್ತು.

ಅಷ್ಟರಲ್ಲಿ ಬೂಟುಗಳ ಸದ್ದು... ಗಡಿಬಿಡಿಯ ಮಾತು. ''ಎತ್ರಲೇ ಎತ್ರೋ... ನಿಮ್ಮಂಗಡಿಗಳನ್ನ..'' ಎಂಬ ಕೂಗು ಎಲ್ಲರಿಗೂ ಆತಂಕ, ಭಯ, ಆಶ್ಚರ್ಯ..''ಯಾಕೆ ? ಯಾಕಂತೆ ?''

''ಎತ್ತೋ ಯಾಕ್ಹಂಗೆ ನಿಂತಿದಿ ! ಹಾಕ್ತೀನ್ನೋಡೀಗ....'' ಲಾರಿ ಮೇಲೆತ್ತುತ್ತ ಬೂಟುಗಾಲಿಂದ 'ಅಂಗಡಿ'ನ ಒದ್ದ.

ಸರಸರನೆ ಪದಾರ್ಥಗಳು ಬ್ಯಾಗಿನಲ್ಲಿ ಅಡಗಿದವು. ಆದರೆ ನಾಳೆ ಹೇಗೆ ? ಎಲ್ಲಿ ? ಏನು ಗತಿ ?

ಆರಾಮವಾಗಿ ನಾಲ್ಕಾರು ವರ್ಷಗಳಿಂದ ಅದೇ ವ್ಯಾಪಾರ ಸಾಗಿತ್ತು. ಅದ್ಯಾವೋನೋ ಮಾರುತಿ ಕಾರಿನ ಮಹಾನುಭಾವ ಬಂದ. ಫುಟ್ಪಾತಿನ ಮುಂದೇಸೆ ನಿಲ್ಲಿಸಿ ಬಟ್ಟೆ ವ್ಯಾಪಾರ ಪ್ರಾರಂಭಿಸಿದ. ಅವನಿಗೆ ಗಿರಾಕೀನೂ ಬಹಳ ಇತ್ತು. ಸಖತ್ ಕಾಸು ಮಾಡಿದ. ಒಂದು ಹುಡುಗಿ ಮಾತ್ರ ಅವನು ಕೊಟ್ಟ ಬಟ್ಟೆ ಚೆನ್ನಾಗಿಲ್ಲ ಅಂತ ತಕಾರಾರು ತೆಗೆದ್ಲು... ಅವನಿಗೇನು ತಲೆ ತಿರುಗಿತ್ತೋ ಬಾಯಿಗೆ ಬಂದ್ಹಂಗೆ ಮಾತಾಡಿ ಅವಮಾನ ಮಾಡಿಬಿಟ್ಟ. ಹುಡುಗಿ ಅಳ್ತಾ ಇತ್ತು. ಆಕೆ ಮನೆಯೋರಿರಬೇಕು. ಧಡಾಬಡಾಂತ ಬಂದಿದ್ದೋ ಅವ್ನಿಗೆ ನಾಲ್ಕು ಇಕ್ಕಿದ್ರು.. ಕೆಟ್ಟ ಬೈಗಳು ಬೇರೆ..

ಅಂತೂ ಇಂತೂ ಸ್ಟೇಷನ್ನಿಗೆ ಕಂಪ್ಲೇಂಟ್ ಹೋಯ್ತು. ''ಎಲ್ಲ ಅಂಗಡೀನೂ ಎತ್ತಿಸ್ತೀನಿ...'' ಅಂದುಬಿಟ್ರಂತೆ ದೊಡ್ಡೋರು.

ಇದಾದ ಮೂರು ತಿಂಗಳು ಅಂಗಡೀನೇ ಇಲ್ಲ.. ಹ್ಯಾಗೆ ಬದುಕೋದಪ್ಪಾ... ಅವು ಎಂಥ ಕಷ್ಟದ ದಿನಗಳು !

ಇದು ಬೀದಿ ಬದಿ ವ್ಯಾಪಾರಿ ಹರೀಶನ ಅನುಭವ.

ಜನಸಾಮಾನ್ಯರನ್ನು ಭೇಟಿ ಮಾಡುವ ಸಲುವಾಗಿ 'ಹೊಸತು' ಹೊರಟಾಗ ಎದುರಾದವರು ಹರೀಶ್. ಸುಮಾರು ಮೂವತ್ತಾರರ ಪ್ರಾಯ. ಕೆಳಮಧ್ಯಮ ವರ್ಗಕ್ಕೆ ಹೋಲಿಸಬಹುದಾದ ಹರೀಶರ ವ್ಯಾಪಾರ 'ಭಾರೀ' ಅಲ್ಲ. ರಸ್ತೆ ಬದಿಯ ಪುಟ್ಟ ಬಟ್ಟೆ ಅಂಗಡಿ.. ಫುಟ್‌ಪಾತ್ ಅಂಗಡಿ. ಅಲ್ಲಿರುವುದೆಲ್ಲ ಕರ್ಚೀಫ್, ಫುಟ್‌ರಗ್, ಟವಲ್, ನ್ಯಾಪ್‌ಕಿನ್, ದಿಂಬು ಕವರು, ಕರ್ಟನ್‌ಗಳು, ಒಳ ಉಡುಪುಗಳು ಇತ್ಯಾದಿ. ಹೆಚ್ಚಿನಂಶ ವ್ಯಾಪಾರ ಆಗುವುದು ಕರ್ಚೀಫ್ ಮತ್ತು ಫುಟ್‌ರಗ್‌ಗಳೇ ಅಂತೆ. ಬಹುತೇಕ ದಿನ ಬಳಕೆಯ ಬಟ್ಟೆಗಳಿರುವ ಈ ಪುಟ್ಟ ಅಂಗಡಿಯ ಮಾಲೀಕ ಹರೀಶ್. ಹರೀಶನ ತಂದೆ ಮಾರ್ಕೆಟ್ ಬಳಿ ಬಟ್ಟೆ ಅಂಗಡೀಲಿ ಕೆಲಸ ಮಾಡಿದರೆ, ಹೆಣ್ಣು ಕೊಟ್ಟ ಮಾವನೂ ಇಂಥದೇ ಒಂದು ವ್ಯಾಪಾರ ಮಾಡುತ್ತಾನೆ.



ಕಾಯಕನಿರತ ಹರೀಶ್

ಎಸ್.ಎಸ್.ಎಲ್.ಸಿ.ವರೆಗೆ ಓದಿರುವ ಹರೀಶ್ ಕೆಲವು ಕಾಲ ಮುದ್ರಣಾಲಯದಲ್ಲಿ ಕೆಲಸ ಮಾಡಿದವರಂತೆ. ''ಅವರಿವರ ಕೈಕೆಳಗೆ ದುಡಿಯುವುದಕ್ಕಿಂತ ಸ್ವತಂತ್ರವಾಗಿ ಬದುಕೋದು ಲೇಸು ಅನಿಸಿತು. ನನ್ನ ಹೆಂಡತೀನೂ ಹಾಗೇ ಅಂದಳು. ಹದಿನೈದು ಸಾವಿರ ರೂಪಾಯಿ ಸಾಲ ಮಾಡಿ ತಂದೆ. ಹತ್ತು ಸಾವಿರ ಬಂಡವಾಳ ಹಾಕಿ ಈ ವ್ಯಾಪಾರ ಪ್ರಾರಂಭ ಮಾಡಿದ್ದೇನೆ. 5 ವರ್ಷ ಆಯ್ತು. ಪೂರ್ತಿ ಹಣ ಬಂದಿದೆ ಎನ್ನಲಾರೆ. ಮತ್ತೆ ಮತ್ತೆ ಹಣ ಹಾಕಿ ಹೊಸ ಬಟ್ಟೆ ಖರೀದಿ ಮಾಡಬೇಕು, ಮನೆ ನಡೀಬೇಕು. ಚಿಕ್ಕಪೇಟೇಲಿ ಹೋಲ್‌ಸೇಲ್‌ನಲ್ಲಿ ತರ್ತೀನಿ. ದಿನಕ್ಕೆ 100-150 ರೂಪಾಯಿ ಸಿಗುತ್ತೆ. ಈ ಅಂಗಡಿಗೇಂತ ಖರ್ಚಾಗೋದು 15-20 ರೂಪಾಯಿ. ಭಾನುವಾರ, ಹಬ್ಬ ಹರಿದಿನ ಅಂದರೆ 500 ರೂಪಾಯಿ ವ್ಯಾಪಾರಾನೂ ಆಗುತ್ತೆ...'' ಎಂದು ಕಷ್ಟ-ಸುಖ ಹೇಳುತ್ತ ಹೋಗುವ ಹರೀಶ್‌ಗೆ ಈ ವ್ಯಾಪಾರ ಮುಜುಗರದ ಸಂಗತಿಯೇನೂ ಅಲ್ಲ. ಸರೀಕರ ಹಾಗೆ ತಾನೂ ಅಂಗಡಿ-ವ್ಯಾಪಾರ- ಶ್ರೀಮಂತಿಕೆಯ ಕನಸು ಕಂಡಿಲ್ಲವೆಂದಲ್ಲ. ಅದಕ್ಕೆಲ್ಲ ಕಾಯಬೇಕು ಎಂತಲೂ ಗೊತ್ತು. ಈಗಿರುವ ಸ್ಥಳದಲ್ಲಿ ಪದೇ ಪದೇ ಅಂಗಡಿ ಎತ್ತಿಕೊಂಡು ಓಡಬೇಕಾಗಿಲ್ಲ. ಅದು ಜನ ನಿಬಿಡ ಪ್ರದೇಶಗಳಲ್ಲಿ ಬರುವ ಸಮಸ್ಯೆ.

ಮಳೆ ಬಂದರೆ ತೊಂದರೆ. ಒಮ್ಮೊಮ್ಮೆ 3-4 ದಿನ ಜಿಟಿ ಜಿಟಿ ಮಳೆ ಹಿಡಿದರೆ ಅಂಗಡಿ ಹಾಕೋಕೆ ಆಗಲ್ಲ. ಅದೇ ರಜೆ ಅಂದುಕೋಬೇಕಷ್ಟೆ. ಇವತ್ತೆಲ್ಲ 3-4 ಬ್ಯಾಗಿನಲ್ಲಿ ತುಂಬಿಸಿದರೆ ಅಂಗಡಿ ಅಡಗಿಹೋಗುತ್ತೆ. ಹರಡಿದರೆ ಒಂದೂವರೆ ಗಜದಗಲ. ಹಿಂದಿರುವ ದೊಡ್ಡ ಅಂಗಡಿಯೋರು ಆಕ್ಷೇಪ ಎತ್ತೋದರಿಂದ ಫುಟ್‌ಪಾತಿನಲ್ಲಿ ಠಿಕಾಣಿ. ಹಿಂದಿನ ದೊಡ್ಡಂಗಡಿಯವರು ರಜಾ ದಿನ ಮುಚ್ಚಿದಾಗ ಹರೀಶನ ಅಂಗಡಿ ಒಂದಿಷ್ಟು ಹಿಗ್ಗಿಕೊಳ್ಳುತ್ತೆ. ಆ ಅಂಗಡಿಯವರ ತಕರಾರೂ ಇದ್ದೇ ಇದೆ. ಅಣ್ಣ-ಅಪ್ಪ ಅಂತ ಓಲೈಸುತ್ತ ಹೇಗೋ ದಿನಕಳೆಯುತ್ತಿದ್ದಾರೆ ಹರೀಶ್.

ವಿಪರೀತ ಚೌಕಾಶಿ ಮಾಡೋ ಗಿರಾಕಿಗಳು ಅಂದ್ರ ತಲೆನೋವೆ. ಆದರೆ ಬೀದಿ ಬದಿ ವ್ಯಾಪಾರ ಅಂದ್ರೇನೆ ಚೌಕಾಶಿ ಮಾಡಬೇಕೂಂತ ಅಂದ್ಕೊಂಡೇ ಬಂದಿರ್ತಾರಲ್ಲ. ಅವರನ್ನ ಆಕರ್ಷಿಸಿ ಬಣ್ಣ, ಬಾಳಿಕೆ ಅಂತ ಒಪ್ಪಿಕೊಳ್ಳುವ ಹಾಗೆ ಮಾಡಬೇಕು. ಇಷ್ಟಾದರೂ ಏನೋ ಕಾರಣ ಹೇಳಿ ವಾಪಾಸ್ ತಗೊಳ್ಳಿ ಅಂತ ಬರೋರಿಗೇನೂ ಕಡಿಮೆಯಿಲ್ಲ. ''ನೋಡಿ ತಗೊಳ್ಳಿ. ನಾಳೆ ಸಂಜೆ ಒಳಗೆ ವಾಪಸ್ ಕೊಟ್ಟು ಬದಲಾಯಿಸಿಕೊಳ್ಳಿ. ಕಾರಣ ಸರಿಯಾಗಿರಬೇಕು. ಇಲ್ಲಾಂದ್ರೆ ತಗೊಳ್ಳಲ್ಲ..'' ಅಂತ ತಾಕೀತು ಮಾಡಿ ಕಳಿಸಿದರೂ '' ಇದು ಬೇಡ, ಬೇರೆ ಇಲ್ಲಿ ಚೆನ್ನಾಗಿಲ್ಲ. ಕಾಸು ಹಿಂದಕ್ಕೆ ಕೊಡಿ'' ಅನ್ನುವವರು ಬಹಳ. '' ಇವರಿಗೆಲ್ಲ ಅಂಗಡಿ ಮಾಲು ಬೆಲೆ ಜಾಸ್ತಿ ಆದರೂ ಒಳ್ಳೇದೂಂತ ನಂಬಿಕೆ. ಹಾಗೆ ನೋಡಿದ್ರೆ ಇದೂ ಅದೂ ಒಂದೇನೇಯೆ. ಅವರು ಅಂಗಡಿ ಬಾಡಿಗೆ, ಖರ್ಚು, ಸಂಬಳಗಳು ಎಲ್ಲ ಸೇರಿಸಿ ಇದರ ಬೆಲೆ ಹೆಚ್ಗೆ ಮಾಡುತ್ತಾರೆ. ನಾವು ಅಸಲಿನ ಮೇಲೆ ಸ್ವಲ್ಪ ಕಡಿಮೆ ಲಾಭ ಇಟ್ಟುಕೋತೀವಿ. ನಮಗೆ ಅವರ ಥರಾ ಏನೇನೋ ಖರ್ಚಿಲ್ಲವಲ್ಲ. ಇದೆಲ್ಲ ಹ್ಯಾಗೆ ತಿಳಿಸಿ ಹೇಳೋದು ಹೇಳಿ ?'' ಇಂಥ ಕಾರಣಗಳಿಂದಾಗಿ ಇವತ್ತು 200 ರೂಪಾಯಿ ವ್ಯಾಪಾರ ಆದ್ರೂ, ನಾಳೆ-ನಾಳಿದ್ದಿನವರೆಗೆ ಅದು ಗ್ಯಾರಂಟಿ ಅನ್ನಿಸಿರೋಲ್ಲವಂತೆ.

''ನನಗೂ ಅಂಗಡಿ ಇಡಬೇಕು, ನಮ್ಮ ಜನಾಂಗದವರ ಹಾಗೆ ಶ್ರೀಮಂತ ಅನ್ನಿಸಿಕೋಬೇಕು, ಅದ್ದೂರಿಯಾಗಿ ಮಗಳ ಮದುವೆ ಮಾಡಬೇಕು, ಅನ್ನೋ ಆಸೆ ಇದೆ. ಅದೆಲ್ಲ ಬರೀ ಕನಸು ಅನಿಸಿ ಬಿಡುತ್ತೆ,'' ಎನ್ನುವ ಹರೀಶನಿಗೆ ಕಾರ್ಪೊರೇಷನ್‌ನವರು ಅಲ್ಲೆಲ್ಲೋ ಮಳಿಗೆಗಳನ್ನು ಕೊಡ್ತಿದಾರಂತೆ ಅನ್ನುವ ಸುದ್ದಿ ಗೊತ್ತಾಗಿದೆ. ''ಎಲ್ಲೀಂತ ಹೇಳ್ತಿಲ್ಲ. ಮತ್ತೆ ಅರ್ಜಿ ಫಾರಂ ಸಹ ದುಡ್ಡು ಕೊಡದೆ ಸಿಗಲ್ಲಂತೆ. ವಶೀಲಿ ಇದ್ದೋರಿಗೆ ಮಾತ್ರ ಸಿಗುತ್ತಂತೆ. ನಾನ್ಯಾರ ವಶೀಲಿ ಮಾಡ್ಲಿ ಹೇಳಿ,'' ಎಂದು ಗೊಣಗುವ ಹರೀಶ್ ಮುಖದಲ್ಲಿ ನಿರಾಶೆಯ ಭಾವ ಸುಳಿದು ಮರೆಯಾಗುತ್ತದೆ.

ಎರಡು ಮಕ್ಕಳಿವೆ. ಶಾಲೆಗೆ ಹೋಗುತ್ತಿವೆ. ಏಳನೆ ಕ್ಲಾಸು

([illegible] ಪುಟಕ್ಕೆ ಮುಂದುವರಿದಿದೆ)

ಡಾ ॥ ವಿಜಯಾ

ಸಾಹಿತ್ಯದಲ್ಲಿ ನೊಬೆಲ್ ಪ್ರಶಸ್ತಿ ವಿಜೇತರು

# ಸಲ್ಲಿ ಪ್ರುಧೋಮ್

1901 ನೊಬೆಲ್ ಪ್ರಶಸ್ತಿಗಳು ಪ್ರಾರಂಭವಾದ ವರ್ಷ. ಹೆಚ್ಚೂ ಕಡಿಮೆ ಒಂದು ಶತಮಾನದ ಈ ಅವಧಿಯಲ್ಲಿ ಅನೇಕ ಜನ ಪ್ರತಿಭಾನ್ವಿತರು ತಮ್ಮ ತಮ್ಮ ಕ್ಷೇತ್ರದಲ್ಲಿ ಮಾಡಿದ ಸಾಧನೆಗಾಗಿ ಈ ಮಹಾನ್ ಪುರಸ್ಕಾರ ಪಡೆದಿದ್ದಾರೆ. ನೊಬೆಲ್ ಪ್ರಶಸ್ತಿ ಪಡೆದವರು ಜಗತ್ತಿನ ದೃಷ್ಟಿಯಲ್ಲಿ ಅಸಾಧಾರಣ ಸಾಧಕರೆನಿಸಿದ್ದಾರೆ. ಹಾಗೆ ನೋಡಿದರೆ ಅಸಾಧಾರಣ ಸಾಧಕರೆಲ್ಲರಿಗೂ ನೊಬೆಲ್ ಪ್ರಶಸ್ತಿ ಸಿಕ್ಕಿಲ್ಲವೆನ್ನುವುದೂ ಅಷ್ಟೇ ಸತ್ಯ. ಕೆಲವರು ನೊಬೆಲ್ ಆಯ್ಕೆ ಸಮಿತಿಯ ಕಣ್ಣಿಗೆ ಬಿದ್ದಿದ್ದಾರೆ. ಕೆಲವರು ಬಿದ್ದಿಲ್ಲ. ಪ್ರಶಸ್ತಿ ಕೊಡುವ ಕಡೆ, ಪಡೆಯುವ ಕಡೆ ವಾದ, ವಿವಾದ, ಅನುಮಾನ, ಅಸಮಾಧಾನ ಇದ್ದೇ ಇರುತ್ತದೆ. ನೊಬೆಲ್ ಪ್ರಶಸ್ತಿಯೂ ಅದಕ್ಕೆ ಹೊರತಾಗಿಲ್ಲ. ಸಾಹಿತ್ಯಕ್ಕೆ ಸಿಕ್ಕಿದ ಪ್ರಥಮ ನೊಬೆಲ್ ಪ್ರಶಸ್ತಿಯೂ ಕೂಡ ಇಂಥ ಒಂದು ವಿವಾದಕ್ಕೆ ಒಳಗಾಗಿತ್ತು.

ಸಾಹಿತ್ಯದ ಪ್ರಥಮ ನೊಬೆಲ್ ಪ್ರಶಸ್ತಿ ದೊರಕಿದ್ದು ಫ್ರಾನ್ಸ್ ದೇಶದ ಲೇಖಕ ಸಲ್ಲಿ ಪ್ರುಧೋಮ್ ಅವರಿಗೆ. ಸ್ವೀಡಿಷ್ ಅಕಾಡೆಮಿಯ ನೊಬೆಲ್ ಆಯ್ಕೆ ಸಮಿತಿ ಸಲ್ಲಿ ಪ್ರುಧೋಮ್ ಅವರ ಹೆಸರನ್ನು ಪ್ರಶಸ್ತಿಗೆ ಪ್ರಕಟಿಸಿದಾಗ ಅದರ ವಿರುದ್ಧ ಭಾರೀ ಟೀಕೆಗಳು ಬಂದವು. ನಲವತ್ತೆರಡು ಜನ ಸ್ವೀಡನ್‌ನ ಪ್ರಮುಖ ಬರಹಗಾರರು, ಕಲಾವಿದರು ಮತ್ತು ವಿಮರ್ಶಕರು ಲಿಯೋ ಟಾಲ್‌ಸ್ಟಾಯ್‌ಗೆ ಪತ್ರವೊಂದನ್ನು ಬರೆದು ನೊಬೆಲ್ ಪ್ರಶಸ್ತಿಗೆ ''ನೀವೇ ಅರ್ಹರು'' ಎಂದು ತಿಳಿಸಿದರು. ಆಗ ಟಾಲ್‌ಸ್ಟಾಯ್‌ಗೆ ಎಪ್ಪತ್ತಮೂರು ವರ್ಷ ವಯಸ್ಸಾಗಿತ್ತು. ವ್ಯಾಪಕವಾಗಿ ಕೇಳಿಬಂದ ಈ ಟೀಕೆಗೆ ಸ್ವೀಡಿಷ್ ಅಕಾಡೆಮಿಯ ಪ್ರಕಾರ ಟಾಲ್‌ಸ್ಟಾಯ್ ಅವರ ಹೆಸರನ್ನು ಪ್ರಶಸ್ತಿಗೆ ನಿಯಮಾನುಸಾರವಾಗಿ ಯಾರೂ ಸೂಚಿಸಿರಲಿಲ್ಲ. ಸ್ವೀಡಿಷ್ ಅಕಾಡೆಮಿಯ ಈ ವಾದ ಆ ವರ್ಷಕ್ಕೆ ನಿಜವೆಂದು ಇಟ್ಟುಕೊಂಡರೂ ಮುಂದಿನ ವರ್ಷ ಅಂದರೆ 1902ರಲ್ಲಿ ಟಾಲ್‌ಸ್ಟಾಯ್ ಹೆಸರನ್ನು ಪ್ರೊಫೆಸರ್ ಅರ್ನೆಸ್ಟ್ ಲಿಚೆನ್‌ಬರ್ಗರ್ ನಿಯಮಾನುಸಾರವಾಗಿಯೇ ಸೂಚಿಸಿದ್ದರು. ಆದರೂ ಟಾಲ್‌ಸ್ಟಾಯ್ ಹೆಸರು ಪ್ರಶಸ್ತಿಗೆ ಪರಿಗಣಿತವಾಗಲಿಲ್ಲ. ಆನಂತರ ಕೂಡ ಟಾಲ್‌ಸ್ಟಾಯ್ 1910ರವರೆಗೆ ಬದುಕಿದ್ದರು. ಆದರೂ ಅವರಿಗೆ ಆ ಪ್ರಶಸ್ತಿ ಸಿಗಲಿಲ್ಲ. ಎಷ್ಟೋ ಬಾರಿ ಈ ರೀತಿಯ ವೈಫಲ್ಯದಿಂದ ನೊಬೆಲ್ ಪ್ರಶಸ್ತಿಗೆ ಕಳಂಕ ತಟ್ಟಿದೆ. ಈ ಕಳಂಕ ನೊಬೆಲ್‌ನ ಆಶಯಕ್ಕೆ ವಿರುದ್ಧವಾದುದು. ನೊಬೆಲ್ ತನ್ನ ವಿಲ್‌ನಲ್ಲಿ ಹೀಗೆ ಹೇಳುತ್ತಾನೆ:

''ಪ್ರಶಸ್ತಿಗಳನ್ನು ನೀಡುವಾಗ ಯಾವುದೇ ರೀತಿಯ ದಾಕ್ಷಿಣ್ಯಗಳಿಗೆ ಗಮನ ಕೊಡಬಾರದು. ಅತ್ಯಂತ ಅರ್ಹರಿಗೆ ಮಾತ್ರ ಪ್ರಶಸ್ತಿ ಸಿಗಬೇಕು. ಆ ಅರ್ಹ ವ್ಯಕ್ತಿ ಸ್ಕ್ಯಾಂಡಿನೇವಿಯನ್ ಆಗಿರಬಹುದು ಅಥವಾ ಬೇರೆ ಯಾರಾದರೂ ಆಗಿರಬಹುದು.'' ಎಲ್ಲಾ ಬಾರಿಯೂ ಅರ್ಹರಿಗೇ ಪ್ರಶಸ್ತಿ ದೊರಕಿದೆ ಎಂದು ಧೈರ್ಯವಾಗಿ ಹೇಳಲು ಬಾರದು.

ಪ್ರಥಮ ಪ್ರಶಸ್ತಿಯನ್ನು ಪ್ರಕಟಿಸುವುದು ಎಂಥ ಸಂಸ್ಥೆಗೂ ಸಂದಿಗ್ಧದ ಸಮಸ್ಯೆ. ಎಲ್ಲರ ಗಮನವೂ ಅತ್ತ ಕಡೆಯೇ ಕೇಂದ್ರೀಕೃತವಾಗಿರುತ್ತದೆ. ಸ್ವೀಡಿಷ್



ಅಕಾಡೆಮಿಯ ನೊಬೆಲ್ ಆಯ್ಕೆ ಸಮಿತಿಗೂ ಈ ಒತ್ತಡ ಇತ್ತು. ಕಡೆಗೆ ಸಲ್ಲಿ ಪ್ರುಧೋಮ್ ಅವರ ಹೆಸರನ್ನು ಪ್ರಕಟಿಸಿದಾಗ ಅವರಿಗೆ ನಿರಾಳ ಎನಿಸಿರಬೇಕು. ಸಲ್ಲಿ ಪ್ರುಧೋಮ್ ಅವರ ಹೆಸರನ್ನು ಫ್ರೆಂಚ್ ಅಕಾಡೆಮಿಯ ಅನೇಕ ಸದಸ್ಯರು ಸೂಚಿಸಿದ್ದರು.

'ಸಲ್ಲಿ ಪ್ರುಧೋಮ್' ಎಂಬುದು ರೆನೆ ಫ್ರಾಂಕ್ವಾ ಅರ್ಮಾಂಡ್ ಪ್ರುಧೋಮ್ ಅವರ ಕಾವ್ಯನಾಮ. ಪ್ರುಧೋಮ್ ಜನಿಸಿದ್ದು ಪ್ಯಾರಿಸ್‌ನಲ್ಲಿ, 1839ರ ಮಾರ್ಚ್ 16ರಂದು. ಅವರ ವಿದ್ಯಾಭ್ಯಾಸ ನಡೆದದ್ದು ಪ್ರಸಿದ್ಧ ಲಿಸೆ ಬೋನಾಪಾರ್ಟ್ ವಿದ್ಯಾಸಂಸ್ಥೆಯಲ್ಲಿ. ಅಲ್ಲಿಂದ ಅವರು ವಿಜ್ಞಾನದಲ್ಲಿ ಸ್ನಾತಕ ಪದವಿ ಪಡೆದರು. ಅವರು ವಿದ್ಯಾರ್ಥಿಯಾಗಿದ್ದಾಗಲೇ

ಲಿಂಗದೇವರು ಹಳೆಮನೆ

ಸಾಹಿತ್ಯದ ಕಡೆ ಅವರ ಅಭಿರುಚಿ ಹೊರಳಿತು. ಸಾಹಿತ್ಯದ ಮೂಲಕ ಅನೇಕ ಜನ ಪ್ರಸಿದ್ಧರಾಗಿದ್ದನ್ನು ಅವರು ಕಂಡಿದ್ದರು. ಶಾಲೆಯಲ್ಲಿದ್ದಾಗಲೇ ಸಾಹಿತ್ಯದ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಆ ಸಂದರ್ಭದಲ್ಲಿಯೇ ಅವರು ಕಣ್ಣಿನ ದೋಷದಿಂದಾಗಿ ಕೆಲಕಾಲ ನರಳಬೇಕಾಯಿತು. ಅವರ ಮೊದಲ ಕವನ ಸಂಕಲನ 'ಸ್ಟ್ಯಾನ್ಸ್ ಎ ಪೊಯಮ್ಸ್' 1865ರಲ್ಲಿ ಪ್ರಕಟವಾಯಿತು. ಆಗ ಅವರಿಗೆ ಇಪ್ಪತ್ತಾರು ವರ್ಷ. ಅವರ ಈ ಕವನ ಸಂಕಲನ ಫ್ರಾನ್ಸ್‌ನಲ್ಲಿ ಬಹಳ ಪ್ರಶಂಸೆಗೆ ಒಳಗಾಯಿತು. ಇದರಿಂದಾಗಿ ಪ್ರುಧೋಮ್ ಲಾಯರ್ ಅಥವಾ ವಿಜ್ಞಾನಿಯಾಗಿ ತಮ್ಮ ಭವಿಷ್ಯ ಕಂಡುಕೊಳ್ಳಬೇಕೆಂದಿದ್ದವರು ಆ ವಿಚಾರವನ್ನೇ ಕೈಬಿಟ್ಟರು. ಕಾವ್ಯದ ಬರವಣಿಗೆಯನ್ನು ತಮ್ಮ ಜೀವನದ ಪ್ರಧಾನ ಚಟುವಟಿಕೆಯನ್ನಾಗಿಸಿಕೊಂಡರು. ಅವರ ನಂತರದ ಕಾವ್ಯದಲ್ಲಿ ಭಾವತೀವ್ರತೆ ಮತ್ತು ವಿಚಾರವಂತಿಕೆ ಹಾಸುಹೊಕ್ಕಾಗಿದೆ ಎಂದು ವಿಮರ್ಶಕರು ಅಭಿಪ್ರಾಯಪಟ್ಟಿದ್ದಾರೆ.

1870 ಪ್ರುಧೋಮ್ ಅವರ ಜೀವನದಲ್ಲಿ ಭಾರಿ ಸಂಕಷ್ಟದ ವರ್ಷವಾಗಿತ್ತು. ಅವರ ಕುಟುಂಬದ ಅನೇಕ ಮಂದಿ ಅಕಾಲ ಮರಣಕ್ಕೆ ತುತ್ತಾಗಬೇಕಾಯಿತು. ಸ್ವತಃ ಅವರೇ ಲಘು ಪಾರ್ಶ್ವವಾಯುವಿನಿಂದ ನರಳಬೇಕಾಯಿತು. 1888ರವರೆಗೆ ಅವರು ಕಾವ್ಯದ ಬಗೆಗಿನ ತಮ್ಮ ಆಸಕ್ತಿಯನ್ನು ಮುಂದುವರೆಸಿಕೊಂಡು ಬಂದರು. ಆನಂತರ ಅವರ ಮನಸ್ಸು ತತ್ತ್ವಶಾಸ್ತ್ರದ ಕಡೆ ತಿರುಗಿತು. 1881ರ ಡಿಸೆಂಬರ್ 8ರಂದು ಅವರು ಫ್ರೆಂಚ್ ಅಕಾಡೆಮಿಯ ಸದಸ್ಯರಾಗಿ ಆಯ್ಕೆಗೊಂಡರು. ಫ್ರೆಂಚ್ ಅಕಾಡೆಮಿಯ ಸದಸ್ಯರಾಗಿ ಆಯ್ಕೆಗೊಳ್ಳುವುದೆಂದರೆ ಆಗಿನ ಕಾಲಕ್ಕೆ ಅದೊಂದು ಪ್ರತಿಷ್ಠಿತ ವಿಷಯವಾಗಿತ್ತು.

ಪ್ರುಧೋಮ್ ಒಟ್ಟು ಎಂಟು ಗ್ರಂಥಗಳನ್ನು ಬರೆದಿದ್ದಾರೆ. ಆ ಗ್ರಂಥಗಳೆಂದರೆ, ಸ್ಟ್ಯಾನ್ಸ್ ಎ ಪೊಯಮ್ಸ್ (1865), ಲೆ ಡೆಸ್ಟಿನ್ಸ್ (1872), ಲೆ ವೈನ್ಸ್ ಟೆಂಡ್ರೆಸಸ್ (1875), ಲಾ ಜಸ್ಟಿಸ್ (1878), ಲಾ ಎಕ್ಸ್‌ಪ್ರೆಷನ್ ದಾನ್ ಲೆ ಬ್ಯೂಕ್ಸ್ ಆರ್ಟ್ (1884), ಲೆ ಬೊನ್‌ಹರ್ (1888), ರಿಫ್ಲೆಕ್ಷನ್ಸ್ ಸ್ಯೂರ್ ಅಂಡ್ ಆರ್ಟ್ ಡೆಸ್ ವರ್ಸ್ (1892) ಮತ್ತು ಲಾವೈ ಪ್ಯಾಸ್ಕಲ್ (1905).

ಪ್ರುಧೋಮ್ ಅವರಿಗೆ ತತ್ತ್ವಶಾಸ್ತ್ರ, ಕಾನೂನುಗಳಲ್ಲಿ ಆಸಕ್ತಿಯಿದ್ದರೂ, ವಿಮರ್ಶಕರು ಅವರನ್ನು ಪ್ರಧಾನವಾಗಿ ಗುರುತಿಸಿರುವುದು ಕವಿಯಾಗಿ. ಅವರನ್ನು ಹತ್ತೊಂಬತ್ತನೇ ಶತಮಾನದ ಫ್ರಾನ್ಸಿನ ತಾತ್ತ್ವಿಕ ಕವಿ ಎಂದೇ ಗುರುತಿಸಲಾಗಿದೆ. ಆದರೆ

(೬೧ನೇ ಪುಟಕ್ಕೆ ಮುಂದುವರಿದಿದೆ)

ವಿಪರ್ಯಾಸವೆಂದರೆ ಇವರ ಹೆಸರು ಫ್ರಾನ್ಸ್‌ನ ಹೊರಗೆ ಹೆಚ್ಚು ಜನಕ್ಕೆ ಪರಿಚಯವೇ ಇರಲಿಲ್ಲ. ಅವರಿಗೆ 1901ರಲ್ಲಿ ಅವರ ಅರವತ್ತೆರಡನೇ ವಯಸ್ಸಿನಲ್ಲಿ ನೊಬೆಲ್ ಪ್ರಶಸ್ತಿ ಪ್ರಕಟವಾದಾಗ ಅವರ ಬಗ್ಗೆ, ಅವರ ಕೃತಿಗಳ ಬಗ್ಗೆ ಯೂರೋಪಿನಲ್ಲಿ ಕುತೂಹಲ ಉಂಟಾಗಲು ಆರಂಭವಾಯಿತು. ಅವರ ಕೃತಿಗಳ ಅನುವಾದ ಇಂಗ್ಲಿಷ್‌ನಲ್ಲಿ ಆಗತೊಡಗಿ, ಫ್ರಾನ್ಸ್‌ನ ಹೊರಗಿನವರೂ ಅವುಗಳನ್ನು ಓದಲು ಪ್ರಾರಂಭಿಸಿದರು.

ಪ್ರಧೋಮ್ ಅವರ ಕಾವ್ಯದ ಪ್ರಧಾನ ಧಾರೆಗಳು ಎರಡು. ಒಂದು ವ್ಯಕ್ತಿಯೊಳಗೆ ಅಂತರ್ಗತವಾಗಿರುವ ಭಾವತೀವ್ರತೆ ಮತ್ತು ಎರಡನೆಯದು ಚಿಂತನೆಯ ಬಗೆಗಿನ ಆಕರ್ಷಣೆ. ಇವೆರಡರ ಸಮನ್ವಯತೆ ಇವರ ಕಾವ್ಯದ ಪ್ರಧಾನ ಗುಣ. ಘರ್ಷಣೆ ಮತ್ತು ಸಮನ್ವಯತೆ - ಇವೆರಡರ ಮಧ್ಯೆ ಸಮತೋಲನವನ್ನು ಸಾಧಿಸಿ ಕಾವ್ಯ ಬರೆದಿರುವ ಪ್ರಧೋಮ್, ತನ್ನ ಕಾವ್ಯದಲ್ಲಿ ತಾನು ಜೀವನದಲ್ಲಿ ಎದುರಿಸಬೇಕಾದ ಅನೇಕ ಘರ್ಷಣೆಗಳನ್ನು ಹಾಸುಹೊಕ್ಕಾಗಿಸಿದ್ದಾರೆ. ಆಧುನಿಕ ಜೀವನದ ಕಡೆ ಹೊರಳುತ್ತಿರುವ ಸಮಾಜದಲ್ಲಿ ತೃಪ್ತಿ, ಕುತೂಹಲ, ಇಂದ್ರಿಯ ಬೇಡಿಕೆಗಳು, ವಿಜ್ಞಾನದ ಉಪಯೋಗ, ಮೌಲ್ಯ ಮತ್ತು ತ್ಯಾಗ ಹೇಗೆ ಬೇರೆ ಬೇರೆ ಸಂದರ್ಭಗಳಲ್ಲಿ ತಮ್ಮ ತಮ್ಮ ಪ್ರಭಾವಗಳನ್ನು ಬೀರುತ್ತವೆ ಎಂಬುದನ್ನು ತಮ್ಮ ಕಾವ್ಯದಲ್ಲಿ ಚಿತ್ರಿಸಲು ಯತ್ನಿಸಿದ್ದಾರೆ. ಕಾವ್ಯ ಮತ್ತು ಅಲ್ಲಿನ ವಿವರಗಳು ಪ್ರಧೋಮ್ ಅವರ ತತ್ತ್ವಶಾಸ್ತ್ರದ ಸಾರ ಕೂಡ. ಪ್ರಧೋಮ್ ಅವರ ಕಾವ್ಯ ಗಂಭೀರವಾಗಿದ್ದು ರಂಜನೀಯವಾದ ಅಂಶಗಳನ್ನು ತನ್ನ ವಿನ್ಯಾಸದಲ್ಲಿ ಅಡಗಿಸಿಕೊಂಡಿದೆ. ವಿನೋದ, ಗಂಭೀರ, ಸರಳತೆ ಹಾಗೂ ಸತ್ಯದ ಅನ್ವೇಷಣೆ ಅವರ ಕಾವ್ಯಕ್ಕೆ ವಿಶೇಷ ಬೆಡಗು ಮತ್ತು ಬೆರಗು ಎರಡನ್ನೂ ನೀಡಿದೆ. ಇವೆಲ್ಲದರ ಸಾಕಾರವಾಗಿ ಅವರ ಜೀವನದ ಮಹಾನ್ ದರ್ಶನ ಹೊರಹೊಮ್ಮಿರುವುದು ''ಲಾ ವೈ ಪ್ಯಾಸ್ಕಲ್'' ಕೃತಿಯಲ್ಲಿ. ಈ ಕೃತಿಯಲ್ಲಿ ಪ್ರಧಾನವಾಗಿ ಚಿತ್ರಿತವಾಗಿರುವ ಅಂಶವೆಂದರೆ, 1623-1662ರ ಅವಧಿಯಲ್ಲಿ ಬದುಕಿದ್ದ ಫ್ರೆಂಚ್ ಗಣಿತಜ್ಞ, ಭೌತಶಾಸ್ತ್ರಜ್ಞ ಮತ್ತು ನೀತಿ ಚಿಂತಕ ಪಾಸ್ಕಲ್, ಡೇಕಾರ್ಟ್ ಪ್ರತಿಪಾದಿಸಿದ್ದ ಮಾನವನ ವಿಚಾರವಂತಿಕೆಯೇ ಶ್ರೇಷ್ಠ ಎಂಬುದನ್ನು ಪ್ರಶ್ನಿಸಿ, ಅದು ಎಂದಿಗೂ ಅನುಭಾವಿಕ ಸಮಸ್ಯೆಗಳನ್ನು ವಿಶ್ಲೇಷಿಸಿ, ಪರಿಹಾರ ಸೂಚಿಸಲಾರದು ಎಂದು ಒಡ್ಡಿದ ತರ್ಕದ ತಿರುಳು. ಪ್ರಧೋಮ್ ಕಾರ್ಯಕಾರಣ ಸಂಬಂಧದಿಂದ ಪ್ರಣೀತವಾಗಿ ಹೊರಹೊಮ್ಮುವ ಚಿಂತನೆಗೆ ಆದ್ಯತೆ ನೀಡಿದರೂ ಕಡೆಗೆ ತರ್ಕಾತೀತವಾದ ಆದಿಭೌತಿಕ ಸ್ಥಿತಿಯೊಂದು ಇದೆಯೆಂದು ನಂಬಿದ್ದ. ಆದ್ದರಿಂದಲೇ ವಿಮರ್ಶಕರು ಪ್ರಧೋಮ್ ವಿಚಾರವಂತಿಕೆಯನ್ನು ಪ್ರಧಾನ ದ್ರವ್ಯವಾಗಿ ಬಳಸಿದರೂ ಅದನ್ನು ಅಭಿವ್ಯಕ್ತಿಸುವುದಕ್ಕೆ ಪದ್ಯವನ್ನು ಒಂದು ಸಾಧನವಾಗಿ ಬಳಸಿಲ್ಲ ಎಂದು ಅಭಿಪ್ರಾಯಪಟ್ಟಿದ್ದಾರೆ. ಅವರ ಕಾವ್ಯಕ್ಕೊಂದು ನಿರ್ದಿಷ್ಟ ಸೌಂದರ್ಯ ಮೀಮಾಂಸೆಯ ಸ್ವರೂಪ ಇದೆ. ರಸಾಭಿಜ್ಞತೆ ಮತ್ತು ಸಂಗೀತಾಭಿಜ್ಞತೆ ಅವರ ಕಾವ್ಯಸೃಷ್ಟಿಯ ಮೂಲ ಗುಣಗಳು. ಅವರ ಇಡೀ ಕಾವ್ಯ ತೀಕ್ಷ್ಣತೆ, ಭಾವತೀವ್ರತೆ ಮತ್ತು ಉದಾರತಾವಾದದಿಂದ ಮುಪ್ಪುರಿಗೊಂಡಿದೆ.

ಪ್ರಧೋಮ್ ಜೀವನದುದ್ದಕ್ಕೂ ಅಷ್ಟೇನೂ ಸುಖವಾಗಿ ಬಾಳಿ ಬದುಕಿದವರಲ್ಲ. ತನ್ನ ಯೌವನದ ಹೆಚ್ಚು ಭಾಗವನ್ನು ಪ್ಯಾರಿಸ್‌ನಲ್ಲಿ ಕಳೆದರೂ ಜೀವನದ ಇಳಿಹೊತ್ತಿನಲ್ಲಿ ಅವರು ಚಟೇನಿ ಎಂಬ ಸಣ್ಣ ಪಟ್ಟಣವೊಂದರಲ್ಲಿ ವಾಸವಾಗಿದ್ದರು. ತನ್ನ ಜೀವನದ ಸಂಧ್ಯಾ ಸಮಯದಲ್ಲಿ ಅವರು ಏಕಾಂಗಿಯಾಗಿದ್ದರು ಮತ್ತು ಅಷ್ಟೊಂದು ಸಂತೋಷವಾಗೇನೂ ಇರಲಿಲ್ಲ. ಅನಾರೋಗ್ಯ ಪೀಡಿತರಾಗಿ, ತುಂಬಾ ಖಿನ್ನತೆಯಿಂದ ತನ್ನ ಬಾಳಿನ ಕಡೆಯ ದಿನಗಳನ್ನು ಕಳೆದರು. 1901ರಲ್ಲಿ ಅವರಿಗೆ ನೊಬೆಲ್ ಪ್ರಶಸ್ತಿ ಸಿಕ್ಕಿದ ಮೇಲೂ ಆರು ವರ್ಷಗಳ ಕಾಲ ಬದುಕಿದ್ದರು. 1907ರ ಸೆಪ್ಟೆಂಬರ್ 7ರಂದು ತಮ್ಮ 68ನೇ ವಯಸ್ಸಿನಲ್ಲಿ ಪ್ರಧೋಮ್ ನಿಧನ ಹೊಂದಿದರು.

ಸಾಹಿತ್ಯದ ಪ್ರಥಮ ನೊಬೆಲ್ ಪ್ರಶಸ್ತಿ ಪ್ರಧೋಮ್ ಮೂಲಕ ಫ್ರೆಂಚ್ ಭಾಷೆಗೆ ಸಂದಿತು. ಪ್ರಧೋಮ್‌ಗೆ ಈ ಪ್ರಶಸ್ತಿ ದೊರಕಿದಾಗ ಫ್ರಾನ್ಸ್‌ನ ಜನತೆ ಈ ಪ್ರಶಸ್ತಿಯ ಮೂಲಕ ಪ್ರಧೋಮ್ ಫ್ರಾನ್ಸ್‌ನ ಶ್ರೇಷ್ಠ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಎತ್ತಿಹಿಡಿದರೆಂದು ಸಂಭ್ರಮಿಸಿತು. ಯಾಕೆಂದರೆ ಈ ಪ್ರಶಸ್ತಿಯ ಮೂಲಕ ಜಗತ್ತಿನ ಅತಿ ಹೆಚ್ಚಿನ ಮೌಲ್ಯದ, ಅಂದರೆ, 40,000 ಅಮೆರಿಕನ್ ಡಾಲರ್ ಮೌಲ್ಯದ (ಅಂದಿಗೆ ಅದು ಭಾರೀ ಮೊತ್ತ) ಹಣ ಫ್ರೆಂಚ್ ಸಾಹಿತಿಯೊಬ್ಬರಿಗೆ ದೊರಕಿತ್ತು.

1901ರಲ್ಲಿ ಸ್ವೀಡಿಷ್ ಅಕಾಡೆಮಿ ಪ್ರಶಸ್ತಿ ಪ್ರದಾನ ಮಾಡುವಾಗ ತನ್ನ ಪ್ರಶಸ್ತಿ ಪತ್ರದಲ್ಲಿ ಸಲ್ಲಿ ಪ್ರಧೋಮ್ ಬಗ್ಗೆ ಹೀಗೆ ಅಭಿಪ್ರಾಯಪಟ್ಟಿದೆ: ''ಅವರ ಕಾವ್ಯಸೃಷ್ಟಿಯ ಕ್ರಿಯೆಯನ್ನು ವಿಶೇಷವಾಗಿ ಪರಿಗಣಿಸಿ, ಹಾಗೂ ಅವರ ಕಾವ್ಯದಲ್ಲಿನ ಭವ್ಯ ಆದರ್ಶಗಳು, ಕಲಾತ್ಮಕ ನಿಖರತೆ ಮತ್ತು ಬುದ್ಧಿಭಾವಗಳ ಅನನ್ಯ ಸಂಗಮ ಗುಣವನ್ನು ಮನಗಂಡು ಈ ಪ್ರಶಸ್ತಿಯನ್ನು ಪ್ರದಾನ ಮಾಡಲಾಗುತ್ತಿದೆ.''

ರಮ್ಯವಾದ ಅತಿ ಆರೋಪಿತ ಲಕ್ಷಣಗಳಿಂದ ಬಳಲುತ್ತಿದ್ದ ಫ್ರೆಂಚ್ ಕಾವ್ಯಕ್ಕೆ ನಯವಂತಿಕೆ, ಘನತೆ, ಸಮತೋಲನ ಮತ್ತು ಸೌಂದರ್ಯ ಮೀಮಾಂಸೆಯ ಉತ್ಕೃಷ್ಟತೆಯನ್ನು ಮತ್ತೆ ಪುನರ್‌ಸ್ಥಾಪಿಸಿದ ಖ್ಯಾತಿ ಪ್ರಧೋಮ್‌ಗೆ ಸಲ್ಲುತ್ತದೆ.

ಶ್ರೀ ಲಿಂಗದೇವರು ಹಳೆಮನೆ
ನಂ. 254/ಎ, 1ನೇ ಫೇಜ್, ಹುಡ್ಕೋ, ಕುವೆಂಪುನಗರ
ಮೈಸೂರು - 570 023

(೫೯ನೇ ಪುಟದಿಂದ ಮುಂದುವರಿದಿದೆ)

## ಹೀಗೊಬ್ಬ ಜನಸಾಮಾನ್ಯ

ಓದಿರುವ ಹೆಂಡತಿಗೆ ಮಕ್ಕಳು ಜಾಸ್ತಿ ಓದಲಿ ಅಂತ ಆಸೆ. ''ಕನ್ನಡ ಸ್ಕೂಲ್‌ಗೆ ಹೋಗ್ತಾರೆ. ಇಂಗ್ಲಿಷ್ ಕಲೀಲಿ ಅಂತ ಆಸೆ, ಅಷ್ಟು ಹಣ ಕೊಡಕ್ಕಾಗಲ್ಲ. ಪುಸ್ತಕಾನೂ ಜಾಸ್ತಿ ಅಂತೆ. ಅದೂ ಅಲ್ದೆ ಆ ಶಾಲೆಗಳಲ್ಲಿ ಅಪ್ಪ-ಅಮ್ಮನೂ ಶಾಲೆ ಓದಿರಬೇಕಂತೆ. ಇಲ್ಲಿದ್ರೆ ಸೇರಿಸ್ಕಳಲ್ಲ. ನಾವಿಬ್ರೂ ಅಷ್ಟು ಓದಿಲ್ವಲ್ಲಾ...'' ಎಂಬುದು ಆತನ ವ್ಯಥೆ.

''ಆಗ-ಈಗ ಸಿನಿಮಾ ನೋಡ್ತೀನಿ. ಬಿಡುವಾಗಲ್ಲ, ನಮ್ಮಂಗ್ದಿಗೆ ರಜಾ ಇಲ್ವಲ್ಲ. ದಿನಾ ಬೆಳಿಗ್ಗೆ ಹತ್ತು ಗಂಟೆಗೆ ಬಂದು, ಬುತ್ತೀನೂ ತಗಂಡು ಸೈಕಲ್ಲಲ್ಲಿ ಬರ್ತೀನಿ. ರಾತ್ರಿ 8-30ರಿಂದ 9 ಆಗ್ತದೆ. ಇನ್ನೆಲ್ಲಿ ಸಿನಿಮಾ..?'' ಅನ್ನುವ ಹರೀಶ್ ಸಿನಿಮಾ ಸುದ್ದಿ, ಜಾಹಿರಾತು ಇರುವ ಉದಯವಾಣಿಯನ್ನು ಮಾತ್ರ ಶುಕ್ರವಾರ-ಭಾನುವಾರ ಕೊಂಡು ಓದ್ತಾರಂತೆ. ''ಅದು ಬಿಟ್ರೆ 'ಪೋಲಿಸ್ ನ್ಯೂಸ್' ಓದ್ತೀನಿ. ಅದರಲ್ಲಿ ಮರ್ಡರ್, ರೇಪು ಇದೆಲ್ಲಾ ಚೆನ್ನಾಗಿ ಬರೀತಾರೆ. ಪೋಲೀಸ್ನೋರು ಹಿಡಿಯೋದೆಂಗೆ, ಅಂತೆಲ್ಲಾ ಇರುತ್ತೆ. ಅದು ಮಾತ್ರ ಬಿಡದೇ ಓದ್ತೀನಿ ನೋಡಿ'' ಅಂತ ಖುಷಿಯಿಂದಲೇ ಹೇಳುತ್ತ ಆ ಪತ್ರಿಕೇನ ತೆಗೆದು ತೋರಿಸುವ ಹರೀಶ್‌ಗೆ ರಾಜಕಾರಣದಲ್ಲಿ ಒಲವಿಲ್ಲ. ಆದರೂ ''ಏನೇ ಹೇಳಿ ನಮಗೆ ಒಳ್ಳೇದು ಮಾಡೋದೋರಿಗೆ ಓಟು ಹಾಕ್ತೀವಿ'' ಎನ್ನುತ್ತಾರೆ.

''ಹೆಗಡೆ ಅವ್ರು ಅಂಗಡಿ ಕೊಡಿಸ್ತಾರೋ ಏನೋ... ಮಕ್ಳಿಗೆ ಇಂಗ್ಲಿಷ್ ಸ್ಕೂಲ್ ಕೊಡಿಸಬಹ್ದು..'' ಎಂತ ಸೇರಿಸುತ್ತಾರೆ ಮುಗ್ಧ ಹರೀಶ್ !!

ಡಾ ॥ ವಿಜಯಾ
ಪತ್ರಕರ್ತರು, ಇಳಾ ಪ್ರಿಂಟರ್ಸ್, 153, 4ನೇ ಮೇನ್
8ನೇ ಕ್ರಾಸ್, ಚಾಮರಾಜಪೇಟೆ, ಬೆಂಗಳೂರು - 560 018

## ನಿಃಸ್ವಾರ್ಥ



ಭೂಮಿಯ ಮಗಳು
ಗಿಡ
ಮೊಮ್ಮಗಳು
ಹೂವು
ಭೂಮಿ ತಾ
ಮುದುಕಿಯೆಂದು
ಹೂವನ್ನ ಬಾಡಿದ ಮೇಲೆ
ಮುಡಿಯುತ್ತಾಳೆ

- ಬೆಮೆಲ್ ಕಂಪಲಪ್ಪ




ಎಲ್ಲ ಆಗುಹೋಗುಗಳ ಹಿಂದೆ ಗಣಿತ ಶಾಸ್ತ್ರವಿದ್ದೇ ಇದೆ. ಈ ಶಾಸ್ತ್ರದ ಕಲಿಕೆಗೆ ಉತ್ಸಾಹ ತುಂಬಿ, ನೀರುಣಿಸುವ ಮನಮೋಹಕ ಗ್ರಂಥ 'ಸಂಖ್ಯಾ ವಿನೋದ'



ದಿನಬಳಕೆಯ ಆಹಾರವಸ್ತುಗಳಲ್ಲಿ ಅಡಗಿರುವ ಆರೋಗ್ಯವರ್ಧಕ ಗುಣಗಳನ್ನು ಸವಿಸ್ತಾರವಾಗಿ ತಿಳಿಸುವ ಕೈಗನ್ನಡಿ




ಮಾದಕ ವಸ್ತುಗಳನ್ನು ಸೇವಿಸುವುದರಿಂದ ವ್ಯಕ್ತಿಯ ದೇಹದ ಮೇಲೆ ಹಾಗೂ ಮನಸ್ಸಿನ ಮೇಲೆ ಉಂಟಾಗುವ ದುಷ್ಪರಿಣಾಮಗಳ ಚಿತ್ರಣ ಈ ಕಿರು ಪುಸ್ತಕದ ವಸ್ತು




ಗಣಿತದಲ್ಲಿ ಅಭಿರುಚಿಯಿಲ್ಲದವರನ್ನೂ ಕೆಣಕಿ ಕೆರಳಿಸುವ ಹಾಗೂ ಮೈಮನ ಕುಣಿಸುವ ಲಾಲಿತ್ಯಮಯ ಸಮಸ್ಯೆಗಳಿಂದ ಕೂಡಿದ ಅಪೂರ್ವ ಮನರಂಜನಾತ್ಮಕ ಗಣಿತ




ಬಸವೇಶ್ವರರ ವಚನ ವೈಭವ ಸಿರಿ ಸಾರುವ ಆದರ್ಶಗಳನ್ನು ನಿರೂಪಿಸುವ ಪುಸ್ತಕ




ಮಾನವ ರೋಗ ರುಜಿನಗಳಿಂದ ಪಾರಾಗುವ ನೈಜ ಮಾರ್ಗವನ್ನು ತೋರುವ ಏಕೈಕ ಗ್ರಂಥ




ಹೆಸರಾಂತ ಕನ್ನಡ ಕವಿಗಳ ಹುಟ್ಟು, ಬೆಳವಣಿಗೆ, ಸಾಧನೆಗಳನ್ನು ಕುರಿತಾದ ವೈಶಿಷ್ಟ್ಯಪೂರ್ಣ ಕೃತಿ




ದೇಹಾರೋಗ್ಯ ರಕ್ಷಣೆ ಪ್ರಕೃತಿ ನಿರ್ದೇಶಿತ ಮಾರ್ಗಗಳಿಂದ ಸುಲಭಸಾಧ್ಯವೆಂಬುದನ್ನು ಸಮರ್ಥಿಸುವ ಕೈಹೊತ್ತಿಗೆ



ಮಕ್ಕಳ ಸಹಜ ಬೆಳವಣಿಗೆಗೆ ಅಗತ್ಯವಾದ ಆಹಾರ ಪೂರೈಕೆಯ ಕ್ರಮ, ಶಿಕ್ಷಣ, ಆರೋಗ್ಯ ರಕ್ಷಣೆ ಇತ್ಯಾದಿ ವಿಷಯಗಳನ್ನೊಳಗೊಂಡ ಕೈಪಿಡಿ




ಆಧುನಿಕ ಜಗತ್ತು ಪ್ರಾಚೀನ ಭಾರತೀಯ ವಿದ್ವಾಂಸರಿಗೆ ಎಷ್ಟರಮಟ್ಟಿಗೆ ಋಣಿಯಾಗಿರಬೇಕೆಂಬುದನ್ನು ಎತ್ತಿ ತೋರಿಸುವ ಸಾಧಾರ ಗ್ರಂಥಸಾರ.




ವೇದೋಕ್ತ ಷೋಡಶ ಸಂಸ್ಕಾರಗಳ ವಿಧಿ ವಿಧಾನಗಳು, ಮರಣೋತ್ತರ ಅವೈಜ್ಞಾನಿಕ ವಿಧಾನಗಳಿಂದ ಹೇಗೆ ಭಿನ್ನ ಎಂಬುದನ್ನು ತೋರಿಸುವ ಕಿರುಹೊತ್ತಿಗೆ




ಸಾಮಾಜಿಕ ಹಾಗೂ ಭೌಗೋಳಿಕ ಕಾರಣಗಳಿಂದ ಸಾಧನೆಯ ದಾರಿಗಳು ವಿಭಿನ್ನವಾಗಿದ್ದರೂ ಧಾರ್ಮಿಕ ಆಚರಣೆಗಳ ಗುರಿ ಒಂದೇ ಎಂದು ಎತ್ತಿ ತೋರಿಸುವ ಕೃತಿ

---

ಈ ಪುಸ್ತಕ ಪ್ರಕಾಶನ ಸಂಸ್ಥೆ ಈಗ್ಗೆ ಎರಡು ದಶಕಗಳಷ್ಟು ಹಿಂದೆ 'ಜನಪ್ರಿಯ ಪ್ರಕಾಶನ' ಎಂಬ ಹೆಸರು ಹೊತ್ತು ಪ್ರಾರಂಭವಾಯಿತು. ಕರ್ನಾಟಕದ ಸಾಮಾನ್ಯ ಓದುಗರ ಅಭಿರುಚಿಗೆ ಯೋಗ್ಯವಾದ ಕಿರುಪುಸ್ತಕಗಳನ್ನು ಪ್ರಕಟಿಸುವುದು ನಮ್ಮ ಅಂದಿನ, ಇಂದಿನ ಉದ್ದೇಶ. ಪುಸ್ತಕದಲ್ಲಿ ಬಳಸುವ ಭಾಷೆ ಸರಳವಾಗಿರಬೇಕು. ಕಾಗುಣಿತದ ತಪ್ಪುಗಳಿರಕೂಡದು, ವಿಷಯ ಸುಲಭ ಗ್ರಾಹ್ಯವಾಗಿರಬೇಕು, ಓದಿ ತಿಳಿದದ್ದು ನಿತ್ಯಜೀವನದಲ್ಲಿ ಉಪಯುಕ್ತ ಎನಿಸಬೇಕು - ಈ ಗುರಿ ಇಟ್ಟುಕೊಂಡು ಬರೆದು ಪ್ರಕಟಿಸಿದ ಪುಸ್ತಕಗಳು ಕನ್ನಡಿಗರ ಆದರಾಭಿಮಾನಗಳಿಗೆ ಪಾತ್ರವಾದದ್ದು ಹೆಮ್ಮೆಯ ಸಂಗತಿ. ಇದನ್ನು ಕಂಡು ಕರುಬಿದ ಹಲವರು 'ಜನಪ್ರಿಯ' ಪದದ ದುರ್ಬಳಕೆ ಮಾಡಿಕೊಂಡರಾದ ಕಾರಣ, ಸಂಸ್ಥೆಯ ಹೆಸರನ್ನು 'ಜನಪದ ಪ್ರಕಾಶನ' ಎಂದು ಬದಲಿಸಬೇಕಾಗಿ ಬಂದಿತು. ನಮ್ಮ ಓದುಗರು ಈ ಬದಲಾವಣೆಯನ್ನು ಗಮನಿಸಿಯೇ ನಮಗೆ ಇನ್ನೂ ಹೆಚ್ಚಿನ ಪ್ರೋತ್ಸಾಹ ನೀಡಲಾರಂಭಿಸಿದರು. ಅಭಿಮಾನಿಗಳ ಈ ಬೆಂಬಲದಿಂದ ಸಂಸ್ಥೆಗೆ ಹೆಚ್ಚಿನ ಆಯುಸ್ಸು ದೊರೆತಿದೆ ಮತ್ತು ಕನ್ನಡ ತಾಯಿಯ ಸೇವೆಗಾಗಿ ನಮ್ಮಲ್ಲಿ ಹೆಚ್ಚಿನ ಉತ್ಸಾಹ ಉಂಟಾಗಿದೆ. ಈ ಸಲುವಾಗಿ ನಮ್ಮೆಲ್ಲ ಓದುಗರಿಗೆ ಹೃತ್ಪೂರ್ವಕ ವಂದನೆಗಳು.

## ಜನಪದ ಪ್ರಕಾಶನ

ಯಶವಂತಪುರ
ಬೆಂಗಳೂರು- 560 022

# ಯೋಗ ಪ್ರವೇಶ - ೨

ಜಿ. ರಾಮಕೃಷ್ಣ

ಮನಸ್ಸನ್ನು ಸಂಹರಿಸುವುದು ಯೋಗಾಭ್ಯಾಸದ ಉದ್ದೇಶವಲ್ಲ; ಅದನ್ನು ಸರಿಯಾದ ರೀತಿಯಲ್ಲಿ ಹದ ಮಾಡುವುದು ಅದರ ಯೋಗ್ಯವಾದ ಉದ್ದೇಶವೇ ಆಗಿದೆ. ಮನಸ್ಸನ್ನು ಹರಿಯಬಿಡದಂತೆ ಮಾಡುವುದು ಅಶಕ್ಯ, ಅನಗತ್ಯ. ಹರಿದಾಗ ಒಳ್ಳೆಯ ಮಾರ್ಗದಲ್ಲಿ ಹರಿಯುವುದು ಮತ್ತು ಅಭ್ಯಾಸ-ಪ್ರಯತ್ನಗಳಿಂದ (ಅಥವಾ ಪತಂಜಲಿ ಹೇಳುವಂತೆ, ಅಭ್ಯಾಸ-ವೈರಾಗ್ಯಗಳಿಂದ) ಹರಿಯುವಿಕೆಯನ್ನು ತಡೆದು ನಿಶ್ಚಲವಾದ ಮನಸ್ಸನ್ನು ಸ್ಥಾಪಿಸಿಕೊಳ್ಳುವುದು ಯೋಗದ ಪ್ರಮುಖ ಭೂಮಿಕೆ. ''ಚಿತ್ತವೆಂಬುದು ಒಂದು ನದಿಯಂತೆ; ಅದು ಹರಿಯುತ್ತಿರುತ್ತದೆ. ಕಲ್ಯಾಣಮಾರ್ಗ ಅಥವಾ ಪಾಪಮಾರ್ಗ, ಎರಡೂ ರೀತಿಗಳಲ್ಲಿ ಹರಿಯುವ ಸಾಧ್ಯತೆ ಅದಕ್ಕಿದೆ,'' ಎಂದು ವ್ಯಾಸರು ತಮ್ಮ ವ್ಯಾಖ್ಯಾನದಲ್ಲಿ ಹೇಳುತ್ತಾರೆ. (ಈ ವ್ಯಾಸ ಮತ್ತು ಮಹಾಭಾರತದ ಕರ್ತೃ ವ್ಯಾಸ ಒಬ್ಬರೇ ಅಲ್ಲವೆಂಬುದನ್ನು ಗಮನಿಸಬೇಕು).

ಮನಸ್ಸಿಗೆ ಕೆಲಸ ಕೊಡದಿದ್ದರೆ ಅದು ತಾನಾಗೇ ಮುದುಡಿಕೊಂಡಿರುತ್ತದೆ, ಇನ್ನು ಪ್ರಯತ್ನದ ಅವಶ್ಯಕತೆ ಎಲ್ಲಿಯದು ಎಂಬ ಪ್ರಶ್ನೆ ಏಳಬಹುದು. ಅದು ಮುದುಡಿಕೊಂಡರೂ ನಿಶ್ಚೇಷ್ಟವಲ್ಲ. ಅದು ಸೋಮಾರಿತನದ ಚಿಹ್ನೆ ಅಷ್ಟೇ. ಅದನ್ನು ವ್ಯಾಸರು 'ಸ್ತ್ಯಾನ' ಎನ್ನುತ್ತಾರೆ. ಅಂದರೆ 'ಅಕರ್ಮಣ್ಯತೆ.' ಆ ಸ್ಥಿತಿಯು ಸ್ವಾಗತಾರ್ಹವಾದ್ದೇನೂ ಅಲ್ಲ. ಮನಸ್ಸು ಕ್ರಿಯಾಶೀಲವಾಗಿರಬೇಕು, ಆದರೆ ಸ್ವ-ಆಕಾಂಕ್ಷೆಯಿಂದ ಅದನ್ನು ಹಿಡಿತದಲ್ಲಿಟ್ಟುಕೊಂಡು ಸ್ತಬ್ಧ ಮಾಡಬೇಕು. ಆಗಲೇ ಪುಳಕಿತ ಭಾವ ಉಂಟಾಗುವುದು. ಆಳವಾದ ಪ್ರಶಾಂತ ಸರೋವರದ ರೀತಿಯಲ್ಲಿದ್ದರೆ ಚಿತ್ತಶೋಭೆ; ಸುಮ್ಮನೆ ಮುದುಡಿಕೊಂಡಿರುವುದು ಚಿತ್ತಕ್ಷೋಭೆ.

ಈ ರೀತಿಯ ಶಾಂತ-ಗಂಭೀರ ಸ್ಥಿತಿಯನ್ನು ಇಚ್ಛಾಮಾತ್ರದಿಂದ ತಲುಪಲು ಸಾಧ್ಯವಿದ್ದಿದ್ದರೆ ಎಲ್ಲರೂ ಯೋಗಿಗಳೇ ಆಗಬಹುದಿತ್ತು. ಮನಸ್ಸೆಂಬುದು ಒಂದು ನಿರ್ಜೀವಿ ಕಪಾಟಲ್ಲ. ಆದ್ದರಿಂದಲೇ ಬೇಕೆಂದಾಗ ಅದನ್ನು ಮುಚ್ಚಿಬಿಡಲು ಆಗುವುದಿಲ್ಲ. ಅದಕ್ಕೆ ಒಂದು ಸನ್ನಿವೇಶದ ರಚನೆ ಮಾಡಿಕೊಡಬೇಕು. ಶರೀರದ ಮಾರ್ದವತೆ ಅಂತಹ ಒಂದು ಪರಿಕರ. ಭಾರವಾದ ಮನಸ್ಸಿರುವಾಗ ಶರೀರ ಹಗುರವಾಗಿರಲು ಹೇಗೆ ಸಾಧ್ಯವಿಲ್ಲವೋ ಹಾಗೆ ಭಾರವಾದ ಶರೀರವಿರುವಾಗ ಹಗುರವಾದ ಮನಸ್ಸೂ ಇರಲಾರದು. ಭಾರ-ಹಗುರಗಳು ಇಲ್ಲಿ ತೂಕಕ್ಕೆ ಸಂಬಂಧಿಸಿದುವಲ್ಲ, ಸಮಸ್ಥಿತಿಗೆ ಸಂಬಂಧಿಸಿದವು. ೧೦೦ ಕೆ. ಜಿ. ತೂಕದ ಸ್ಥೂಲಕಾಯದವರು, ಸಮಸ್ಥಿತಿಯಲ್ಲಿರಲು ಸಾಧ್ಯ ಮತ್ತು ೫೦ ಕೆ. ಜಿ. ತೂಕದ ಲಲನೆ ಅಂತಹ ಸ್ಥಿತಿಯಲ್ಲಿ ಇಲ್ಲದಿರಲು ಸಾಧ್ಯ. ಇದನ್ನೇ ವ್ಯಾಸರು ಚಿತ್ತವನ್ನು ವಿಂಗಡಿಸುವ ಕ್ರಮದಲ್ಲಿ ಕಾಣಬಹುದು. ಅದು ಐದು ವಿಧ: ಕ್ಷಿಪ್ತ, ಮೂಢ, ವಿಕ್ಷಿಪ್ತ, ಏಕಾಗ್ರ ಮತ್ತು ನಿರುದ್ಧ. ಕ್ಷಿಪ್ತವೆಂದರೆ ತಳಮಳಿಸುವ ಮನಸ್ಸು; ಮೂಢವೆಂದರೆ ಆಲಸ್ಯಭರಿತವಾದ್ದು; ವಿಕ್ಷಿಪ್ತವೆಂದರೆ ಅತಿಚಲನೆ ಅಥವಾ ಹಾರಾಟದಲ್ಲಿ ತೊಡಗಿರುವ ಮನಸ್ಸು. ಇದಾವುದರಲ್ಲೂ ಪ್ರಫುಲ್ಲತೆ ಇಲ್ಲ. ಅದಿರುವುದು ಏಕಾಗ್ರ ಮತ್ತು ನಿರುದ್ಧ ಹಂತಗಳಲ್ಲಿ.

ಒಂದು ಸಂದರ್ಭ ಹೀಗಿದೆಯೆಂದು ಭಾವಿಸೋಣ: ಒಬ್ಬನ ಮನಸ್ಸನ್ನು ಹತ್ತಾರು ಅಂಶಗಳು ಆವರಿಸಿವೆ. ಒಂದು ಕಡೆ, ಬರಲಿರುವ ಪರೀಕ್ಷೆಗಾಗಿ ಅಭ್ಯಾಸ, ಎಂತಹ ಪ್ರಶ್ನೆಗಳು ಬರುತ್ತವೋ ಎಂಬ ತವಕ, ಮುಂದೆ ಐಐಟಿಗೆ ಪ್ರವೇಶ ದೊರಕುವುದೋ ಇಲ್ಲವೋ ಎಂಬ ಆತಂಕ; ಇನ್ನೊಂದು ಕಡೆ, ತಾನು ನೋಡಲಾಗದೆ ಹೋದ ಎಂಥದೋ ಆಟ ಅಥವಾ ಚಲನಚಿತ್ರ, ತಾನು ತಿನ್ನಬೇಕೆಂದು ಆಶಿಸುವ ಮಸಾಲೆ ದೋಸೆ, ತಾನು ಭೇಟಿಯಾಗಲಿಚ್ಛಿಸುವ ಸ್ನೇಹಿತ ಅಥವಾ ಸ್ನೇಹಿತೆ, ತಾನು ಹಿಂದೆಂದೋ ಗಳಿಸಿದ್ದ ಶಾಭಾಸ್‌ಗಿರಿ, ತನ್ನನ್ನು ಅಕ್ಕರೆಯಿಂದ ಕಾಣುತ್ತಿದ್ದ ಅಜ್ಜಿ, ತಾನು ಕಂಡಿದ್ದ ಒಂದು ಮೆರವಣಿಗೆ, ಪೊಲೀಸ್ ದೌರ್ಜನ್ಯ, ಇತ್ಯಾದಿ. ಇಷ್ಟೆಲ್ಲಾ ಮನಸ್ಸನ್ನು ಮುತ್ತುತ್ತಿದ್ದರೆ ವ್ಯಾಸಂಗ ಇನ್ನೆಷ್ಟು ಪ್ರಕರ್ಷವಾಗಿದ್ದೀತು! ಅಂದರೆ, ಮನಸ್ಸಿನ ವೃತ್ತಿಯು ಅನೇಕ ವಸ್ತುಗಳನ್ನು ಏಕಕಾಲದಲ್ಲಿ ಸಾಕ್ಷೀಕರಿಸಿಕೊಳ್ಳಲು ಹೊರಟಿದೆ. ಅದರ ಪರಿಣಾಮವಾಗಿ ಏಕಾಗ್ರತೆ ಸಿದ್ಧಿಸಿಲ್ಲ. ಅಲ್ಲದೆ, ಯಾವೊಂದು ವಸ್ತುವಿನ ಬಗೆಗೂ ಪೂರ್ಣ ಪ್ರಮಾಣದ ಅವಲೋಕನ ಮತ್ತು ತಿಳುವಳಿಕೆ ಲಭಿಸಿಲ್ಲ. ಅವನ ಕ್ರಿಯೆಯಲ್ಲಿ ಆನಂದವೂ ಇಲ್ಲ, ಸಾಫಲ್ಯವೂ ಇಲ್ಲ.

ವರ್ಡ್ಸ್‌ವರ್ತ್ ಎಂಬ ಒಬ್ಬ ಇಂಗ್ಲಿಷ್ ಕವಿ ಒಂದು ಕವನದಲ್ಲಿ ಇಂತಹ ತನ್ನ ಮನಃಸ್ಥಿತಿಯನ್ನು ವರ್ಣಿಸಿದ್ದಾನೆ.



ಪ್ರಕೃತಿಯ ಸೊಬಗಿನಿಂದ ಆಕರ್ಷಿತನಾಗಿ, ಅದರ ಯಾವೊಂದು ಭಾಗದ ಸೌಂದರ್ಯವನ್ನೂ ತೃಪ್ತಿಕರವಾಗಿ ಸವಿದು ಉಲ್ಲಾಸ ಪಡೆಯಲು ಸಾಧ್ಯವಿಲ್ಲದಂತೆ, ಅವನು ಪ್ರಕೃತಿಯ ಮಡಿಲಿನಲ್ಲಿ ಅತ್ತಿಂದಿತ್ತ, ಇತ್ತಿಂದತ್ತ ಧಾವಿಸುತ್ತಿದ್ದನಂತೆ. ಒಮ್ಮೆ ಹುಲ್ಲುಗಾವಲು, ಒಮ್ಮೆ ಸರೋವರ, ಒಮ್ಮೆ ಕಾಡು, ಒಮ್ಮೆ ಝರಿ, ಒಮ್ಮೆ ಜಲಪಾತ, ಹೀಗೆ ಸಂಭ್ರಮ; ಆದರೆ ಒಂದರಲ್ಲಿ ತಲ್ಲೀನನಾಗಿ ಆನಂದಾಮೃತದ ಸ್ವಾದ ಸಾಧ್ಯವಾಗಿಲ್ಲ. ಪ್ರಕೃತಿ ಸಂಸರ್ಗದಿಂದ ಕ್ರಮೇಣ ಆ ಸ್ಥಿತಿಯನ್ನು ತಲುಪಿ ಮನಸ್ಸು ಶಾಂತಿಸಾಗರವಾಗಿ ಪರಿಣಮಿಸಿತಂತೆ.

ಐಐಟಿ ಪರೀಕ್ಷೆಗೆ ಓದುವವನೂ ಮಾಡಬೇಕಾದ್ದು ಅದನ್ನೆ: ಮನಸ್ಸಿನ ವಲಯದಲ್ಲಿ ಒಮ್ಮೆಲೆ ಹತ್ತಾರು ವಸ್ತುಗಳ ಸಂಚಾರವಾಗುವುದನ್ನು ಅಭ್ಯಾಸ-ಪ್ರಯತ್ನಗಳಿಂದ ಹ್ರಾಸಗೊಳಿಸಿ ಕ್ರಮೇಣ ಏಕಾಗ್ರತೆಯನ್ನು ಸಾಧಿಸುವುದು. ಅದನ್ನೇ ಏಕತಾನತೆಯೆಂದೂ ಕರೆಯುತ್ತಾರೆ. ''ವಿಕ್ಷೇಪ ಪ್ರತಿಷೇಧಾರ್ಥಂ ಏಕತತ್ತ್ವಾವಲಂಬನಂ ಚಿತ್ತಂ ಅಭ್ಯಸೇತ್'' ಎನ್ನುತ್ತಾರೆ ವ್ಯಾಸರು. ಕೆಲವು ಭಾವನೆಗಳನ್ನು ಮೇಳವಿಸಿಕೊಂಡು ಮನಸ್ಸನ್ನು ಪ್ರಸನ್ನಗೊಳಿಸಿಕೊಳ್ಳುವುದು ಒಂದು ವಿಧ. ಮೈತ್ರಿ, ಕರುಣೆ, ಇತ್ಯಾದಿಗಳು ಅಂತಹ ಭಾವನೆಗಳು. ಇನ್ನೊಂದು ವಿಧ, ಉಸಿರಾಟವನ್ನು ವ್ಯವಸ್ಥಿತಗೊಳಿಸಿ ಅದರತ್ತ ಗಮನ ನೀಡುವುದು, ಮೂಗಿನ ತುದಿಯನ್ನೇ ದೃಷ್ಟಿಯಲ್ಲಿರಿಸಿಕೊಳ್ಳುವುದು, ಹುಬ್ಬುಗಳ ನಡುವೆ ದೃಷ್ಟಿಯನ್ನು ನೆಡುವುದು ಇತ್ಯಾದಿ. ಆದರೆ ಸಾಂಪ್ರದಾಯಿಕವಾಗಿ ಗುರುತಿಸಲ್ಪಟ್ಟ ಇವೇ ಧಾರಣೆಗೆ ವಸ್ತುವಾಗಬೇಕಾಗಿಲ್ಲ. ಭಾರತದ ಭೂಪಟವನ್ನಾಗಲಿ ಕಾರ್ಗಿಲ್ ಬಳಿಯ ಹಿಮಾಚ್ಛಾದಿತ ಪರ್ವತವನ್ನಾಗಲಿ ವಸ್ತುವಾಗಿಸಿಕೊಳ್ಳಲು ಅಡ್ಡಿಯಿಲ್ಲ. ದೇವರೆಂಬ ವಸ್ತುವಿನಲ್ಲಿ ನಂಬಿಕೆಯಿಟ್ಟು ಅವನ ಯಾವುದೋ ಮೂರ್ತಿಯನ್ನು ವಸ್ತುವಾಗಿಸಿಕೊಳ್ಳಬೇಕೆಂಬ ನಿರ್ಬಂಧವಂತೂ ಖಂಡಿತ ಇಲ್ಲ. ಪತಂಜಲಿಯೇ ನಿರ್ದೇಶಿಸುವಂತೆ, ಅಭ್ಯಾಸಿಗೆ ಇಷ್ಟವೆನಿಸುವ ಯಾವುದೇ ವಸ್ತುವನ್ನು ದೃಷ್ಟಿಯಲ್ಲಿರಿಸಿಕೊಳ್ಳಬಹುದು (ಯಥಾಭಿಮತ ಧ್ಯಾನಾದ್ವಾ). ಒಂದರಲ್ಲಿ ಏಕಾಗ್ರತೆ ಸಾಧಿಸಿದರೆ ಆಮೇಲೆ ಇನ್ನೊಂದರಲ್ಲೂ ಅದನ್ನು ಸಾಧಿಸಬಹುದು ಎನ್ನುತ್ತಾರೆ ವ್ಯಾಸರು (ತತ್ರ ಲಬ್ಧಸ್ಥಿತಿಕಂ ಅನ್ಯತ್ರಾಪಿ ಸ್ಥಿತಿಪದಂ ಲಭತೇ). ಚ್ಯುತಿ ಬರಬಾರದ್ದು ಏಕತಾನತೆಗೆ, ಅಷ್ಟೇ. ದೃಷ್ಟಿಯಲ್ಲಿರಿಸಿಕೊಂಡ ವಸ್ತುವಿನ ಜೊತೆಗೆ ಏಕಕಾಲದಲ್ಲಿ ಬೇರಿನ್ನಷ್ಟು ವಸ್ತುಗಳು ಸೇರಿಕೊಳ್ಳಬಾರದು. ''ಪ್ರತ್ಯಯ ಏಕತಾನತಾ ಧ್ಯಾನಮ್'' ಎನ್ನುತ್ತಾನೆ ಪತಂಜಲಿ.

ಮನಸ್ಸಿಗೆ ಗೋಚರವಾಗುವ ವಸ್ತುಗಳ ಪ್ರಮಾಣವನ್ನು ಕನಿಷ್ಠಮಟ್ಟಕ್ಕೆ ಇಳಿಸಿದಾಗ ಚಿತ್ತವೃತ್ತಿಯು ಸಹಜವಾಗಿಯೇ ಏಕಾಗ್ರತೆಯಿಂದ ಕೂಡಿರುತ್ತದೆ. ಆಗ ಗ್ರಹಿಕೆಯ ಮೌಲ್ಯ ಉದಾತ್ತವಾಗಿರುತ್ತದೆ. ವಿಚಲಿತವಾದ ಮನಸ್ಸು ಎಂಬುದು ಶಾಂತ ಮನಸ್ಸು ಎಂಬುದಾಗಿ ಪರಿವರ್ತನೆಯಾಗಿದೆ. ಇದನ್ನೇ ಮುಂದುವರೆಸಿ ಇನ್ನೂ ಹೆಚ್ಚಿನ ಔನ್ನತ್ಯ ಪಡೆಯಲು ಸಾಧ್ಯ. ಯಾವುದೇ ಗ್ರಹಿಕೆಯ ಕ್ರಿಯೆಯಲ್ಲಿ ಮೂರು ಅಂಶಗಳಿರುತ್ತವೆ: ಗ್ರಾಹಕ, ಗೃಹೀತ ವಸ್ತು ಮತ್ತು ಗ್ರಹಣ ಕ್ರಿಯೆ. ಗ್ರಾಹಕನ ಏಕಾಗ್ರತೆಯಿಂದ ವಸ್ತು ಮತ್ತು ಕ್ರಿಯೆಗಳಿಗೆ ಲೋಪವುಂಟಾದರೆ ಆಗ ಅವನು ತನ್ನ ನಿಜ ಸ್ವರೂಪದಲ್ಲಿರುತ್ತಾನೆ. ಪತಂಜಲಿ ಹೇಳುವಂತೆ, ''ತದಾ ದ್ರಷ್ಟುಃ ಸ್ವ-ರೂಪೇ ಅವಸ್ಥಾನಮ್''. ಆ ಸ್ಥಿತಿಯನ್ನು ಮುಟ್ಟಲಿ, ಬಿಡಲಿ, ಅದನ್ನು ಊಹಿಸಿಕೊಳ್ಳಲು ಸಾಧ್ಯ; ಅದರ ಅಸಾಮಾನ್ಯ ಅನುಭವದ ಸೊಗಸನ್ನು ಚಿತ್ರಿಸಿಕೊಳ್ಳುವುದೂ ಸಾಧ್ಯ. ಅದೇನೂ ಮಾನವಾತೀತವಾದ ಪ್ರಜ್ಞೆಯಲ್ಲ, ಸ್ವಾಮಿಗಳ ಅಥವಾ ಗುರುಗಳ ಅಥವಾ ದೇವರ ಕೃಪೆಯಿಂದ ಲಭ್ಯವಾಗುವುದಲ್ಲ. ಅಭ್ಯಾಸ- ಪ್ರಯತ್ನಗಳಿಂದ ಲಭ್ಯವಾಗುವುದು ಅದು.

ಇಷ್ಟೆಲ್ಲಾ ಘಟಿಸಬೇಕಾದರೆ ಮನಸ್ಸಿಗೆ ಪೂರಕವಾಗಿ ನಿಲ್ಲುವ ದೇಹಸ್ಥಿತಿಯ ಅಗತ್ಯವಿದೆ. ಆದ್ದರಿಂದಲೇ ದೇಹ-ಮನಸ್ಸುಗಳ ಅಂತರಾಂತರ ಸಂಬಂಧವನ್ನು ಯೋಗಶಾಸ್ತ್ರದಲ್ಲಿ ಒತ್ತಿಹೇಳುವುದು. ಈಚಿನ ದಶಕಗಳಲ್ಲಿ ಕಾಯಿಲೆಗಳನ್ನು 'ಸೈಕೋ-ಸೊಮ್ಯಾಟಿಕ್' ಎಂದು ಹೇಳುವುದು ರೂಢಿಯಲ್ಲಿದೆ. 'ಸೋಮ' ಎಂಬುದು ಲ್ಯಾಟಿನ್ ಪದ. ಹಾಗೆಂದರೆ, ಶರೀರ ಎಂದರ್ಥ. ಮನಸ್ಸು-ದೇಹಗಳು ಸಂಬಂಧರಹಿತವಲ್ಲ; ಬಾಧೆಯಲ್ಲೂ ಭಾಗಿಗಳು, ಸುಖದಲ್ಲೂ ಭಾಗಿಗಳು. ಹಾಗೆಂದ ಮಾತ್ರಕ್ಕೆ, ಒಂದು ಗಾಯವಾಗಿ ರಕ್ತ ಸೋರುತ್ತಿದ್ದರೆ ಅದು ವಾಸ್ತವವಲ್ಲ, ಅದು ಮಾನಸಿಕ ಸೃಷ್ಟಿ ಎಂದರೆ ಉಪಹಾಸವಾಗುತ್ತದೆ. ಅಥವಾ ಪರೀಕ್ಷೆಯಲ್ಲಿ ತೇರ್ಗಡೆಯಾದ ಉಲ್ಲಾಸದಿಂದಾಗಿ ಶರೀರವು ಹಗುರವಾಗಿ ಗಾಳಿಯಲ್ಲಿ ಹಾರಲು ಸಾಧ್ಯಾಗುತ್ತದೆಂದೂ ಅಲ್ಲ. ದೇಹ ಮತ್ತು ಮನಸ್ಸುಗಳೆರಡಕ್ಕೂ ಅಭ್ಯಾಸಗಳನ್ನು ನಿರೂಪಿಸುವುದು ಯೋಗಶಾಸ್ತ್ರದ ವ್ಯಾಪ್ತಿಯಾಗಿದೆ. ○○

# ಕರ್ಮ-ಜ್ಞಾನ

ಕರ್ಮ ಎಂದರೆ ಕೆಲಸ. ಕೆಲಸ ಮಾಡದವನು ಕ್ಷಣಕಾಲವೂ ಬದುಕಿರಲಾರ: ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್. ಆದರೆ ಬೇರೆ ಜೀವಿಗಳು ಕೆಲಸ ಮಾಡುವುದಕ್ಕೂ ಮನುಷ್ಯ ಕೆಲಸ ಮಾಡುವುದಕ್ಕೂ ವ್ಯತ್ಯಾಸವಿದೆ. ಎಲ್ಲ ಜೀವಿಗಳೂ ಕೇವಲ ಜೀವಸ್ಫೂರ್ತಿಯಿಂದ ಕೆಲಸ ಮಾಡುತ್ತವೆ. ಆದರೆ ಮನುಷ್ಯ ಬುದ್ಧಿಪೂರ್ವಕವಾಗಿ ಕೆಲಸ ಮಾಡಬಲ್ಲ. ಬೇರೆ ಪ್ರಾಣಿಗಳ ಕೆಲಸಕ್ಕೆ ತಮ್ಮ ದೇಹದಲ್ಲೇ ಸಾಧನಗಳಿದ್ದರೆ ಮನುಷ್ಯ ತನ್ನ ಕೆಲಸಕ್ಕೆ ತನ್ನ ದೇಹದಿಂದ ಹೊರಗಿನ ಸಾಧನಗಳನ್ನು ಬಳಸಬಲ್ಲ-ಬಳಸಬೇಕು. ಈ ಸಾಧನಗಳ ಬಳಕೆ ಪರತಂತ್ರವಾದರೆ ಅದರ ಆಯ್ಕೆ ಅವನ ಬುದ್ಧಿಯಿಂದಲೇ ಆಗುತ್ತದೆ. ಆದ್ದರಿಂದ ಮನುಷ್ಯ ಸ್ವತಂತ್ರನಾಗುವುದೇ ಬುದ್ಧಿಯಿಂದ.

ಬುದ್ಧಿ ಎನ್ನುವುದು ತಾತ್ಕಾಲಿಕ. ಅದಕ್ಕೆ ನೆನಪಿನ ಹಿನ್ನೆಲೆ ಮತ್ತು 'ಮತಿ'ಯ ಮುನ್ನೆಲೆ ಇರುತ್ತದೆ.

ಸ್ಮೃತಿಃ ಅತೀತ ವಿಷಯಾ ಮತಿಃ ಆಗಾಮಿಗೋಚರಾ ।

ಬುದ್ಧಿಃ ತಾತ್ಕಾಲಿಕೀ ಜ್ಞೇಯಾ ಪ್ರಜ್ಞಾ ತ್ರೈಕಾಲಿಕೀ ಮತಾ ॥

'ಸ್ಮೃತಿ ಹಿಂದಿನ ಕಾಲದ್ದು, ಮತಿ ಮುಂದಿನದರ ಕಾಣ್ಕೆ; ಬುದ್ಧಿ ಆಯಾ ಹೊತ್ತಿನದು, ಮೂರೂ ಕಾಲದ್ದು– ಪ್ರಜ್ಞಾ', ಎಂದು ಭಟ್ಟತೌತ ಹೇಳಿದ. ಹೀಗೆ ನೋಡಿದಾಗ ಬುದ್ಧಿ ಆಯಾ ಕ್ಷಣದ ಜಾಣತನ ಮಾತ್ರ. ಅದಕ್ಕಿಂತಲೂ ದೊಡ್ಡದು ಪ್ರಜ್ಞಾ, ತ್ರೈಕಾಲಿಕವಾದ ಪ್ರಜ್ಞೆಯೇ ಚರಿತ್ರೆಯನ್ನೂ, ಅದರಿಂದ ಪಾಠಗಳನ್ನೂ, ವೈಚಾರಿಕತೆಯನ್ನೂ ಮೂಡಿಸುವುದು.

ಜನಗಳ ನಡವಳಿಕೆಯನ್ನು ಆಚಾರವೆಂದೂ ಅದರ ಚರಿತ್ರೆ ಮತ್ತು ಅಲ್ಲಿಂದ ಬಂದ ತತ್ವವನ್ನು ವಿಚಾರವೆಂದೂ ಹೇಳುತ್ತಾರಷ್ಟೆ. ಅಲ್ಲಿ ಎರಡೂ ಚರ್ (=ನಡೆ) ಧಾತುವಿನಿಂದಲೇ ಬಂದವು. ಈ 'ನಡೆ'ಯು ಕೇವಲ ವ್ಯಕ್ತಿಯದಷ್ಟೇ ಅಲ್ಲ, ಇಡೀ ಸಮುದಾಯದ ತಲೆ ತಲಾಂತರದ ನಡೆಯನ್ನು ಆಧರಿಸಿದೆ. ಆದ್ದರಿಂದಲೇ ಆಚಾರ-ವಿಚಾರಗಳೆರಡೂ ಸಂಪ್ರದಾಯವಾಗಿ ಪರಂಪರೆಯನ್ನು ಸೃಷ್ಟಿಸುತ್ತವೆ.

ತಲೆ ತಲಾಂತರದ ಸ್ಮೃತಿಯನ್ನು ಕೇವಲ 'ನರ' ನೆಲೆಯಲ್ಲಿ ಮೈಗೂಡಿಸಿಕೊಂಡ ಅಂಧಾಚರಣೆಗಳು ಒಂದು ಕಡೆಗೂ ಆಚರಣೆಯ ಹಂಗನ್ನು ತೊರೆದ ಅಮೂರ್ತ ವಿಚಾರಗಳು ಇನ್ನೊಂದು ಕಡೆಗೂ ವ್ಯಕ್ತಿಯನ್ನೂ ಸಮಾಜವನ್ನೂ ಒಡೆದಿವೆ. ವಿಚಾರ ಹೆಚ್ಚಿದಷ್ಟೂ ಕೆಲಸವನ್ನು ಕಡಿಮೆ ಮಾಡುವ, ಸರಳಗೊಳಿಸುವ ದಾರಿ ಶ್ರಮವನ್ನು ಅಂತರ್ಯಗೊಳಿಸುವ ಪ್ರಕ್ರಿಯೆಯಾಗುತ್ತಿದೆ. ಶ್ರಮಿಕನಿಗಿಂತ ಜ್ಞಾನಿಗೆ ಹೆಚ್ಚು ಮಹತ್ವ ಸಿಗುತ್ತಾ ಸಾಗಿದೆ. ವಿಚಾರಕ್ಕೆ ತೆತ್ತುಕೊಂಡ 'ಬ್ರಾಹ್ಮಣ' ಕಾರ್ಮಿಕನಾದ 'ಶೂದ್ರ'ನಿಗಿಂತ ಮಹತ್ವ ಸಾಧಿಸಿದ. ಇಂದಿಗೂ ಬುದ್ಧಿಜೀವಿ ಕಾರ್ಮಿಕನಿಗಿಂತ ಮಿಗಿಲು ಎನ್ನುವುದು ಇದ್ದೇ ಇದೆ. ಕರ್ಮಕ್ಕೆ ಅಂಟಿಕೊಂಡವರಲ್ಲಿ ಬುದ್ಧಿಭೇದ ಬೆಳೆಸಬೇಡ ಎನ್ನುತ್ತದೆ ಗೀತೆ: 'ನ ಬುದ್ಧಿಭೇದಂ ಜನಯೇತ್ ಅಜ್ಞಾನಾಂ ಕರ್ಮಸಂಗಿನಾಮ್'. ವಿಜ್ಞಾನಕ್ಕಿಂತ ತಂತ್ರಜ್ಞಾನಕ್ಕೆ ಹೆಚ್ಚು ಮಹತ್ವ ಕೊಡುವ ಈಗಿನ ನಮ್ಮ ಶಿಕ್ಷಣಕ್ರಮ ಬೌದ್ಧಿಕ ಶ್ರಮವನ್ನೂ ದೈಹಿಕ ಶ್ರಮದಂತೆಯೇ ದುಡಿಸಿಕೊಳ್ಳುತ್ತಾ ಬೌದ್ಧಿಕ ಕಾರ್ಮಿಕರನ್ನು ಸೃಷ್ಟಿಸಿದೆ. ಈ ಬೌದ್ಧಿಕ ಶ್ರಮಜೀವಿಗಳು ಸ್ವತಂತ್ರ ವಿಚಾರವಿಲ್ಲದೆ ಅನ್ಯ ಸಾಧನೆಗಳಂತೆ ತಾವೂ ಸಾಧನಗಳಾಗುತ್ತಿದ್ದಾರೆ, ಸಾಧಕರಾಗುತ್ತಿಲ್ಲ. ನಮ್ಮ ದೇಶದಲ್ಲಂತೂ ಇಂತಹ ಬೌದ್ಧಿಕ ಕಾರ್ಮಿಕರು ಸಾಫ್ಟ್‌ವೇರ್‌ಗಳಾಗಿಹೋಗುತ್ತಾ ಕೃತಕಮತಿಯ ದಾಸರಾಗಿದ್ದಾರೆ. ಇದಕ್ಕೆ ಪ್ರತಿಯಾಗಿ ದೈಹಿಕ ಶ್ರಮದ ಕೆಲಸಗಳು ಕಡಿಮೆಯಾಗುತ್ತಾ ನಿರುದ್ಯೋಗ ಹೆಚ್ಚುತ್ತಿದೆ. ಈ ಸಂದರ್ಭದಲ್ಲಿ ವೇದಾಂತದ ಚರ್ಚೆಯೊಂದು ಪ್ರಸ್ತುತವೆನಿಸುತ್ತದೆ. ಶೂದ್ರರ ದೈಹಿಕ ಕರ್ಮಕ್ಕಿಂತ ಮಿಗಿಲಾದ ಬ್ರಾಹ್ಮಣರ ಯಾಜ್ಞಿಕ ಕರ್ಮಕ್ಕಿಂತ ಶುದ್ಧಜ್ಞಾನವು ಬಿಡುಗಡೆಗೆ ಅಥವಾ ಮುಕ್ತಿಗೆ ದಾರಿ ಎಂದ ಶಂಕರಾಚಾರ್ಯರಂತಹವರ ವಾದ ಒಂದು ಕಡೆಗೆ ಇದೆ. ಇನ್ನೊಂದು ಕಡೆಗೆ ಕೇವಲ ಜ್ಞಾನ ಸಾಧ್ಯವೇ ಇಲ್ಲ, ಜ್ಞಾನ-ಕರ್ಮಗಳ ಸಮನ್ವಯವೇ ಬಿಡುಗಡೆಗೆ ಸಾಧನ ಎನ್ನುವ ರಾಮಾನುಜಾಚಾರ್ಯರಂತಹವರ ವಾದವಿದೆ. ಆಚಾರದಿಂದ ವಿಚಾರವೇ, ವಿಚಾರದಿಂದ ಆಚಾರವೇ ಎನ್ನುವ ಬೀಜವೃಕ್ಷ ನ್ಯಾಯ ಬಿಡಿಸುವುದು ಇಲ್ಲಿ ಮುಖ್ಯವಲ್ಲ. ಜ್ಞಾನ-ಕರ್ಮಗಳು ಅತ್ಯಂತ ವಿರುದ್ಧವೆಂದು ನೋಡುವಲ್ಲಿಯೂ ಕರ್ಮವೇ ಕೆಲವೊಮ್ಮೆ ಕುಶಲತೆಗಾಗಿ ಬುದ್ಧಿಯ ಭಾರವನ್ನು ಬಿಟ್ಟುಕೊಡಬೇಕಾಗುತ್ತದೆ. 'ಝೆನ್'ನಲ್ಲಿ ಕಲಿಯುವುದಕ್ಕಿಂತ ಕಲಿತದ್ದನ್ನು ಬಿಟ್ಟುಕೊಡುವ, ಅಥವಾ ಅದನ್ನು ಮೀರಿ ನಿಲ್ಲುವ ಪ್ರಕ್ರಿಯೆ ಮುಖ್ಯ. ವ್ಯಕ್ತಿಯಲ್ಲಿ ಹೇಗೋ ಹಾಗೆ ಸಮುದಾಯದಲ್ಲಿ ಹಾಗೂ ರಾಷ್ಟ್ರದಲ್ಲಿ ವಿಚಾರವು ಭಾರವಾಗದಂತೆ, ಆಚಾರ ಅಂಧಾನುಸರಣೆಯಾಗದಂತೆ ಇರಲು ಏನು ಮಾಡಬೇಕು? ಕಂಪ್ಯೂಟರ್‌ಗೆ ಕಾಯಿ ಒಡೆಯುವುದು, ಸಿ.ಡಿ.ರೋಮ್‌ನಲ್ಲಿ ಸತ್ಯನಾರಾಯಣಪೂಜೆ ನಡೆಸುವುದು, ಬುದ್ಧಿಯ ಹೊಸ ಆವಿಷ್ಕಾರಗಳಿಂದಲೇ ಪ್ರಜ್ಞೆಯನ್ನೂ ಕಳೆದುಕೊಳ್ಳುವ ವಿಪರ್ಯಾಸಕ್ಕೆ ಉತ್ತರವೆಲ್ಲಿ? ಪ್ರಾಯಶಃ ಜಾಣರಿಗೆ ಶ್ರಮಜೀವನವನ್ನೂ ಕಾರ್ಮಿಕರಲ್ಲಿ ವೈಚಾರಿಕತೆಯನ್ನೂ ಅನಿವಾರ್ಯವಾಗಿಸುವಲ್ಲಿ.

**ಡಾ॥ ಜಿ. ಶ್ರೀನಿವಾಸಮೂರ್ತಿ,** ನಂ. 28, 6ನೇ ಮೇನ್, ಮಲ್ಲೇಶ್ವರಂ, ಬೆಂಗಳೂರು - 560 003

# ಶಾಸ್ತ್ರ-ವಿಜ್ಞಾನ

ಶಾಸ್ತ್ರ ಎಂದೊಡನೆ ತಟ್ಟನೆ ಹೊಳೆಯುವುದು ದೇವ ಮಂದಿರಗಳಲ್ಲಿ ಪಠಿಸುವ ಧರ್ಮ ಶಾಸ್ತ್ರಗಳು. ಅವನ್ನು ಪಠಿಸುವ ಧರ್ಮಗುರುಗಳು, ಪುರೋಹಿತರು, ಮತಧರ್ಮಗಳ ಆಧಾರ ಗ್ರಂಥಗಳನ್ನು ಶಾಸ್ತ್ರಗಳೆಂದೇ ಗುರುತಿಸುತ್ತಾರೆ. ಆದರೆ ಶಾಸ್ತ್ರ ಎಂದರೆ ವಿಜ್ಞಾನ ಎನ್ನುವ ಅರ್ಥವೂ ಇದೆ. ಯಾವುದೇ ವಿಷಯಕ್ಕೆ ಸಂಬಂಧಪಟ್ಟಂತೆ ಅದರ ನಿರೂಪಣೆಯನ್ನು, ಕಾರ್ಯಕ್ಷಮತೆಯನ್ನು ಒಂದು ಕಟ್ಟುಪಾಡಿಗೆ ಒಳಪಡಿಸುವ ಅಧ್ಯಯನದ ರೀತಿಯನ್ನು ಒಂದು ನಿರ್ದಿಷ್ಟ ರೂಪದಲ್ಲಿ ತರುವ ಕ್ರಮವೇ ಶಾಸ್ತ್ರ ಎಂದಾಗುತ್ತದೆ. ಇದನ್ನು ವಿಜ್ಞಾನವೆಂದೂ ಕರೆಯಲಾಗುತ್ತದೆ. ವಿಜ್ಞಾನ ನಿಂತ ನೀರಲ್ಲ, ನಿರಂತರವಾಗಿ ಹರಿಯುವ ಪ್ರಕ್ರಿಯೆ. ಇದಕ್ಕೆ ಅಂತ್ಯವೇ ಇಲ್ಲ. ಸಾಧನೆ ಮುಗಿದಿದೆ, ಅಂತಿಮ ಫಲಿತಾಂಶ ದೊರಕಿದೆ, ಮುಂದೆ ಇನ್ನೇನೂ ಇಲ್ಲ ಎಂಬುದು ವಿಜ್ಞಾನದ ಮಟ್ಟಿಗೆ ಸುಳ್ಳಾಗುತ್ತದೆ. ಹೀಗೆ ಶಾಸ್ತ್ರ-ವಿಜ್ಞಾನ ಮಾನವನ ಒಳಿತಿಗಾಗಿ, ಅವನ ಅನುಕೂಲಕ್ಕಾಗಿ, ಅವನಿಂದಲೇ ಬೆಳೆಯುತ್ತದೆ. ಬೆಳವಣಿಗೆಯನ್ನು ರೂಢಿಸಿಕೊಂಡು ಬೆಳೆಯುವ, ಎಲ್ಲಾ ವೈಜ್ಞಾನಿಕ ಕ್ಷೇತ್ರಗಳನ್ನು ಆವರಿಸಿಕೊಳ್ಳುವ ಶಾಸ್ತ್ರ ಒಂದೆಡೆಯಾದರೆ ಪೂರ್ವಕಲ್ಪಿತ ಮಿಥ್ಯೆಯೊಂದಿಗೆ, ದಂತಕಥೆಗಳ ನಂಬಿಕೆಗಳನ್ನು ಆಧಾರವಾಗಿರಿಸಿಕೊಂಡಿರುವ, ಬದಲಾವಣೆಗೆ ಎಳಸದ ಧರ್ಮಶಾಸ್ತ್ರಗಳು ಇನ್ನೊಂದೆಡೆಯಾಗುತ್ತದೆ. ಹೀಗೆ ಶಾಸ್ತ್ರವೆಂದು ಕರೆಸಿಕೊಳ್ಳುವ ಮತಧರ್ಮ ಹಾಗೂ ವಿಜ್ಞಾನಗಳ ನಡುವಿನ ಘರ್ಷಣೆ ಸತತವಾಗಿ ಇತಿಹಾಸದಲ್ಲಿ ನಡೆದುಹೋಗಿದೆ, ನಡೆಯುತ್ತಲೇ ಇದೆ. ಜ್ಞಾನವು ಕಾಲ ಮತ್ತು ಅನುಭವಗಳಿಂದ ಸ್ಫುಟಗೊಂಡ ಸತ್ಯ. ಜಗತ್ತನ್ನು ಅಷ್ಟದಿಗ್ಗಜಗಳು ಹೊತ್ತುಕೊಂಡಿವೆಯೆಂಬ ನಮ್ಮ ಶಾಸ್ತ್ರಗ್ರಂಥಗಳ ಉಲ್ಲೇಖವಾಗಲೀ, ಮೂರು ಭಾರಿ ತಿಮಿಂಗಲಗಳು ಈ ಭೂಮಿಯನ್ನು ಹೊತ್ತಿವೆಯೆಂಬ ಸ್ಲೋವಾಕ್ ಜನಾಂಗದ ನಂಬಿಕೆಯಾಗಲಿ ಪ್ರಪಂಚ ದುಂಡಗಿದೆಯೆಂಬ ಸತ್ಯವನ್ನು ಸುಳ್ಳಾಗಿಸದು. ಆದರೆ ಇಂಥ ಸತ್ಯಗಳನ್ನು ಹೊರತರಲು ಜೀವತೆತ್ತ ವಿಜ್ಞಾನಿಗಳೆಷ್ಟು? ಚರ್ಚ್‌ನ ಕೋಪಕ್ಕೆ ಒಳಗಾಗಿ ಚಿತ್ರಹಿಂಸೆಗೆ ಒಳಗಾದ ಗೆಲಿಲಿಯೋ, ಜೀವಂತವಾಗಿ ಸುಡಲ್ಪಟ್ಟ ಬ್ರೂನೋ ಇವರನ್ನು ಮರೆಯಲು ಸಾಧ್ಯವೇ? ದೇವಿ ಹಾಕುವುದರ ಮಹತ್ವವನ್ನು ಕಂಡುಕೊಂಡ, ಅದನ್ನು ಸಂಶೋಧಿಸಿದ, 18ನೇ ಶತಮಾನದ ವೈದ್ಯವಿಜ್ಞಾನಿ ಎಡ್ವರ್ಡ್ ಜೆನ್ನರ್ ತನ್ನ ತಾಯ್ನಾಡಿನಲ್ಲೇ ಅವಹೇಳನಕ್ಕೆ ಗುರಿಯಾದ. ಈ ಪ್ರಯೋಗಗಳನ್ನು ಮಾಡಬಾರದೆಂಬ ಕಟ್ಟಪ್ಪಣೆಗೆ ಒಳಗಾದ. ಪಾಪಿಗಳಿಗೆ ಶಿಕ್ಷೆ ನೀಡಲು ಭಗವಂತ ಮೈಲಿಬೇನೆಯನ್ನು ಉಂಟುಮಾಡುತ್ತಾನೆ ಎನ್ನುವ ಪುರೋಹಿತ ವರ್ಗದ ಪ್ರತಿಪಾದನೆ ವಿಜ್ಞಾನದ ಮುನ್ನಡೆಯನ್ನು ತಡೆಯಲಿಲ್ಲ. ತನ್ನ ಸೈನ್ಯದಲ್ಲಾಗುತ್ತಿದ್ದ ಅಪಾರ ಸಾವುನೋವುಗಳನ್ನು ನೆಪೋಲಿಯನ್ ದೇವಿ ಹಾಕುವುದರ ಮೂಲಕ ತಡೆಗಟ್ಟಿದ. ಅಂದಿನ ಅಮೆರಿಕದ ಅಧ್ಯಕ್ಷ ಥಾಮಸ್ ಜೆಫರ್ಸನ್ ತನ್ನ ಕುಟುಂಬದವರಿಗೆ ದೇವಿ ಹಾಕಿಸುವುದರ ಮೂಲಕ ಅಮೆರಿಕದ ಜನತೆ ಅದಕ್ಕೆ ಅಂಗೀಕಾರ ನೀಡುವಂತೆ ಮಾಡಿದ. ಹತ್ತೊಂಬತ್ತನೆಯ ಶತಮಾನದ ಮಧ್ಯಕಾಲದಲ್ಲಿ ಕಂಡುಹಿಡಿಯಲ್ಪಟ್ಟ ಕ್ಲೋರೋಫಾರಂ ಇದೇ ರೀತಿಯ ವಿರೋಧವನ್ನು ಎದುರಿಸಬೇಕಾಯಿತು. ಹುಟ್ಟು ಒಂದು ಸಹಜ ಕ್ರಿಯೆ. ವೇದನೆಯನ್ನು ಅನುಭವಿಸಿಯೇ ಜೀವ ಭೂಮಿಗೆ ಬರಬೇಕು, ಇದು ದೇವರ ಇಚ್ಛೆ ಎಂಬ ಧರ್ಮಗುರುಗಳ ವಾದವನ್ನು ಸಂಶೋಧಕ ವೈದ್ಯವಿಜ್ಞಾನಿ ಜೇಮ್ಸ್ ಯಂಗ್ ಸಿಂಪ್ಸನ್ ಬಲವಾಗಿ ವಿರೋಧಿಸಿದ. ಹೊಲದಲ್ಲಿ ಬೆಳೆಯುವ ಗೋಧಿಯ ಜೊತೆಗೆ ಕಳೆಯೂ ಬೆಳೆಯುತ್ತದೆಯಲ್ಲ, ಅದೂ ದೇವರ ಸೃಷ್ಟಿ-ಅದನ್ನೇಕೆ ಕೀಳುವಿರಿ? ಹುಟ್ಟು-ಸಾವೂ ದೇವರ ಲೀಲೆ ಎಂದು ಧರ್ಮಗ್ರಂಥಗಳು ಸಾರುವಾಗ-ಚಿಕಿತ್ಸೆ ಮಾಡಿಸಿ ರೋಗಿಯನ್ನು ಬದುಕಿಸಲು ಯಾಕೆ ಯತ್ನಿಸುವಿರಿ? ಎಂಬುದಾಗಿ ಪ್ರಶ್ನಿಸಿದರೂ, ಬ್ರಿಟನ್ನಿನಲ್ಲಿ ಅದಕ್ಕೆ ಮನ್ನಣೆ ಸಿಕ್ಕಿದ್ದು ವಿಕ್ಟೋರಿಯಾ ಮಹಾರಾಣಿ ತಡೆಯಲಾರದ ಪ್ರಸವ ವೇದನೆಯಿಂದ ನರಳಿದ ನಂತರವೇ. ಅರಸಿ ತನಗೆ ಕ್ಲೋರೋಫಾರಂ ನೀಡಲು ಆಜ್ಞೆ ಇತ್ತು, ಅದರ ಪರಿಣಾಮವಾಗಿ ಅವಳಿಗೆ ಸುಖಪ್ರಸವವಾಯಿತು. ಕ್ಲೋರೋಫಾರಂ ಅರಮನೆ ಪ್ರವೇಶಿಸಿದ ನಂತರ ಅದರ ಮುನ್ನಡೆಯನ್ನು ತಡೆಯಲು ಯಾರಿಂದಲೂ ಸಾಧ್ಯವಾಗಲಿಲ್ಲ. ಪರಂಪರೆಯನ್ನು ಪ್ರಶ್ನಿಸಿ ಧರ್ಮಶ್ರದ್ಧೆಯ ಎಲ್ಲೆಯನ್ನು ಮೀರಿ ನಿಂತರೂ, ಮನುಕುಲಕ್ಕೆ ಅನುಕೂಲವಾಗಬಹುದಾದ ಯಾವುದೇ ಶಾಸ್ತ್ರ - ವಿಜ್ಞಾನ ನಮ್ಮದೇ ದನಿಯಾದಾಗ, ಪ್ರಮಾಣಿತ ಸತ್ಯವಾದಾಗ ಅದನ್ನು ತಡೆಯುವವರಾರು?

ಯಾವ ಕಾಲದ ಶಾಸ್ತ್ರವೇನು ಹೇಳಿದರೇನು, ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೇನು?

ಕುವೆಂಪುರವರ ಈ ಸಾಲುಗಳು ಎಷ್ಟೊಂದು ಅರ್ಥಪೂರ್ಣ. *(ಕೃಪೆ: ಆಕಾಶವಾಣಿ)*

–ಆರ್. ಎಸ್. ರಾಜಾರಾಮ್





SCREEN

DT-SI045AI

CEZANNE

## The Power Scanners for Desktop Prepress

**DiaNippon's Cezanne flat-bed Scanners & 1045AI Drum Scanner:** scan superb details, high contrasts and highlights, with a scanning area of 12x17 inches. It accepts both reflection and transparencies, allows scanning upto 14,000 dpi to produce 2,500% magnifications at 150 lpi

Linotype-Hell

QUASAR.

## Imagesetter Technology of the Future

**Quasar-Drum Imagesetter from Linotype -Hell of Germany:** Ensures hairline accuracy in terms of registration, produces best quality positives without moire and rosettes, using frequency-modulated Diamond screening. It has a Imaging format of 20.7x19.9 inches and supports a screen resolution upto 200 lpi. Also we have world class DiaNippon Screen Katana Imagesetter with a imaging format of 22x40 inches.




## World's fastest Colour Copier & Printer

**Xerox Docucolour 40- Digital Colour Production System:** A four-colour-process that delivers accurate colours,hairline registration and consistent reproduction from a digital file or hard copy at an amazing speed of 40 pages per minute. Ideal for short print runs, digital proofing or copying on paper/ card (64-220 gsm), upto 12" X 18" with a duplexer option (for back to back printing).

---

A Round-the-clock prompt and professional service to handle a variety of graphic file formats.



# Geekay Imaging Pvt. Ltd.

G-7, ChaChe Tower (Mohan Towers), 50, Residency Rd., Bangalore-25.
Telefax: 2270883, 227 7511. E-mail:geekay @ bgl.vsnl.net.in




# ಈ ಗಡಿಯಾರಗಳ ಪ್ರತಿಯೊಂದು ವೈಶಿಷ್ಟ್ಯವೂ ಅಂತರರಾಷ್ಟ್ರೀಯ

(ಬೆಲೆಯನ್ನು ಹೊರತುಪಡಿಸಿ!)

ಪ್ರತಿಯೊಂದು ಎಚ್‌ಎಮ್‌ಟಿ ಟೆನ್‌ಮ್ಯಾಕ್ಸ್ ಅಂತರರಾಷ್ಟ್ರೀಯ ಕ್ವಾರ್ಟ್ಸ್ ಗಡಿಯಾರವೂ ವಿಶ್ವವಿಖ್ಯಾತ ಶೈಲಿ, ಗುಣಮಟ್ಟ ಹಾಗೂ ತಂತ್ರಜ್ಞಾನಗಳ ಅಪರಿಮಿತ ಸಂಯೋಜನೆಯ ಚಿಹ್ನೆಯಾಗಿದೆ. 200ಕ್ಕೂ ಹೆಚ್ಚು ಮಾಡೆಲ್‌ಗಳಲ್ಲಿ, ಕೇವಲ ರೂ. 350/-ಕ್ಕೂ ಮೇಲ್ಪಟ್ಟ ಬೆಲೆಗಳಲ್ಲಿ, ಇದು ನಿಮ್ಮ ಫ್ಯಾಷನ್ ಗಡಿಯಾರವಾಗಿ ಅತ್ಯುತ್ತಮ, ಅತ್ಯುತ್ಕೃಷ್ಟ ಆಯ್ಕೆ.




ಅಂತರರಾಷ್ಟ್ರೀಯ ಕ್ವಾರ್ಟ್ಸ್ ಗಡಿಯಾರಗಳು

ಎಲ್ಲಾ ಎಚ್‌ಎಮ್‌ಟಿ ಕಂಪನಿ, ಎಕ್ಸ್‌ಕ್ಲೂಸಿವ್ ಹಾಗೂ ಟೈಂ ಆರ್ಟ್ ಷೋರೂಮ್‌ಗಳಲ್ಲಿ ಹಾಗೂ ಅಂಗೀಕೃತ ಮಾರಾಟ ಮಳಿಗೆಗಳಲ್ಲಿ ಲಭ್ಯ.

MASS/HMT/1558-99

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001.